# ಆಸರೆಯು ಬೇಡಿ

ಪದ್ಮಾ ಶ್ರೀಧರ್

ಮಂಜುಶ್ರೀ ಪ್ರಕಾಶನ
16 ನೇ ಮೆಯಿನ್, ಕಾಮಾಕ್ಷಿ ಆಸ್ಪತ್ರೆ ರಸ್ತೆ,
ಸರಸ್ವತಿಪುರಂ, ಮೈಸೂರು 570009

**ASAREYA BEDI**- A social novel by Smt **Padma Sreedhar**, 1248, HIG, 7th B Cross, KHB Colony, New Town, Yalahanka, Bangalore 560064, (Ph. 8565466) and published by M/S MANJUSHREE PRAKASHANA, 16th Main, Behind Kuvempu High School, Kamakshi Hospital Road, Saraswathipuram, Mysore 570009. Pp 200.

First publication: **2003**
ISBN-81-86675-23-X


Price: **Rs.96/-**

D. T. P: KUM. M V LATHA,
KANIVE COMPUTERS, MYSORE-9

Impression at: Vagle Offset Printers, BANGALORE

# ಲೇಖಕರ ಮಾತು

ಪ್ರಿಯ ಓದುಗರೆ,

' **ಮಂಗಳಾ** ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು ಅನೇಕ ಓದುಗರ ಮೆಚ್ಚುಗೆಯನ್ನು ಪ್ರಶಂಸೆಯನ್ನು ಗಳಿಸಿ ಇದೀಗ, ಪುಸ್ತಕ ರೂಪದಲ್ಲಿ ಪ್ರಕಟಗೊಳ್ಳುತ್ತಿದೆ.

ಇದರಲ್ಲಿ ಬರುವ ಪಾತ್ರಗಳಲ್ಲಿ ಕೆಲವು ನಾನು ಸ್ವಂತವಾಗಿ ಕಂಡಿದ್ದಾದರೂ, ಮುಖ್ಯವಾಗಿ, ಈ ಕಾದಂಬರಿಯ ಪ್ರೇರಣೆ, ನನ್ನ ಸೋದರತ್ತೆ ಸೀತಮ್ಮನವರು. ಅವರಿ ಈಗ ನಮ್ಮೊಡನಿಲ್ಲ. ಆದರೂ, ಅವರು ಬದುಕಿದ್ದಷ್ಟೂ ಕಾಲವೂ ನಮಗೆಲ್ಲಾ ಆತ್ಮೀಯ ರಾಗಿದ್ದವರು. ಅವರನ್ನು ನಾವು ಎಂದಿಗೂ ಮರೆಯುವಂತೆಯೇ ಇಲ್ಲ. ಕಲಾ ಕುಶಲತೆಗಳಲ್ಲಿ, ಅಡಿಗೆ ಕೆಲಸಗಳಲ್ಲಿ ಜಾಣರಾಗಿದ್ದರು. ಬಾಲ ವಿಧವೆಯಾಗಿ, ತಮ್ಮ ಆಸೆ ಆಕಾಂಕ್ಷೆಗಳನ್ನು ತಮ್ಮಲ್ಲೇ ಹುದುಗಿಟ್ಟುಕೊಂಡು, ಅಣ್ಣ ತಮ್ಮಂದಿರ ಮನೆಯಲ್ಲಿತಮ್ಮ ಬಾಳನ್ನು ಸವೆಸಿದವರ ಮನೋರಂಗವಲ್ಲಿ ಏನೇನು ಅಡಗಿದ್ದವು ಎನ್ನುವುದು ಯಾರಿಗೂ ತಿಳಿಯದು. ಸಂಪ್ರದಾಯಸ್ಥರ ಮನೆಯಲ್ಲಿ ಹುಟ್ಟಿದವರಾಗಿದ್ದ ಅವರಿಗೆ ಯಾವ ಸ್ವತಂತ್ರವೂ ಇರಲಿಲ್ಲ. ಅವರ ಮನೋ ಸ್ಥಿತಿ ಹೇಗಿರಬಹುದು ಅಂತ ಯಾರಿಂದಲೂ ಊಹಿಸಲು ಸಾಧ್ಯವಿಲ್ಲ.

ಆದರೂ ಕಾಲ ಬದಲಾಗಿದ್ದರೂ, ವಿಧವಾ ವಿವಾಹ ಸುಲಭವಲ್ಲ. ವಿಧುರನಿಗೆ ಎಷ್ಟೇ ಸುಲಭದಲ್ಲಿ ಮರು ಮದುವೆ ಆಗುತ್ತದೋ, ಅಷ್ಟೇ ಸಮಸ್ಯೆಗಳು ಉದ್ಭವವಾಗುತ್ತವೆ ವಿಧವೆಯ ಮರು ಮದುವೆಯ ಸಮಯದಲ್ಲಿ.

ಈ ವಿಷಯವನ್ನು ಆಧಾರವಾಗಿಟ್ಟುಕೊಂಡು, ನಾನು ಕೇಳಿದ ಕಂಡ ಪಾತ್ರಗಳನ್ನು ಕಣ್ಣಮುಂದೆ ತಂದುಕೊಂಡು, ಈ ಕಾದಂಬರಿಯನ್ನು ಬರೆಯುವ ಪ್ರಯತ್ನ ಮಾಡಿದ್ದೇನೆ. ಪಾತ್ರಗಳನ್ನು ಕಲ್ಪನೆಯ ಮೆರುಗಿನಲ್ಲಿ ಹೊರಳಿಸಿ, ಅರಳಿಸಿ, ಒಂದು ಆವರಣದ ಚೌಕಟ್ಟಿನೊಳಗೆ ರಚಿಸಿ, ' **ಆಸರೆಯ ಬೇಡಿ** ' ಎಂದು ನಾಮಕರಣ ಮಾಡಿ, ಓದುಗರ ಮುಂದೆ ಇಟ್ಟೆ.

ಸ್ತ್ರೀಯರು ಸ್ವತಂತ್ರವಾಗಿರಲು ಸಾಧ್ಯವಿಲ್ಲ. ಆಸರೆಯ ಅಗತ್ಯ ಬೇಕೇ ಬೇಕು ಎಂಬ ಅರ್ಥವಲ್ಲ. ಕೆಲವು ಕಾರಣಗಳು, ಕೆಲವು ಆಸೆಗಳು, ಆಸರೆಯನ್ನು ಅಪೇಕ್ಷಿಸುತ್ತವೆ. ಆ ನಿಟ್ಟಿನಲ್ಲಿ ಬರೆದ ಕಾದಂಬರಿ ಇದು.

ಮತ್ತೊಮ್ಮೆ ಕಾದಂಬರಿಯನ್ನು ಓದುಗರ ಮುಂದೆ ಇಡಲು ಸಹಾಯಕರಾದ, **ಮಂಜುಶ್ರೀ ಪ್ರಕಾಶನದ** ಬಳಗದವರಿಗೆ ನಾನು ಆಭಾರಿ. ಅವರೆಲ್ಲರಿಗೂ ನನ್ನ ಕೃತಜ್ಞತೆಗಳು.

ವಂದನೆಗಳೊಂದಿಗೆ,

೮–೩–೨೦೦೨ ಇತಿ ತಮ್ಮ ವಿಶ್ವಾಸಿ
ಬೆಂಗಳೂರು –ಪದ್ಮಾ ಶ್ರೀಧರ್

# ಅರ್ಪಣೆ

ನಮ್ಮೆಲ್ಲರ ಅಚ್ಚು ಮೆಚ್ಚಿನ ಸೋದರತ್ತೆಯಾಗಿ,
ತಮ್ಮ ಸಿಹಿ ಕಹಿಗಳನ್ನು ನಮ್ಮೊಡನೆ ಹಂಚಿಕೊಂಡು,
ಐವತ್ತಾರು ವರ್ಷಗಳ ಕಾಲ ನಮ್ಮೊಡನೆ ಬಾಳಿದ

**ದಿ|| ಸೀತಕ್ಕನವರಿಗೆ,**

ಶ್ರದ್ಧಾಪೂರ್ವಕವಾಗಿ
ಈ ಕಾದಂಬರಿಯನ್ನು
ಸಮರ್ಪಿಸುತ್ತೇನೆ.

# ಆಸರೆಯ ಬೇಡಿ

ಮೆಡಿಕಲ್ ಸ್ಟೋರ್‌ಗೆ, ಔಷಧಿಕೊಳ್ಳಲೆಂದು ಬಂದಿದ್ದ ಸುಧಾಕರ ರಾಯರು ಇದ್ದಕ್ಕಿದ್ದಂತೆ ನಿಂತಲ್ಲೇ ಕುಸಿದು ಬಿದ್ದಾಗ ಶ್ರೀಕಾಂತ ಗಾಬರಿಯಾದ. "ಏನಾಯ್ತು ಸಾರ್?" ಎನ್ನುತ್ತಾ ಸರಸರನೆ ಅಂಗಡಿಯಿಂದ ಹೊರಕ್ಕೆ ಬಂದ. ಎದೆಯ ಮೇಲೆ ಕೈಯನ್ನಿಟ್ಟುಕೊಂಡು, ಮುಖ ಕಿವುಚಿ ನರಳುತ್ತಾ ಬಿದ್ದಿದ್ದವರನ್ನು ನೋಡಿ ಮೈ ಮುಟ್ಟಿ ಎಬ್ಬಿಸಲೂ ಹೆದರಿಕೆ ಆಯಿತು. ಅಷ್ಟಲ್ಲಿ ಪಕ್ಕದ ಅಂಗಡಿಯಿಂದ ಬಂದು ನಿಂತಿದ್ದ ಹುಡುಗನಿಗೆ ತಕ್ಷಣವೇ ಹತ್ತಿರದಲ್ಲಿದ್ದ ಡಾಕ್ಟರನ್ನು ಕರೆತರಲು ಹೇಳಿದ. ಪಕ್ಕದ ರಸ್ತೆಯ ತಿರುವಿನಲ್ಲಿದ್ದ ಡಾಕ್ಟರನ್ನು ಆ ಹುಡುಗ ಕರೆತಂದ. ಅವರು ಸುಧಾಕರ ರಾಯರನ್ನು ನೋಡುತ್ತಿದ್ದಂತೆಯೇ, ಹಾರ್ಟ್ ಅಟ್ಯಾಕ್ ಆಗಿರಬಹುದು. ಈ ತಕ್ಷಣವೇ ಅವರನ್ನು ಯಾವುದಾದರೂ ನರ್ಸಿಂಗ್‌ಹೋಂಗೆ ಸೇರಿಸಬೇಕೆಂಬ ಸಲಹೆಯನ್ನು ನೀಡಿದಾಗ, ಶ್ರೀಕಾಂತ ಕಕ್ಕಾಬಿಕ್ಕಿಯಾದ.

"ಏನಾದ್ರೂ ಇಂಜೆಕ್ಷನ್......" ಎಂದು ಅವನು ಕೇಳುವಷ್ಟರಲ್ಲೇ ಅವರು ನುಡಿದಿದ್ದರು "ಇವರು ಹೃದ್ರೋಗಿ ಇರಬಹುದು. ನಾನು ಚೈಲ್ಡ್ ಸ್ಪೆಷಲಿಸ್ಟ್. ತಡ ಮಾಡಬೇಡಿ. ಆದಷ್ಟು ಬೇಗ ಆಸ್ಪತ್ರೆಗೆ ಸೇರಿಸಬೇಕು. ಬೇಕಾದರೆ ನನ್ನ ಕಾರಲ್ಲಿ ಕರೆದುಕೊಂಡು ಹೋಗಿ" ಎಂದು ಕಾರಿನ ಕೀಯನ್ನು ಶ್ರೀಕಾಂತನ ಕೈಗಿತ್ತಾಗ ಅವನು ತಬ್ಬಿಬ್ಬು. ಅಷ್ಟರಲ್ಲಾಗಲೇ ನಾಲ್ಕಾರು ಜನ ಸೇರಿದ್ದರು. ಎದುರಿಗಿದ್ದ ಫೋಟೋ ಸ್ಟುಡಿಯೋ ನಡೆಸುತ್ತಿದ್ದ ಮಹೇಶ ಓಡಿಬಂದಿದ್ದ.

"ಏನಾಯ್ತೋ ಶ್ರೀಕಾಂತ..... ಯಾರು ಇವರು?" ಮಹೇಶ ಕೇಳಿದ.

"ಯಾರೂಂತ ನನಗೂ ಸರಿಯಾಗಿ ಗೊತ್ತಿಲ್ಲ. ಆಗಾಗ್ಗೆ ಔಷಧಿ ತಗೋಳ್ಳೋಕೆ ಬರ್ತಾರೆ, ಅಷ್ಟು ಗೊತ್ತು. ಈಗ ಇವರನ್ನು ಯಾವುದಾದರೂ ನರ್ಸಿಂಗ್‌ಹೋಂಗೆ ಸೇರಿಸಬೇಕು. ನಿನಗೆ ಡ್ರೈವಿಂಗ್ ಬರುತ್ತಾ?"

"ಹೂಂ. ಬರುತ್ತೆ. ಆದರೆ ನನ್ನ ಹತ್ತಿರ ಕಾರೆಲ್ಲಿದೆ?"

"ನೋಡು, ಪಕ್ಕದಲ್ಲಿ ಕ್ಲಿನಿಕ್ ಇದೆಯಲ್ಲಾ ಅಲ್ಲಿಯ ಡಾಕ್ಟರು ಅವರ ಕಾರನ್ನು ತಗೊಂಡು ಹೋಗಬಹುದು ಅಂತ ಅಂದಿದ್ದಾರೆ. ಸ್ವಲ್ಪ ಹೆಲ್ಪ್ ಮಾಡ್ತೀಯಾ?" ಎನ್ನುತ್ತಾ ಕೀಯನ್ನು ಅವನ ಕೈಗಿತ್ತ.

"ಹೂಂ ಎಂದ ಮಹೇಶ. ಇಬ್ಬರೂ ಸೇರಿ, ಸುಧಾಕರನನ್ನು ಎತ್ತಿ

ಕಾರಿನಲ್ಲಿ ಮಲಗಿಸಿದರು. ಪಕ್ಕದ ಅಂಗಡಿಯವರಿಗೆ, ಸ್ವಲ್ಪ ಅಂಗಡಿಯನ್ನು ನೋಡಿಕೊಳ್ಳಿ ಎಂದು ಹೇಳಿ, ಸುಧಾಕರ ರಾಯರನ್ನು ಒರಗಿಸಿಕೊಂಡು ಕೂತ. ಮಹೇಶ ನಿಧಾನವಾಗಿ ಕಾರನ್ನು ನಡೆಸಿದ.

ಸಮೀಪದಲ್ಲಿದ್ದ ನರ್ಸಿಂಗ್ ಹೋಂಗೆ ಸೇರಿಸಿ, ನಡೆದ ವಿಷಯಗಳನ್ನು ತಿಳಿಸಿ, ತನ್ನ ವಿಳಾಸ ಹಾಗೂ ಫೋನ್ ನಂಬರನ್ನು ಕೊಟ್ಟು ಶ್ರೀಕಾಂತ ಮಹೇಶನೊಂದಿಗೆ ವಾಪಸ್ಸು ಬಂದ. ಶ್ರೀಕಾಂತನ ಕಂದಿದ ಮುಖವನ್ನು ಕಂಡು ಮಹೇಶ ಅಲ್ಲಿಯೇ ಉಳಿದ. ಸ್ವಲ್ಪ ಹೊತ್ತಿನಲ್ಲಿಯೇ ಫೋನ್ ಟ್ರನ್‌ಗುಟ್ಟಿತು. ನರ್ಸಿಂಗ್ ಹೋಂನಿಂದ ಫೋನ್ ಮಾಡಿದ್ದರು."

"ಪೇಶೆಂಟ್ ನಿಮ್ಮನ್ನು ನೋಡಬೇಕು, ಅಂತ ಕೇಳ್ತಾ ಇದ್ದಾರೆ. ಸ್ವಲ್ಪ ಬನ್ನಿ" ಅಂತ. ಮಹೇಶನಿಗೆ ವಿಷಯ ತಿಳಿಸಿದ. ಮಹೇಶ ನಕ್ಕ.

"ನೋಡು. ಆಗೋದೇ ಹೀಗೆ. ಯಾರೋ ಗುರುತು ಪರಿಚಯ ವಿಲ್ಲದವರಿಗೆ ಹೆಲ್ಪ್ ಮಾಡಿದ್ರೆ ಅವರು ಅದನ್ನೇ ಕಾರಣವನ್ನಾಗಿಟ್ಟುಕೊಂಡು ಹಣ ಕೇಳ್ತಾರೆ."

"ಹಣ ಯಾಕೆ ಕೇಳ್ತಾರೆ? ನೋಡಿದ್ರೆ ಶ್ರೀಮಂತರ ತರಹ ಕಾಣ್ತಾರೆ"

"ಶ್ರೀಮಂತನೋ ಬಡವನೋ ಅಂತ ಮುಖ ನೋಡಿದ್ರೆ ತಿಳಿಯೋಲ್ಲ. ಮಾತನಾಡಿದಾಗ ತಿಳಿಯುತ್ತೆ. ಈಗೇನು ಮಾಡ್ತೀಯಾ?"

"ಮೊದಲು ಹೋಗಿ ಏನು ವಿಷಯ ಅಂತ ನೋಡೋಣ" ಎನ್ನುತ್ತಾ ಅಂಗಡಿಯ ಬಾಗಿಲು ಹಾಕಿ, ಕಾರಿನ ಕೀಯನ್ನು ಡಾಕ್ಟರಿಗೆ ಕೊಟ್ಟು ಬಂದ. ಮತ್ತೆ ಮಹೇಶನನ್ನು ಹೊರಡಿಸಿಕೊಂಡು ತನ್ನ ಸ್ಕೂಟರನ್ನು ಏರಿದ.

ನರ್ಸಿಂಗ್‌ಹೋಂಗೆ ಬಂದಾಗ ಡಾಕ್ಟರು ಅವನಿಗಾಗಿಯೇ ಕಾಯುತ್ತಿದ್ದರು.

"ಅವರಿಗೆ ಮೈಲ್ಡ್ ಆಗಿ ಹಾರ್ಟ್‌ಆಟ್ಯಾಕ್ ಆಗಿದೆ. ಆದರೂ ಅವರು ಒಂದು ದಿನ ಇಲ್ಲಿರಬೇಕಾಗುತ್ತದೆ. ಅವರು ತಾವು ಇಲ್ಲಿರಲು ಆಗುವುದಿಲ್ಲ ಎಂದು ಗಲಾಟೆ ಮಾಡುತ್ತಿದ್ದಾರೆ. ನೀವು ಸ್ವಲ್ಪ ಹೇಳಿ"

"ಹೇಳ್ತೀನಿ. ಅವರು ಯಾರು? ಅವರ ಮನೆ ಎಲ್ಲಿ ಅಂತ ತಿಳೀತಾ?"

"ಅವರು ಅದನ್ನೆಲ್ಲ ನಿಮಗೇ ತಿಳಿಸ್ತೀನಿ ಅಂತ ಹಠ ಮಾಡ್ತಿದ್ದಾರೆ. ನೀವು ಸ್ವಲ್ಪ ನಯವಾಗಿ ಮಾತನಾಡಿ ವಿಷಯ ತಿಳಿದುಕೊಳ್ಳಿ. ಅವರ ಮನೆಯವರಿಗೆ ತಿಳಿಸೋಣ" ಶ್ರೀಕಾಂತ ತಲೆಯಾಡಿಸಿ ಅವರಿದ್ದವಾರ್ಡ್ ಕಡೆಗೆ ನಡೆದರು.

ಸುಧಾಕರರಾವ್ ನಿವೃತ್ತ ಅಧಿಕಾರಿಗಳು. ಚೆನ್ನಾಗಿ ಹಣ ಸಂಪಾದಿಸಿ

ಕೊಡಿಟ್ಟವರು. ಆದರೆ ಸುಖ ನೆಮ್ಮದಿಯನ್ನು ಮಾತ್ರ ಗಳಿಸಲಾಗಿರಲಿಲ್ಲ. ಒಂಟಿತನದಲ್ಲಿ ಸಾಕಷುಟ ಬಳಲಿ ಹೋಗಿದ್ದಾರೆ. ಮನೆಯಲ್ಲಿ ಅವರ ಯೋಗಕ್ಷೇಮವನ್ನು ನೋಡಿಕೊಳ್ಳಲು ಅಡಿಗೆಯಾಕೆಯ ಹೊರತುಯಾರಿಲ್ಲ. ಆಕೆ ನೆಮ್ಮದಿಗೆ ಭಂಗ ತಂದಳೇನೋ ಅಂತ ಅನ್ನಿಸುವಾಗ ಅವಳ ಮೇಲೆ ಕೋಪ ಬರುವುದೂ ಉಂಟು. ಆದರೆ ಅವಳನ್ನು ಅವಳನ್ನು ದೂಷಿಸಲಾರರು. ಪಾಪ, ಅವಳಿಗೂ ಯಾರಿಲ್ಲ. ನನ್ನ ಆಶ್ರಯಬಯಸಿ ಬಂದಿದ್ದಾಳೆ. ಅವಳಿಗೆ ನಾನೇದಿಕ್ಕು ಎಂದೂ ಸಹ ಆಲೋಚಿಸುವರು. ಆದರೆ ಮರೆಯಲಾಗದ ನೋವನ್ನು ತಂದಿತ್ತ ಮಗಳನ್ನು ಮಾತ್ರ ಕ್ಷಮಿಸಲಾರರು. ಎಲ್ಲಿದಾಳೋ ಹೇಗಿದ್ದಾಳೋ ಅಂತನ್ನಿಸಿದಾಗ ವ್ಯಥೆಯಾದರೂ, ಅವಳನ್ನು ಹುಡುಕಿಸುವ ಪ್ರಯತ್ನ ಮಾಡಿರಲಿಲ್ಲ. ತಮ್ಮ ಸ್ವಂತ ಮಗಳು ಒಂದಲ್ಲ ಒಂದು ದಿನ ಅವಳಾಗಿಯೇ ವಾಪಸ್ಸು ಬರಲಿ ಎಂದು ಬಯಸುವರು. ಆದರೆ ಅವಳು ಮಾತ್ರ ಇದುವರೆಗೂ ಬಂದಿರಲಿಲ್ಲ. ಅವಳಿಗೂ ಎಷ್ಟು ಹಠ ಅಂತ ಅಂದುಕೊಂಡಾಗ ತಮ್ಮ ಮಗಳೇ ಅಲ್ಲವೇ ಅಂತನ್ನಿಸದೇ ಇರಲಿಲ್ಲ.

"ಹೆಂಡತಿ ಸರೋಜ ಆಗಾಗ್ಗೆ ಅದೇ ಮಾತನ್ನು ಹೇಳುತ್ತಿದ್ದಳು. ನಿಮ್ಮ ಮಗಳು ನಿಮ್ಮ ಹಾಗೇ ಹಠವಂತೆ. ನಿಮಗೆ ಬುದ್ಧಿಕಲಿಸದೇ ಬಿಡುವವಳಲ್ಲ" ಅಂತ.

"ನಾನು ಗಂಡಸು, ಅಲ್ಲದೇ ದೊಡ್ಡವನು. ಅವಳಿನ್ನು ಹುಡುಗಿ, ಅವಳಿಗೆ ತಿಳುವಳಿಕೆ ಹೇಳ ಬೇಕು. ಅವಳದ್ದೇ ಮಾತು ನಡೆಯಬೇಕೆಂಬ ಹಠವೇನೂ ಇಲ್ಲ. ಹಾಳಾಗಿ ಹೋಗ್ತಾಳೆ ಅಷ್ಟೆ."

ಆ ಮಾತು ನಿಜವಾಗಿ ಹೋಯ್ತೋ ಏನೋ..... ಎಲ್ಲೋ ಹಾಳಾಗಿ ಹೋಗಿದ್ದಾಳೆ. ತಂದೆಯಾಗಿ ನಾನು ಮಗಳನ್ನು ಹಾಳಾಗಿ ಹೋಗಲು ಬಿಡಬಾರದಾಗಿತ್ತೋ ಏನೋ ಅಂತನ್ನಿಸಿದಾಗ, ಎದೆ ಭಾರವಾಗಿತ್ತು. ಆದರೆ ಆ ದಿನ? ಆ ದಿನವನ್ನು ಅವರು ಜೀವಮಾನವೆಲ್ಲಾ ಮರೆಯುವಂತೆಯೇ ಇಲ್ಲ. ತನ್ನೆದುರಿಗೆ ನಿಂತು, ತನ್ನ ಮರ್ಯಾದೆ ಹೋಗುವಂತೆ ಎಷ್ಟು ಮಾತನಾಡಿಬಿಟ್ಟಳಲ್ಲ. ಅದನ್ನೆಲ್ಲ ಯಾರು ಹೇಳಿಕೊಟ್ಟರೋ? ತಾಯಿಯಿಲ್ಲದ ಹುಡುಗಿ, ಅಷ್ಟು ವರ್ಷಗಳಲ್ಲಿ ಹೀಗೆ ಬೆಳೆದಿರಬಹುದು ಅಂತ ತಾನಂತೂ ಯೋಚಿಸಿರಲಿಲ್ಲ.

ಜೀವನದಲ್ಲಿ ತಾನು ಯೋಚಿಸಿದ್ದೇ ಒಂದು. ನಡೆದದ್ದೇ ಇನ್ನೊಂದು. ಹಾಗೇಕಾಯಿತೋ? ಆ ಅಪಘಾತ ಒಂದು ನಡೆಯದೇ ಇದ್ದಿದ್ದರೇ?

ಹೊಸದಾಗಿ ಕೊಂಡ ಕಾರಿನಲ್ಲಿ ಎಲ್ಲಾ ಕಡೆಯೂ ಸುತ್ತಿಬರುವ ಆಸೆ. ಹಾಗೆ ಒಂದು ಸಾರಿ ಹೋಗಿದ್ದಾಗ, ಪಕ್ಕದ ಸೀಟಿನಲ್ಲಿ ತನ್ನ ತೊಡೆಯ ಮೇಲೆ ಚಿಕ್ಕ ಮಗಳನ್ನು ಕೂರಿಸಿಕೊಂಡು ಕೂತಿದ್ದ ಸರೋಜ, ಕಾರಿನ ಬಾಗಿಲನ್ನು ಸರಿಯಾಗಿ ಹಾಕಿ ಕೊಂಡಿರಲಿಲ್ಲವೇನೋ. ತಿರುವಿನಲ್ಲಿ ಕಾರು ತಿರುಗಿದಾಗ, ಬಾಗಿಲು ತೆಗೆದುಕೊಂಡಿತ್ತು. ತಾಯಿ ಮಗಳು ಇಬ್ಬರೂ ಕೆಳಗೆ ಬಿದು ಹತ್ತಾರು ಅಡಿ ಕೆಳಕ್ಕೆ ಉರುಳಿಬಿದ್ದಿದ್ದರು. ಏನಾಯಿತೆಂದು ಅರ್ಥವಾಗಿ ಕಾರನ್ನು ನಿಲ್ಲಿಸುವ ಹೊತ್ತಿಗೆ ಹಿಂದೆ ಬರುತ್ತಿದ್ದ ವಾಹನಗಳು ನಿಂತವು. ಜನ ಸೇರಿದರು. ಕಾರಿನ ಹಿಂದಿನ ಸೀಟಿನಲ್ಲಿ ಕೂತಿದ್ದ ತಾಯಿ, ತಂದೆ, ದೊಡ್ಡ ಮಗಳು ವಸುಧಾ ಎಲ್ಲರೂ ಗಾಬರಿಯಿಂದ ಕಿರುಚಿಕೊಂಡಿದ್ದರು.

ಕೆಳಗೆ ಬಿದ್ದಿದ್ದ ಬಾಡಿಗಳನ್ನು ತೆಗೆಸುವುದಕ್ಕೇ ಸಾಕಷ್ಟು ಸಮಯ ತೆಗೆದುಕೊಂಡಿತ್ತು. ಆಕ್ಸಿಡೆಂಟ್ ಕೇಸ್ ಆದುದರಿಂದ ಪೊಲೀಸಿನವರು ಬಂದು ಮುಂದಿನ ಕೆಲಸಗಳನ್ನೆಲ್ಲಾ ನೋಡಿಕೊಂಡಿದ್ದರೂ, ಸುಧಾಕರ ಜರ್ಝರಿತನಾಗಿದ್ದ. ಕೆಲವೇ ನಿಮಿಷಗಳ ಹಿಂದೆ ತನ್ನ ಪಕ್ಕ ಕುಳಿತು ತನ್ನ ಮಗುವಿನೊಡನೆ ಲಲ್ಲೆಗರೆಯುತ್ತಿದ್ದ ತನ್ನ ಪತ್ನಿ ಇನ್ನು ಬದುಕಿಲ್ಲ ಎಂದು ನಂಬುವುದೇ ಕಠಿಣ ಅನ್ನಿಸಿತ್ತು. ಷಾಕ್‌ನಿಂದ ಬೆರಗಾಗಿ ನಿಂತಿದ್ದ ವಸುಧಾಳ ಬಗ್ಗೆ ಚಿಂತೆಯಾಗಿತ್ತು. ತಾಯಿಯನ್ನು ಸಮಾಧಾನಗೊಳಿಸುವುದು ಕಷ್ಟವಾಗಿತ್ತು. ನಗುನಗುತ್ತಾ ಮನೆಯಿಂದ ಹೊರಟಿದ್ದವರು, ದುಃಖದಿಂದ ತಲೆತಗ್ಗಿಸಿ ಮನೆಯೊಳಗೆ ಬರುತ್ತಿದ್ದಂತೆಯೇ, ಅಕ್ಕಪಕ್ಕದವರು, ಸ್ನೇಹಿತರು, ನೆಂಟರಿಷ್ಟರುಗಳು ಬಂದು ಸೇರಿ, ತಮ ತಮಗೆ ತೋಚಿದಂತೆ ಮಾತನ್ನಾಡಿ ದುಃಖವನ್ನು ಮತ್ತಷ್ಟು ಹೆಚ್ಚಿಸಿದ್ದರು.

ಆ ಸಮಯದಲ್ಲಿ ವಸುಧಾ ತಂದೆಯನ್ನು ದೂರ ಮಾಡಿ ದ್ವೇಷಿಸಲಾರಂಭಿಸಿದಳು. ತಾಯಿಯ ಸಾವಿಗೆ ಕಾರಣ, ತನ್ನ ತಂದೆಯೇ ಎಂದು ಮನಸ್ಸಿಗೆ ನಾಟಿಬಿಟ್ಟಿತ್ತು. ತಾನೀಗ ತಾಯಿಯಿಲ್ಲದ ತಬ್ಬಲಿ. ಅನಾಥೆ, ತನ್ನನ್ನು ಸಾಕುವವರ್‍ಯಾರು ಎನ್ನುವ ದುಃಖ ಅವಳದು. ಅಜ್ಜಿಯ ಪ್ರೀತಿಯ ಮಾತುಗಳು ಅವಳ ಕಿವಿಯನ್ನು ತಲುಪುತ್ತಿರಲಿಲ್ಲ. ಆ ಸಮಯದಲ್ಲಿ ಅವಳಿಗೆ ಹತ್ತಿರವಾದವಳು ಅಡಿಗೆಯ ಕಾಮಾಕ್ಷಮ್ಮ. ಪಾಪ! ಬೆಳೆಯುವ ಹುಡುಗಿಗೆ ಎಂಥ ಸ್ಥಿತಿ ಬಂದಿತಲ್ಲ ಎಂದುಕೊಂಡು ಕನಿಕರಗೊಂಡು ತನ್ನ ಹತ್ತಿರ ಕೂರಿಸಿಕೊಂಡು, ಮಾತನಾಡಿಸುತ್ತಿದ್ದಳು.

"ಅಲ್ಲ, ಕಾಮಾಕ್ಷಮ್ಮ, ನಮ್ಮ ಅಮ್ಮನೇ ಏಕೆ ಸಾಯಬೇಕಾಗಿತ್ತು?

ಅಜ್ಜಿ ಸತ್ತಿದ್ದರೆ ಏನಾಗುತ್ತಿತ್ತು! ಅವರು ಅಮ್ಮನಿಗಿಂತ ದೊಡ್ಡವರಲ್ಲವಾ?" ಅಂತ ಪ್ರಶ್ನಿಸಿದಾಗ ನಗಬೇಕೋ ಬೇಡವೋ ತಿಳಿಯುತ್ತಿರಲಿಲ್ಲ.

"ನಿಮ್ಮ ಅಮ್ಮನ್ನ ಕಂಡರೆ ದೇವರಿಗೆ ತುಂಬಾ ಇಷ್ಟವಾಗಿರಬೇಕು. ಅದಕ್ಕೇ ಕರೆದುಕೊಂಡು ಹೋಗಿದ್ದಾನೆ" ಆಕೆ ಸಮಾಧಾನ ಹೇಳುತ್ತಿದ್ದರು.

"ಅಮ್ಮನ್ನ ಕಂಡರೆ ನನಗೂ ಇಷ್ಟವಿತ್ತು. ಆ ದೇವರು ನನ್ನ ಹತ್ತಿರಾನೇ ಬಿಡಬಹುದಾಗಿತ್ತಲ್ಲ" ಈ ಮಾತಿಗೆ ಕಾಮಾಕ್ಷಮ್ಮ ಏನು ಹೇಳಿಯಾರು? ಆದರೂ ಅವಳನ್ನು ಸಮಾಧಾನಗೊಳಿಸಂತೆ,

"ನಿನಗೆ ಅಮ್ಮ ಬೇಕಲ್ವಾ.... ಅಮ್ಮನ್ನ ತಂದ್ರಾಯ್ತು. ನಿನ್ನ ಅಪ್ಪನಿಗೆ ಹೇಳೋಣ....."

"ಸತ್ತು ಹೋದವರನ್ನು ಮತ್ತೆ ಕರೆದುಕೊಂಡು ಬರೋಕ್ಕಾಗಲ್ಲ ಅಂತ ನಿಮಗೆ ಗೊತ್ತಿಲ್ವಾ?" ಜಾಣೆಯಂತೆ ಕೇಳುತ್ತಿದ್ದಳು.

"ಆ ಅಮ್ಮ ಅಲ್ಲ..... ಬೇರೆ ಹೊಸ ಅಮ್ಮನ್ನ...."

"ಹೊಸ ಅಮ್ಮ ನನಗೆ ಬೇಡ" ಎಂದು ಗಟ್ಟಿಯಾಗಿ ಕಿರುಚಿ ಅಲ್ಲಿಂದ ಓಡಿಹೋಗಿದ್ದಳು. ಮತ್ತೆ ಕಾಮಾಕ್ಷಮ್ಮನೇ ಸಮಾಧಾನ ಮಾಡಿ ಅವಳನ್ನು ಕರೆತಂದು ಊಟ ಮಾಡಿಸುತ್ತಾ ಸಮಾಧಾನ ಮಾಡಿದಳು.

"ಮಾತು ಮಾತಿಗೂ ಹಾಗೆ ಸಿಟ್ಟು ಮಾಡಿಕೋಬಾರದಮ್ಮ. ನಿನಗೆ ಹೊಸ ಅಮ್ಮ ಬೇಡವಾದರೆ ಬೇಡ. ನಾನು ಇದೀನಿ. ಅಜ್ಜಿ ಇದಾರೆ. ಅಪ್ಪ ಇದಾರೆ. ನಾವೆಲ್ಲಾ ನಿನ್ನನ್ನು ನೋಡಿಕೊಳ್ತೀವಿ" ವಸುಧಾ ಊಟ ಮುಗಿಸಿ ಅಲ್ಲಿಯೇ ಮಲಗಿದಳು. ಸುಧಾಕರನ ತಾಯಿ ಬಂದು ಆಕೆಯನ್ನೇ ಆಕ್ಷೇಪಣೆ ಮಾಡಿದಳು.

"ಅವಳಿಗಂತೂ ತಿಳಿಯೋಲ್ಲ ಅಂತಂದ್ರೆ ನಿಮಗೂ ತಿಳಿಯೋಲ್ವ ಕಾಮಾಕ್ಷಮ್ಮ..... ಸೊಳ್ಳೆ ಕಚ್ಚುತ್ತೆ. ಅವಳನ್ನು ಕರೆದುಕೊಂಡು ಹೋಗಿ ಅವಳ ರೂಮಿನಲ್ಲಿ ಮಲಗಿಸಿ ಬನ್ನಿ"

" ಆಯ್ತು " ಎನ್ನುತ್ತಾ ಆಕೆ ಮಲಗಿದ್ದ ವಸುಧಾಳನ್ನು ಎತ್ತಲು ಹೋದಾಗ, ವಸುಧಾ ಅವರ ಕತ್ತಿಗೆ ಜೋತುಬಿದ್ದಳು.

"ನಾನಿಲ್ಲೇ ಮಲಗ್ತೀನಿ. ನನಗೆ ರೂಮಿನಲ್ಲಿ ಒಬ್ಬಳಿಗೇ ಮಲಗೊಕ್ಕೆ ಹೆದರಿಕೆಯಾಗುತ್ತೆ......."

"ಏನೂ ಇಲ್ಲ, ಸುಮ್ಮನೇ ನಡಿ. ನಿದ್ದೆ ಬಂದರೆ ಎಲ್ಲಾ ಸರಿಹೋಗುತ್ತೆ. ಕರೆದುಕೊಂಡು ಬನ್ನಿ ಕಾಮಾಕ್ಷಮ್ಮ....." ಗದರುತ್ತಿದ್ದಳು ಅಜ್ಜಿ.

"ಹಾಗಾದರೆ ನನಗೆ ನಿದ್ದೆ ಬರೋವರೆಗೂ ನೀವು ನನಗೊಂದು ಕತೆ ಹೇಳಬೇಕು. ಆಯ್ತಾ?"

"ಸಧ್ಯ, ನಮ್ಮದೇ ಒಂದು ಕತೆಯಾಗಿದೆ. ನನಗೆ ಯಾವ ಕತೆಯೂ ಬರೋಲ್ಲ. ಸೊಳ್ಳೆ ಪರದೆ ಒಳಗೆ ಬೆಚ್ಚಗೆ ಮಲಕ್ಕೋ. ಒಂದು ಗಳಿಗೇಲಿ ನಿದ್ದೆ ಬರುತ್ತೆ."

"ಇಲ್ಲ ಅಜ್ಜಿ, ಹಾಗಾದ್ರೆ ನಾನು ಇಲ್ಲೇ ಮಲಗ್ತೀನಿ. ಇಲ್ಲದಿದ್ದರೆ ಕಾಮಾಕ್ಷಮ್ಮನೂ ನನ್ನ ಜತೆ ಅಲ್ಲಿ ಮಲಗಲಿ."

"ಥೂ! ಒಳ್ಳೆ ಚೆನ್ನಾಗಿದೆ. ಅವರು ಅಡಿಗೆ ಮನೆ ಕೆಲಸ ಮುಗಿಸಬೇಡವೇ......" ನಮ್ಮದೆಲ್ಲಾ ಇನ್ನೂ ಊಟ ಆಗಿಲ್ಲ.

"ಹೋಗಲಿ ಬಿಡೀಮ್ಮಾ. ಇಲ್ಲೇ ಮಲಗಿರಲಿ. ನಿದ್ದೆ ಬಂದಮೇಲೆ ನಾನೇ ಎತ್ತಿಕೊಂಡು ಹೋಗಿ ಮಲಗಸ್ತೀನಿ"

"ದಿನಾ ಇದೇ ಅಭ್ಯಾಸವಾಗಿ ಹೋಗುತ್ತೆ ಅಷ್ಟೆ. ಸುಧಾಕರನಿಗೆ ಇದೆಲ್ಲ ಸರಿ ಹೋಗೋಲ್ಲ. ನಡೀ ವಸುಧಾ. ಅಪ್ಪ ಬೈತಾನೆ. ನಿನ್ನ ರೂಮಿಗೆ ಹೋಗಿ ನೀನು ಮಲಕ್ಕೋ" ಅಜ್ಜಿ ಆಜ್ಞೆ ಮಾಡುವಂತೆ ಹೇಳಿದಾಗ ವಸುಧಾ ದೊಡ್ಡ ಧ್ವನಿಯಲ್ಲಿ ಅಳತೊಡಗಿದಳು.

"ಏನಾಯ್ತು? ವಸುಧಾ ಏಕೆ ಅಳ್ತಿದಾಳೆ ಅಂತ ಸೋದರತ್ತೆ ಬಂದು ವಿಚಾರಿಸಿದಾಗ, ಅಜ್ಜಿ ನಡೆದುದನ್ನೆಲ್ಲ ತಿಳಿಸಿದಳು."

"ಅಮ್ಮಾ..... ನೀನ್ಯಾಕಮ್ಮಾ ಎಲ್ಲಾ ಮಾತಿಗೆ ಬರ್ತೀಯಾ? ಅವಳೂ ಚಿಕ್ಕವಳೇ.... ಪಾಪ, ತಾಯಿಯ ನೆನಪು ಕಾಡುತ್ತಿರುತ್ತೆ. ಎಲ್ಲೋ ಒಂದು ಕಡೆ ಮಲಗಿದ್ರಾಯ್ತು. ಅದನ್ನೇ ಯಾಕೆ ಹಗರಣ ಮಾಡ್ತೀಯಾ?"

"ಸರಿ, ನೀನು ಬಂದೆಯಾ ನನಗೆ ಬುದ್ದಿ ಹೇಳೋಕ್ಕೆ. ನೀವೆಲ್ಲಾ ಒಂದು. ನಾನೇ ಒಂದು ಅಲ್ವಾ? ಏನು ಬೇಕಾದ್ರೂ ಮಾಡಿಕೊಳ್ಳಿ. ಯಾರಿಗೂ ನನ್ನ ಮಾತೂ ಅಂದ್ರೆ ಲಕ್ಷ್ಯವಿಲ್ಲ. ಈ ಅಡಿಗೆಯವರ ಎದುರಿಗೆ, ಈ ಹುಡುಗಿ ಮುಂದೆ ನನಗೆ ತಿರುಗಿಸಿ ಮಾತನಾಡ್ತೀಯಲ್ಲ. ನಿನಗೆ ಬುದ್ಧಿ ಇದೆಯಾ?" ಎಂದು ಅಲವತ್ತುಕೊಂಡು, ಎಲ್ಲರನ್ನೂ ಕಿಡಿಗಣ್ಣಿನಿಂದ ನೋಡಿ ಅಲ್ಲಿಂದ ನಡೆದಳು.

ಹಾಗಾಗಿ, ವಸುಧಾ ಕಾಮಾಕ್ಷಮ್ಮನ ಸನಿಹದಲ್ಲೇ ಇರತೊಡಗಿದಳು. ಸ್ನಾನ ಮಾಡಿಸಕ್ಕೆ ಅವರು, ತಿಂಡಿ ತಿನ್ನಿಸಕ್ಕೆ ಅವರು, ಸ್ಕೂಲಿಗೆ ಬಿಟ್ಟು ಬರುವುದಕ್ಕೆ ಅವರು, ಹೀಗೆ ಎಲ್ಲಾ ಕೆಲಸಕ್ಕೂ ಅವರೇ ಬೇಕೆಂಬ ಹಠ

ಜಾಸ್ತಿಯಾಗತೊಡಗಿದಾಗ, ಸುಧಾಕರ ತನ್ನ ತಂಗಿಯ ಸಲಹೆಯಂತೆ ಮಗಳನ್ನು ಬೋರ್ಡಿಂಗ್ ಸ್ಕೂಲಿಗೆ ಸೇರಿಸಿದ. ಅಲ್ಲಿಗೂ ಕಾಮಾಕ್ಷಮ್ಮ ತಾವು ಬರುವುದಾಗಿ ಹೇಳಿದ್ದರಿಂದ ವಸುಧಾ ಒಪ್ಪಿಕೊಂಡಳು. ಆದರೆ, ನಂತರ ಅವರು ಅಲ್ಲಿ ಇರುವುದು ಸಾಧ್ಯವಿಲ್ಲ ಅಂತ ತಿಳಿದಾಗ ಬಹಳ ಅತ್ತಿದ್ದಳು.

"ನನಗೆ ನಿಮ್ಮನ್ನು ಬಿಟ್ಟು ಇರೊಕ್ಕೆ ಆಗಲ್ಲ. ನಾನೂ ನಿಮ್ಮ ಜತೆ ಬರ್ತೀನಿ" ಅಂತ.

"ಬೇಡಮ್ಮಾ..... ನೀನಿನ್ನು ಚಿಕ್ಕವಳು. ನೀನು ಓದಬೇಕು, ವಿದ್ಯಾವಂತೆಯಾಗಿ ಸುಖವಾಗಿರಬೇಕು. ನನಗೆ ಬರುವುದು ಬರೀ ಅಡಿಗೆ ಕೆಲಸ. ನೀನು ನನ್ನ ಹಾಗೆ ಆಗಬಾರದು. ಡಾಕ್ಟರಾಗಿ ಹೆಸರು ಗಳಿಸಬೇಕು." ಅವರು ಸಮಾಧಾನ ಹೇಳಿದರೂ ಅವಳ ಅಳು ನಿಂತಿರಲಿಲ್ಲ. ಅಷ್ಟರಲ್ಲಿ ಬೋರ್ಡಿಂಗ್ ಸ್ಕೂಲಿನವರು ಬಲವಂತವಾಗಿ ಅವಳನ್ನು ಒಳಕ್ಕೆ ಎಳೆದುಕೊಂಡು ಹೋಗಿದ್ದರು.

ಆ ನಂತರ ಆ ಮನೆಯಲ್ಲಿ ಅನೇಕ ಮಾರ್ಪಾಟುಗಳಾದವು. ಕಾಮಾಕ್ಷಮ್ಮ ಬೇಸರಗೊಂಡು, ಆ ಮನೆಯನ್ನು ಬಿಟ್ಟು ಹೊರಟುಹೋಗಿದ್ದರು. ತಂದೆ ತಾಯಿ ಇನ್ನೊಬ್ಬ ಮಗನ ಮನೆಗೆ ಹೊರಟು ನಿಂತಿದ್ದರು. ತಂಗಿಯೂ ಹೊರಟು ಹೋಗಿದ್ದಳು.

"ಇನ್ನೆಷ್ಟು ದಿನ ಒಂಟಿಯಾಗಿ ಇರ್ತೀಯಾ? ಯಾರ್‍ಯಾರೋ ಹೆಣ್ಣಿನವರು ಕೇಳಿಕೊಂಡು ಬರ್ತಾ ಇದ್ದಾರೆ. ಸರಿಯಾದವಳೊಬ್ಬಳನ್ನು ನೋಡಿ ಮದುವೆ ಮಾಡಿಕೋ. ನಮ್ಮ ಜವಾಬ್ದಾರಿ ಕಳೆಯುತ್ತೆ" ತಾಯಿ ನುಡಿದಾಗ ಸುಧಾಕರ ತಲೆಯಾಡಿಸಿದ.

"ಬೇಡಮ್ಮಾ ನಾನು ಮದುವೆಯಾಗೊಲ್ಲ. ನಾನು ಸರೋಜಳಿಗೆ ದ್ರೋಹ ಮಾಡಲಾರೆ"

"ಸತ್ತು ಹೋಗಿರುವವಳಿಗೆ ಎಂತಹ ದ್ರೋಹಾನೋ...... ಮನೆ ನೋಡಿ ಕೊಳ್ಳೋಕೆ ಅಂತ ಒಬ್ಬ ಹೆಂಗಸು ಬೇಡವೇ...."

"ಇನ್ನೊಬ್ಬಳು ಅಡಿಗೆಯವಳನ್ನು ಹುಡುಕಿದ್ರಾಯ್ತು."

"ಅಡಿಗೆಯವಳು, ಮನೆಯವಳಾಗುವುದಿಲ್ಲ. ನನ್ನ ಮಾತು ಕೇಳು. ಮತ್ತೆ ಮದುವೆಯಾಗು. ನೀನೂ ಇನ್ನು ಚಿಕ್ಕವನು. ನಿನಗೂ ಒಂದು ಗಂಡು ಮಗುವಾಗಲಿ ಅಂತ ನನಗೂ ಆಸೆ" ತನ್ನ ಆಸೆಯನ್ನು ಪ್ರಕಟಿಸಿದ್ದಳು.

"ನಿನ್ನಾಸೆಗೋಸ್ಕರ ನಾನು ಮದುವೆಯಾಗೊಲ್ಲ. ನೋಡೋಣ. ಆ ಆಸೆ ಬಂದಾಗ ನಾನು ತಿಳಿಸ್ತೀನಿ. ಈಗ ಸುಮ್ಮನಿರು"

“ಎಲ್ಲರಿಗೂ ನನ್ನನ್ನು ದಬಾಯಿಸಿ, ನನ್ನನ್ನು ಸುಮ್ಮನಾಗಿಸುವ ಆಸೆ. ನಿನ್ನ ಹೆಂಡತಿ ಎರಡು ಹೆಣ್ಣುಮಕ್ಕಳನ್ನು ಹೆತ್ತರೂ, ನಾನು ಆಗ ಏನು ಹೇಳಿರಲಿಲ್ಲ. ಈಗ ನೀನು ಇನ್ನೂ ಚಿಕ್ಕವನು.... ಅಂತ ಹೀಗೆ ಹೇಳಿದೆ. ಸರಿ ನಿನ್ನಿಷ್ಟ. ಏನು ಬೇಕಾದ್ರು ಮಾಡಿಕೋ”

“ಸರಿ, ಈಗ್ಯಾಕೆ ನೀನು ಮಧುಕರನ ಮನೆಗೆ ಹೋಗಬೇಕು? ರಜದಲ್ಲಿ ವಸುಧಾ ಮನೆಗೆ ಬರ್ತಾಳೆ. ಆಗ ಅವಳಿಗೂ ಬೇಜಾರಾಗುಲ್ವೇ?”

“ಅದಕ್ಕೇ ನಾನು ಹೇಳಿದ್ದು. ಇನ್ನೊಂದು ಮದುವೆಯಾಗು ಅಂತ.”

“ಇಲ್ಲಮ್ಮ..... ವಸುಧಾಗೆ ಮಲತಾಯಿ ತರುಲ್ಲಮ್ಮಾ”

“ವಸುಧಾ ಹೆಣ್ಣು ಹುಡುಗಿ. ಅವಳು ಬೆಳೀತಾ ಬೆಳೀತಾ ಜವಾಬ್ದಾರಿ ಹೆಚ್ಚುತ್ತೆ. ಬೆಳೆಯುವ ಹುಡುಗಿಯ ಜತೆಗೆ ಮನೇಲಿ ಒಬ್ಬ ದೊಡ್ಡ ಹೆಂಗಸು ಇರಬೇಕು. ನಿನಗೆ ಅದೆಲ್ಲ ಅರ್ಥವಾಗೊಲ್ಲ”

“ನೀನು ಇದೀಯ, ನಿನ್ನ ಮಗಳು ಇದಾಳೆ. ನನಗೆ ಸಮಯ ಅಂದಾಗ ಸಹಾಯ ಮಾಡದೇ ಇರ್ತೀರಾ?”

“ಅಂತೂ ನಿನ್ನ ಮಾತೇ ನಿನಗೆ..... ಅದೆಷ್ಟು ದಿನ ಒಂಟಿಯಾಗಿ ಇರ್ತೀಯಾ? ನಿನ್ನ ಹಣೇ ಬರಹ” ಎನ್ನುತ್ತಾ ಮಾತು ನಿಲ್ಲಿಸಿದಳು.

ಹೀಗೇ ನಾಲ್ಕಾರು ವರ್ಷಗಳು ತಳಿದವು. ಸುಧಾಕರನ ಆಪ್ತ ಗೆಳೆಯನೊಬ್ಬ ಒಬ್ಬ ಹೆಂಗಸಿನ ಪರಿಚಯ ಮಾಡಿಕೊಟ್ಟಿದ್ದ. ಇವಳಿಗೆ ಗಂಡ ಇಲ್ಲ. ಕೆಲಸದಲ್ಲಿದ್ದಾಳೆ. ನೀನು ಇಷ್ಟಪಟ್ಟರೆ ಅವಳನ್ನು ಮದುವೆಯಾಗಬಹುದು ಅಂತ. ನೋಡಲು ಸುಮಾರಾಗಿದ್ದ ಚಿಕ್ಕವಯಸ್ಸಿನ ಹೆಂಗಸು ಅವಳು. ಇವನ ಮನಸ್ಸು ಏಕೋ ಒಪ್ಪಲಿಲ್ಲ. ಆದರೂ ಬಿಡಲು ಮನಸ್ಸಿಲ್ಲ. ಅವಳ ಸ್ನೇಹ ಗಳಿಸಿದ. ಆಗಾಗ್ಗೆ ಅವಳನ್ನು ಭೇಟಿಯಾಗುತ್ತಿದ್ದ. ಈ ವಿಷಯ ಇನ್ಯಾರಿಗೂ ತಿಳಿದಿರಲಿಲ್ಲ. ವಸುಧಾ ಈಗೀಗ ರಜದಲ್ಲಿ ಊರಿಗೆ ಬಂದಾಗ, ಸುಧಾಕರ ತನ್ನ ತಂಗಿ ಶಾಂತಳನ್ನು ಕರೆಸುತ್ತಿದ್ದ. ವಸುಧ ರಜ ಬೇಗ ಮುಗಿದರೆ ಸಾಕೆಂದು ಚಡಪಡಿಸುತ್ತಿದ್ದಳು. ಅವಳಿಗೆ ಬೋರ್ಡಿಂಗ್ ಸ್ಕೂಲಿನ ಜೀವನ ಒಗ್ಗಿ ಹೋಗಿತ್ತು. ತಂದೆಯ ಮೇಲೆ ಯಾವ ಪ್ರೀತಿ ಆದರಗಳಿರಲಿಲ್ಲ. ತನಗಾಗಿ ಸೋದರತ್ತೆ ಬಂದಿರುವರೆಂಬ ಗೆಲುವಿಲ್ಲ. ತನ್ನ ವಯಸ್ಸಿಗೆ ತಕ್ಕುದಾದ ಇಂಗ್ಲಿಷ್ ಕತೆ ಪುಸ್ತಕಗಳನ್ನು ಓದಿಕೊಂಡು, ಟಿ.ವಿ. ನೋಡಿಕೊಂಡು ಕಾಲ ಕಳೆಯುತ್ತಿದ್ದಳು. ತಂದೆಯಾಗಲೀ, ಅತ್ತೆಯಾಗಲೀ ಏನಾದರೂ ಹೇಳಿದರೆ ಅದು ಹಿತವೆನಿಸುತ್ತಿರಲಿಲ್ಲ. ಮುಲಾಜಿಲ್ಲದೇ ಜಗಳ ಆಡುತ್ತಿದ್ದಳು.

ಅವಳ ಬೋರ್ಡಿಂಗ್ ಸ್ಕೂಲಿನ ಶಿಕ್ಷಣದ ಅವಧಿ ಮುಗಿದಿತ್ತು. ಪರೀಕ್ಷೆಯಲ್ಲಿ ಹೆಚ್ಚಿನ ಅಂಕವನ್ನು ಗಳಿಸಿರಲಿಲ್ಲವಾದ್ದರಿಂದ ಕಾಲೇಜಿಗೆ ಸುಲಭವಾಗಿ ಸೀಟು ಸಿಗುವಂತಿರಲಿಲ್ಲ. ಮಗಳು ಇನ್ನು ಮುಂದೆ ಮನೆಯಲ್ಲೇ ಇರುತ್ತಾಳೆಂದು ಸುಧಾಕರನಿಗೆ ಆತಂಕವೇ ಜಾಸ್ತಿ. ಒಬ್ಬಳೇ ಹುಡುಗಿ ಮನೆಯಲ್ಲಿರುತ್ತಾಳೆ. ತಂಗಿಗೆ ಪದೇ ಪದೇ ಬಾ ಎಂದು ಹೇಳಲಾಗುವುದಿಲ್ಲ. ತಾಯಿ ತಂದೆ ಆ ಮಗನ ಮನೆಯನ್ನು ಬಿಟ್ಟು, ಇಲ್ಲಿ ಯಾರೂ ಇಲ್ಲದ ಮನೆಯ ಜವಾಬ್ದಾರಿ ಹೊರಲು ಸಿದ್ಧರಾಗಿರಲಿಲ್ಲ. ಸುಧಾಕರನಿಗೆ ಏನೂ ಉಪಾಯ ಹೊಳೆಯದೇ ಒಂದು ದಿನ ದಿಢೀರನೇ ಒಂದು ನಿರ್ಣಯವನ್ನು ತೆಗೆದುಕೊಂಡು ತನ್ನ ಪ್ರೇಯಸಿಯನ್ನು ಮದುವೆಯಾಗಿ ಮನೆಗೆ ಕರೆತಂದ.

ತನ್ನ ರೂಮಿನಲ್ಲಿ ಮಲಗಿ ಕತೆ ಪುಸ್ತಕ ಓದುತ್ತಿದ್ದ ವಸುಧಾಳನ್ನು ಕರೆಸಿದ. ಸಿಡುಕುತ್ತಾ ಹೊರಗೆ ಬಂದ ಅವಳಿಗೆ ಅಚ್ಚರಿ! ತಂದೆಯ ಜತೆಗೆ ನಿಂತಿದ್ದ ಹೆಂಗಸನ್ನು ಕಂಡು ಮುಜುಗರವೆನಿಸಿತು.

"ವಸುಧಾ, ಇವಳು ನಿನ್ನ ತಾಯಿ ಪುಷ್ಪಾ......" ಎಂದು ಪರಿಚಯಿಸಿಕೊಟ್ಟ. ವಸುಧಾ ಅವಳ ಕಡೆ ನೋಡಿ ಮುಖ ಸೊಟ್ಟಗೆ ಮಾಡಿ ನಕ್ಕಳು.

"ಹಲೋ ಹೇಳೊಲ್ವಾ" ಎಂದು ತಂದೆ ಪ್ರಶ್ನಿಸಿದಾಗ ರೇಗಿತ್ತು.

"ಇಲ್ಲ, ನನಗೆ ಬೇಡವಾದವರಿಗೆಲ್ಲಾ ನಾನು ಹಲೋ ಹೇಳೋಲ್ಲ" ಎಂದಳು.

"ವಸುಧಾ..... ಬಿಹೇವ್ ಯುವರ್ ಸೆಲ್ಫ್.... ಇವಳು ನಿನ್ನ ತಾಯಿ"

"ನನ್ನ ತಾಯಿ ಸತ್ತುಹೋಗಿದಳೆ. ಇವಳು ಹೇಗೆ ನನ್ನ ತಾಯಿಯಾಗ್ತಾಳೆ?"

"ಹೇಗೆ ಅಂದ್ರೆ ನಾನು ಇವಳನ್ನು ಮದುವೆಯಾಗಿದೀನಿ....."

"ಯಾರನ್ನು ಕೇಳಿ ಮದುವೆಯಾದ್ರಿ? ನನ್ನ ಅಮ್ಮನ ಬದಲಿಗೆ ಬೇರೆ ಯಾರೂ ಅಮ್ಮನಾಗಿ ಬರಲು ಸಾಧ್ಯವಿಲ್ಲ" ಮುಖಕ್ಕೆ ಹೊಡೆದಂತೆ ಹೇಳಿದಳು ವಸುಧಾ.

ಮಗಳ ಮಾತು ಕೇಳಿ ಸುಧಾಕರನಿಗೆ ದಿಗ್ಭ್ರಮೆಯಾಯಿತು.

"ವಸುಧಾ! ಅತಿಯಾಯ್ತು ನಿಂದು. ಪುಷ್ಪಾ ನೀನು ಕೂತ್ಕೋ. ಸ್ವಲ್ಪ ಹೊತ್ತಿಗೆ ಸರಿ ಹೋಗ್ತಾಳೆ" ತನ್ನ ಹೊಸ ಪತ್ನಿಗೆ ಹೇಳಿದ.

"ಇಲ್ಲ, ಸುಧಾಕರ್. ನಾವು ತಪ್ಪು ಮಾಡಿದೆವು. ನಿಮ್ಮ ಮಗಳು ಚಿಕ್ಕವಳಲ್ಲ. ಅವಳಿಗೆ ಎಲ್ಲಾ ಅರ್ಥವಾಗುತ್ತೆ ನನ್ನನ್ನು ತಾಯಿ ಅಂತ ಅವಳು ಖಂಡಿತಾ ಒಪ್ಪಿಕೊಳ್ಳಲ್ಲ"

"ಯಾಕೆ ಒಪ್ಪಿಕೊಳ್ಳಲ್ಲ. ನಾಲ್ಕು ದಿನ ಕಳೆದರೆ ಎಲ್ಲಾ ಸರಿಯಾಗುತ್ತೆ"

"ನೋಡಿ ಮೇಡಂ, ನಾಲ್ಕು ದಿನ ಕಳೆಯುವ ಮಾತಿರಲಿ, ನಾಲ್ಕು ನಿಮಿಷ ಸಹ ನೀವು ಇಲ್ಲಿರಕೂಡದು. ಪ್ಲೀಸ್ ಎದ್ದು ಹೋಗಿ" ಎಂದು ವಸುಧಾ ಮುಖದ ಮೇಲೆ ಹೊಡೆದಂತೆ ಹೇಳಿದಾಗ ಇಬ್ಬರೂ ಕಕ್ಕಾಬಿಕ್ಕಿ.

"ವಸುಧಾ! ಏನಿದು! ಚಿಕ್ಕ ಹುಡುಗಿ ಅಂತ ಸುಮ್ಮನಿದ್ರೆ ತಲೆಯೆಲ್ಲಾ ಮಾತನಾಡ್ತೀಯಲ್ಲ. ನಾನು ನಿನ್ನ ಅಪ್ಪ.... ಇವಳು ನನ್ನ ಹೆಂಡತಿ. ಇಲ್ಲಿಂದ ಎಲ್ಲಿಗೂ ಹೋಗುವುದಿಲ್ಲ"

"ನಿಮ್ಮ ಹೆಂಡತಿಯೋ, ಪ್ರೇಯಸಿಯೋ ನನಗೇನಾಗಬೇಕಾಗಿದೆ? ಅವಳು ಮಾತ್ರ ಇಲ್ಲಿರಕೂಡದು. ನೀವು ಕರೆದುಕೊಂಡು ಹೋಗ್ತೀರೋ ಅಥವಾ ವಾಚ್‌ಮನ್‌ನ ಕರೀಲೋ......"

ಸುಧಾಕರ ಮಗಳ ಕೆನ್ನೆಗೆ ಬಾರಿಸಿದ್ದ. ತಡೆಯಲು ಬಂದ ಪುಷ್ಪಾಳ ಕೈಯನ್ನು ತಳ್ಳಿ ವಸುಧಾ ನುಡಿದಿದ್ದಳು.

"ಈ ಮನೆಗೆ ಬಂದ ಮೊದಲ ದಿನವೇ ನಿನ್ನ ಗಂಡನ ಕೈನಿಂದ ನನಗೆ ಹೊಡೆಸಿದೀಯ. ನಿನಗಂತೂ ನಾಚಿಕೆ ಇಲ್ಲ ಅಂದರೆ ನನಗೆ ನಾಚಿಕೆ ಇಲ್ಲವಾ? ಈ ಮನೆಯಲ್ಲಿ ಒಂದು ಗಳಿಗೆ ಇರಲು ನನಗೆ ಇಷ್ಟವಿಲ್ಲ" ಎಂದು ಹೇಳಿ ತನ್ನ ತಂದೆಯ ಕಡೆ ತಿರುಗಿ,

"ತಂದೆ ಎಂದರೆ ಮಗಳ ಮೇಲೆ ಹೇಗೆ ಬೇಕಾದರೂ ಅಧಿಕಾರ ಚಲಾಯಿಸಬಹುದು ಅಂತ ಭಾವಿಸಿದೀರಾ ಅಲ್ವಾ...... ನಿಮ್ಮ ಹೊಸ ಹೆಂಡತಿಯ ಮಾತನ್ನು ಕೇಳಿಕೊಂಡು, ನನ್ನನ್ನು ಕೊಲ್ಲಲೂ ಹೇಸುವುದಿಲ್ಲ ನೀವು. ನಿಮ್ಮ ಕಣ್ಣೆದುರಿಗೆ ಇರಲು ನನಗೆ ಅಸಹ್ಯ ಎನಿಸುತ್ತೆ. ಹುಟ್ಟಿದ ತಪ್ಪಿಗೆ ಬಾಳಲೇಬೇಕು. ನನಗೆ ಸಾಯುವ ಆಸೆ ಇಲ್ಲ. ನನಗೆ ಹೇಗೆ ಬೇಕೋ ಹಾಗೆ ಬದುಕುವ ಆಸೆ" ಎನ್ನುತ್ತಾ ನಿಂತಿದ್ದವಳು ಹಾಗೇ ಚಪ್ಪಲಿ ಮೆಟ್ಟಿ ಹೊರನಡೆದಳು. ಇಬ್ಬರೂ ಅವಳನ್ನು ತಡೆಯಲಿಲ್ಲ. ಎಲ್ಲಿಗೆ ಹೋಗ್ತಾಳೆ? ರಾತ್ರಿ ಕತ್ತಲಾಗುವ ಹೊತ್ತಿಗೆ ಬರುತ್ತಾಳೆ ಎಂದು ಭಾವಿಸಿದ ಸುಧಾಕರ. ಅಷ್ಟರಲ್ಲಿ ಪುಷ್ಪ ತನಗೆ ಸಿಕ್ಕಿದ ಸ್ವಾಗತಕ್ಕೆ ಮುಜುಗರಗೊಂಡಿದ್ದಳು.

"ನಿಮ್ಮ ಮಗಳಿಗೆ ಬೇಡವಾದ ಮೇಲೆ, ನಾನು ಈ ಮನೆಯಲ್ಲಿರಲು ಖಂಡಿತಾ ಇಷ್ಟಪಡುವುದಿಲ್ಲ. ಅವಳಿನ್ನು ಚಿಕ್ಕವಳು. ಬಾಳಿ ಬದುಕಬೇಕಾದವಳು. ಅವಳನ್ನು ಒಪ್ಪಿಸಿ ಮನೆಗೆ ಕರೆತನ್ನಿ. ನಾವಿಬ್ಬರೂ ಮುಂಚಿನಂತೆ ಸ್ನೇಹಿತರಾಗಿರೋಣ. ಗಂಡ ಹೆಂಡತಿ ಎಂಬ ಬಾಂಧವ್ಯ ಬೇಡ" ಎಂದು

ನುಡಿದಾಗ ಅವನು ಸುಮ್ಮನಿದ್ದ. ಅವನ ತಲೆ ಕೆಟ್ಟು ಹೋದಂತಾಗಿತ್ತು. ಹದಿನಾರು ಹದಿನೇಳು ವರ್ಷದ ಹುಡುಗಿ ಹೇಗೆಲ್ಲಾ ಮಾತನಾಡಬಹುದು ಎಂದು ಅವನು ಭಾವಿಸಿರಲಿಲ್ಲ. ಅವನಿಗೆ ಅವಮಾನವಾದಂತಾಗಿತ್ತು.

"ಹುಂ. ನಡಿ ನಿನ್ನನ್ನ ನಿನ್ನ ಮನೆಗೆ ತಲುಪಿಸ್ತೀನಿ. ಮತ್ತೆ ರಾತ್ರಿಯ ಹೊತ್ತಿಗೆ ಆ ರಾಕ್ಷಸಿ ಬಂದರೆ ಮತ್ತೆ ಏನೇನಾಡುತ್ತಾಳೋ?"

"ಅವಳು ಮೊದಲು ನಿಮ್ಮ ಮಗಳು. ನಂತರ ನಾನು ನಿಮ್ಮ ಹೆಂಡತಿಯಾಗಿ ಬಂದವಳು. ಅವಳು ರಾಕ್ಷಸಿಯಲ್ಲ. ಸ್ವಲ್ಪ ಅವಿವೇಕಿ ಅಷ್ಟೇ. ನೀವು ಮೊದಲು ಅವಳ ಹತ್ತಿರ ಮಾತನಾಡಿದ್ದರೆ ಚೆನ್ನಾಗಿತ್ತು. ತಪ್ಪು ನಿಮ್ಮದೇ. ಈಗ ಅವಳು ಎಲ್ಲಿಯೇ ಇದ್ದರೂ ಅವಳು ವಾಪಸ್ಸು ಇಲ್ಲಿಗೆ ಬರುವಂತೆ ಮಾಡುವ ಕೆಲಸ ನಿಮ್ಮದು. ತಂದೆ ಎಂದರೆ ಬರೀ ಜನ್ಮದಾತ ಮಾತ್ರ ಅಲ್ಲ. ಕೆಲವು ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗುತ್ತದೆ. ನೀವು ನನ್ನ ಜತೆಗೆ ಬರುವ ಅಗತ್ಯವಿಲ್ಲ. ನಾನೊಬ್ಬಳೇ ಹೋಗುತ್ತೀನಿ" ಎಂದು ಅವಳು ಹೊರಟಾಗ, ಸುಧಾಕರ ಅವಳ ಕೈ ಹಿಡಿದ.

"ನನ್ನನ್ನು ಕ್ಷಮಿಸು ಪುಷ್ಪಾ. ಈಗ ಏನು ಮಾಡಬೇಕೂಂತ ಗೊತ್ತಾಗ್ತಾ ಇಲ್ಲ. ಆದರೆ ನನಗೆ ನಿನ್ನ ಸ್ನೇಹ ಮಾತ್ರ ಬೇಕೇ ಬೇಕು" ಎಂದ.

"ನೀವು, ಬೇಕೆನಿಸಿದಾಗಲೆಲ್ಲಾ ನಮ್ಮ ಮನೆಗೆ ಬರಬಹುದು. ಆದರೆ ನಾನೆಂದೂ ಮತ್ತೆ ಇಲ್ಲಿಗೆ ಬರಲಾರೆ" ಎಂದು ಹೇಳಿ ಹೊರಗೆ ಅಡಿ ಇಟ್ಟಳು. ಸುಧಾಕರ ಪೆಚ್ಚಾದ. ತಾನೇಕೆ ಇಂಥ ದಡ್ಡ ಕೆಲಸ ಮಾಡಿದೆ ಎಂದು ಹಾಗೇ ಯೋಚಿಸುತ್ತಾ ನಿಂತ. ಮದುವೆಯಾದ ಖುಷಿಯಂತೂ ಇರಲಿಲ್ಲ. ಹೆಂಡತಿಯಾಗಿ ಬಂದವಳು ತನ್ನ ಕರ್ತವ್ಯವನ್ನು ತಿಳಿಸಿ ಹೊರಟುಹೊಗಿದ್ದಳು. ಆದರೆ ಈ ಮೊಂಡು ಹುಡುಗಿಯನ್ನು ಸರಿ ಮಾಡುವುದಾದರೂ ಹೇಗೆ? ತಾನು ಸದಾ ಕಾಲ ಅವಳ ಎದುರಿಗೆ ಇರಲಾಗುವುದಿಲ್ಲ. ಕಾಲೇಜಿಗೆ ಹೋಗುವ ವಯಸ್ಸಿನ ಹುಡುಗಿ. ಮನೆಯಲ್ಲಿ ಅವಳ ಜತೆಗೆ ಒಬ್ಬಳು ಇರಲಿ ಅಂತ ಪುಷ್ಪಳನ್ನು ಮದುವೆಯಾಗಿ ಕರತಂದೆ. ಈಗ ನನ್ನಿಂದ ಅವಮಾನವಾದಂತಾಯಿತಲ್ಲ. ಅಷ್ಟರಲ್ಲಿ ಫೋನು ರಿಂಗಾಯಿತು. ಎಚ್ಚೆತ್ತುಫೋನ್ ಎತ್ತಿಕೊಂಡ.

"ಪೊಲಿಸ್ ಇನ್‌ಸ್ಪೆಕ್ಟರ್ ಮಾತನಾಡುತಿಲ್ತರುವುದು. ನೀವು ಈ ಕ್ಷಣ ಬರಬೇಕು" ಎಂದು ತಿಳಿಸಿದಾಗ ಅವನ ಎದೆ ಧಸಗುಟ್ಟಿತು. ಈ ಅವಿವೇಕಿ ಹುಡುಗಿ ಏನು ಮಾಡಿಕೊಂಡಳೋ ಎಂದು ಗಡಬಡಿಸಿ ಪೊಲೀಸ್ ಸ್ಟೇಷನ್‌ಗೆ ಬಂದ. ಅಲ್ಲಿ ವಸುಧಾ ಇನ್‌ಸ್ಪೆಕ್ಟರ್ ಎದುರಿಗೆ ಕೂತಿದ್ದಳು. ಇವರ ಕಡೆ

ನೋಡಿದರೂ ಕೋಪಗೊಂಡು ಕುಳಿತಿದ್ದಳು.

"ಇವರು ನಿಮ್ಮ ಮಗಳು ವಸುಧಾ ತಾನೇ?"

"ಹೌದು....." ಎನ್ನುತ್ತಾ ಸುಧಾಕರ ಇನ್ನೊಂದು ಕುರ್ಚಿಯಲ್ಲಿ ಕೂತ.

"ಇವರು ನಿಮ್ಮ ಮೇಲೆ ಕಂಪ್ಲೆಂಟ್ ಕೊಟ್ಟಿದ್ದಾರೆ"

"ಕಂಪ್ಲೆಂಟ್? ಇದೆಲ್ಲಾ ಏನು ವಸುಧಾ..... ನಡೀ ಮನೆಗೆ"

"ನಾನು ಬರಲ್ಲ ಅಂತ ಹೇಳಿ ಇನ್‌ಸ್ಪೆಕ್ಟರ್....."

"ನೋಡಮ್ಮಾ, ನೀನಿನ್ನು ಚಿಕ್ಕವಳ. ನೀನು ನಿನ್ನ ತಂದೆಯ ಮನೆಯಲ್ಲಿ ಇರದೇ ಇನ್ನೆಲ್ಲಿ ಇರಕ್ಕೆ ಆಗುತ್ತೆ ನೀನೇ ಹೇಳು?"

"ಅದಲ್ಲ.... ಅವರು ನನ್ನ ಮೇಲೆ ಕೈ ಮಾಡಿದಾರೆ. ಅವರ ಮೇಲೆ ಆಕ್ಷನ್ ತಗೋಬೇಕು ನೀವು" ಸುಧಾಕರ ಮಗಳ ಮಾತಿನಿಂದ ಅವಮಾನಿತನಾಗಿದ್ದ.

"ವಸುಧಾ.... ನಾನು ನಿನ್ನ ತಂದೆ. ನಿನಗೆ ಹೊಡೆಯುವ ಹಕ್ಕು ನನಗಿಲ್ಲವೇ......"

"ಹಕ್ಕಿದೆ ಅಂತ ನೀವು ಏನು ಬೇಕಾದ್ರೂ ಮಾಡ್ತೀರಾ? ಅದನ್ನೆಲ್ಲಾ ನಾನು ಸಹಿಸೊಲ್ಲ"

"ಸರಿ ಬಿಡು ತಪ್ಪಾಯ್ತು ಅಂತ ಕ್ಷಮೆ ಕೇಳ್ತೀನಿ. ನಡೀ ಮನೆಗೆ" ಕೆಳದುಟಿಯಲ್ಲಿ ನುಡಿದ.

"ಕ್ಷಮೆಯಂತೆ ಕ್ಷಮೆ! ನಿಮ್ಮನ್ನು ನಾನು ಕ್ಷಮಿಸೊಲ್ಲ. ನನ್ನ ತಾಯಿಯೂ ಕ್ಷಮಿಸೊಲ್ಲ. ಅಂತಹ ತಪ್ಪು ಮಾಡಿದೀರಿ ನೀವು"

"ಸರಿ. ನಾನೀಗ ಏನು ಮಾಡಬೇಕು ನೀನೇ ಹೇಳು" ಅಸಹನೆಯಿಂದ ಕೇಳಿದ.

"ಆ ಮನೆಗಂತೂ ನಾನು ಮತ್ತೆ ಬರುವುದಿಲ್ಲ. ನಾನು ಯಾವುದಾದರೂ ಲೇಡಿಸ್ ಹಾಸ್ಟೆಲ್‌ನಲ್ಲಿರ್ತೀನಿ...."

"ನಾನಿನ್ನೂ ಬದುಕಿದ್ದೀನಿ. ನಿನ್ನ ಮದುವೆಯಾಗಿ ನೀನು ಹೋಗುವವರೆಗೂ ನನ್ನ ಮನೇಲಿರಬೇಕು. ಸುಮ್ಮನೇ ಬಾ......"

"ಇಲ್ಲಾ..... ಇಲ್ಲಾ......" ವಸುಧಾ ಎತ್ತರದ ಧ್ವನಿಯಲ್ಲಿ ಕಿರುಚಿದಾಗ ಇನ್‌ಸ್ಪೆಕ್ಟರ್ ಟೇಬಲ್ ಕುಟ್ಟಿದ.

"ಇದು ಪೊಲೀಸ್ ಸ್ಟೇಷನ್. ನಿಮ್ಮ ಮನೆಯಲ್ಲ. ಇಲ್ಲಿ ಜಗಳ ಆಡಿದರೆ ಇಬ್ಬರನ್ನು ಲಾಕಪ್‌ಗೆ ಹಾಕ್ತೀನಿ" ಸುಧಾಕರನಿಗೆ

ಅವಮಾನವಾದಂತಾಯ್ತು.

"ಏನಾದ್ರೂ ಮಾಡ್ಕೋ. ನೀನು ಉದ್ಧಾರವಾಗೋಲ್ಲ. ಹಾಳಾಗಿ ಹೋಗ್ತೀಯ" ಎಂದು ಬೈದು ಹೊರಟವನನ್ನು ಇನ್‌ಸ್ಪೆಕ್ಟರ್ ತಡೆದ.

"ಸ್ವಲ್ಪ ನಿಲ್ಲಿ ಸಾರ್. ಏನಾದರೂ ಒಂದು ಇತ್ಯರ್ಥ ಮಾಡಲೇ ಬೇಕು ಈಗ. ನೀವು ಮಗಳ ಮೇಲೆ ಕೈ ಮಾಡಿದೀರಿ ಅಂತ ಕೇಸ್ ರಿಜಿಸ್ಟರ್ಡ್ ಆದರೆ, ಕಾನೂನು ನಿಮಗೆ ಶಿಕ್ಷೆ ವಿಧಿಸಬಹುದು"

"ಸರಿಯಾಗಿ ಹೇಳಿದ್ರಿ ನೀವು" ಎಂದು ವಸುಧಾ ತಂದೆಯ ಕಡೆ ನೋಡಿದಾಗ ಸುಧಾಕರ ಹಲ್ಲು ಹಲ್ಲು ಕಡಿದ.

"ಆಗಲಿ, ನಾನು ಅವರಿಗೆ ಸರಿಯಾಗಿ ತಿಳುವಳಿಕೆ ಹೇಳ್ತೀನಿ. ನೀವೀಗ ಸ್ವಲ್ಪ ಒಳಗಿನ ರೂಮಿನಲ್ಲಿ ಕೂತಿರಿ" ಎಂದು ವಸುಧಾಳಿಗೆ ಹೇಳಿ, ಲೇಡಿ ಕಾನ್‌ಸ್ಟೇಬಲ್‌ನ ಕರೆದು ಅವಳನ್ನು ಕರೆದುಕೊಂಡು ಹೋಗುವಂತೆ ಹೇಳಿದ ಇನ್‌ಸ್ಪೆಕ್ಟರ್. ವಸುಧಾ ಅತ್ತ ಹೋದ ಕೂಡಲೇ ಸುಧಾಕರನ ಕಡೆ ತಿರುಗಿದ.

"ಇದೆಲ್ಲಾ ಏನು ಸಾರ್! ನಿಮ್ಮನ್ನು ನೋಡಿದರೆ ಎಜುಕೇಟೆಡ್ ತರಹ ಕಾಣ್ತೀರಿ. ಹುಡುಗಿ ಮೇಲೆ ಕೈ ಮಾಡೋದಾ? ಅದೂ ಸ್ವಲ್ಪ ತಿಳುವಳಿಕೆ ಕಡಿಮೆ ಇರುವ ಹುಡುಗಿಯ ಮೇಲೆ....."

"ತಿಳುವಳಿಕೆ ಜಾಸ್ತಿ. ಅದಕ್ಕೆ ಹೀಗೆಲ್ಲಾ ಆಡ್ತಿದ್ದಾಳೆ"

"ಇರಬಹುದು. ಆದರೆ ಇದು ನಿಮ್ಮ ಮನೆಯ ವಿಷಯ. ಪೊಲೀಸ್ ಸ್ಟೇಷನ್‌ತನಕ ಬರಬಾರದು. ಹುಡುಗಿಗಂತೂ ತಿಳಿಯೊಲ್ಲ ಅಂದರೆ, ನಿಮಗೂ ತಿಳುವಳಿಕೆ ಇಲ್ವಾ? ನನ್ನ ಹತ್ತಿರ ನಿಮ್ಮ ಮನೆಯ ವಿಷಯವನ್ನೆಲ್ಲಾ ಹೇಳಿದಾರೆ. ಈಗ ಕೇಸು ಅದು ಇದು ಅಂತ ಮುಂದುವರೆಯಲು ನನಗಿಷ್ಟವಿಲ್ಲ. ನಾನು ಉಪಾಯವಾಗಿ ನಿಮ್ಮನ್ನು ಕರೆಸಿದೆ. ನಿಮ್ಮ ಮಗಳು ನಿಮ್ಮ ಮನೆಗೆ ಬರೊಲ್ಲ ಅಂತ ಹಠ ಮಾಡ್ತಿದಾಳೆ. ಬಲವಂತ ಮಾಡಬೇಡಿ. ಆಮೇಲೆ ಪ್ರಾಣಕ್ಕೆ ಏನಾದರೂ ಮಾಡಿಕೊಂಡರೆ ನಿಮ್ಮತಲೇ ಮೇಲೆ ಬೀಳುತ್ತೆ ಎಲ್ಲಾ"

"ಈಗ ನಾನೇನು ಮಾಡಲಿ ನೀವೇ ಹೇಳಿ. ನೀವೇ ಅವಳಿಗೆ ಸ್ವಲ್ಪ ತಿಳುವಳಿಕೆ ಹೇಳಿ. ನಾನು ನನ್ನ ಹೆಂಡತಿಯನ್ನು ಅವಳ ಮನೆಗೇ ವಾಪಸ್ಸು ಕಳಿಸಿ ಬಿಟ್ಟಿದೀನಿ. ಹಾಗಂತ ಅವಳಿಗೆ ಹೇಳಿಬಿಡಿ"

"ಹೇಳಿದ್ರೂ ಅವಳು ನಿಮ್ಮ ಮನೆಗೆ ಬರುತ್ತಾಳೆಂಬ ನಂಬಿಕೆ ನನಗಿಲ್ಲ.

ನಿಮ್ಮ ಆಪ್ತ ಸ್ನೇಹಿತರು ಯಾರಾದರೂ ಇದ್ದರೆ, ನಾಲ್ಕಾರು ದಿನ ಅವರ ಮನೆಯಲ್ಲಿರಲಿ. ನಂತರ ಅವರ ಆಸೆಯಂತೆ ಯಾವುದಾದರೂ ಹಾಸ್ಟೆಲ್ಲಿಗೆ ಸೇರಿಸಿಬಿಡಿ. ಕ್ರಮೇಣ ಸರಿಹೋಗಬಹುದು"

ಸುಧಾಕರ ಚಿಂತೆಗೊಳಗಾದ. ಕೆಲವು ಕ್ಷಣಗಳ ಆಲೋಚನೆಯ ನಂತರ ಅವನಿಗೆ ನೆನಪಾದವನು ಅವನ ಗೆಳೆಯ ಚಂದ್ರಕಾಂತ. ಸಧ್ಯಕ್ಕೆ ಗಂಡ ಹೆಂಡತಿ ಇಬ್ಬರೇ ಮನೆಯಲ್ಲಿ, ಮಗ ಅಮೆರಿಕಾದಲ್ಲಿದಾನೆಂದು ತಿಳಿದಿತ್ತು. ಇನ್‌ಸ್ಪೆಕ್ಟರನ್ನು ಕೇಳಿ, ಅಲ್ಲಿಂದಲೇ ತನ್ನ ಸ್ನೇಹಿತನಿಗೆ ಫೋನು ಮಾಡಿದ.

"ನಾನು ಒಂದು ಫಜೀತಿಗೆ ಸಿಕ್ಕಿಬಿದ್ದಿದೀನಿ. ತಕ್ಷಣವೇ ಈ ಪೊಲೀಸ್ ಸ್ಟೇಷನ್‌ಗೆ ಬಾ. ಹಾಗೇ ನಿನ್ನ ಹೆಂಡತಿಯನ್ನು ಕರೆದುಕೊಂಡು ಬಾ" ಅಂತ.

"ಏನಯ್ಯಾ ವಿಷಯ" ಎಂದು ಅವನು ಕೇಳಿದಾಗ, "ಎಲ್ಲಾ ಇಲ್ಲೇ ಹೇಳ್ತೀನಿ ಬಾ" ಎಂದು ಹೇಳಿ ಫೋನನ್ನು ಇಟ್ಟು ತನ್ನ ಸ್ನೇಹಿತನಿಗಾಗಿ ಕಾದು ಕೂತ.

"ಇಬ್ಬರೂ ಊಟ ಮಾಡಿದೀರೋ ಇಲ್ಲವೊ" ಎಂದು ಇನ್‌ಸ್ಪೆಕ್ಟರ್ ಕುಹಕವಾಗಿ ಕೇಳಿದಾಗ, "ಊಟ ಗೀಟ ಎಲ್ಲಾ ಆಮೇಲೆ.... ಮೊದಲು ಇದೆಲ್ಲ ಸರಿಹೋಗಲಿ" ಎಂದು ನುಡಿದ. ಹತ್ತಿಪ್ಪತ್ತು ನಿಮಿಷಗಳಲ್ಲಿ ಚಂದ್ರಕಾಂತ ಹಾಗೂ ಅವನ ಪತ್ನಿ ಶೀಲಾ ಇಬ್ಬರೂ ಕಾರಿನಲ್ಲಿ ಬಂದರು. ಸುಧಾಕರ ನಡೆದುದೆಲ್ಲವನ್ನು ಇನ್‌ಸ್ಪೆಕ್ಟರ್‌ನ ಎದುರಿಗೇ ಸಂಕ್ಷಿಪ್ತವಾಗಿ ತಿಳಿಸಿದ.

"ತಾಯಿಯಿಲ್ಲದ ತಬ್ಬಲಿ ಅಂತ ಮುದ್ದಿನಿಂದ ಬೆಳೆಸಿದೆವು. ಈಗ ನೋಡಿದರೇ, ನನ್ನ ಮೇಲೇ ಪೊಲೀಸ್ ಕಂಪ್ಲೆಂಟ್ ಕೊಡುವಷ್ಟು ಮುಂದುವರೆದಿದ್ದಾಳೆ. ಈಗ ಅವಳಿಗೆ ಏನು ಮಾಡಬೇಕೂಂತ ಗೊತ್ತಾಗ್ತಿಲ್ಲ"

"ಅವಳನ್ನು ಬಲವಂತವಾಗಿ ನಿನ್ನ ಮನೆಗೆ ಕರೆದುಕೊಂಡು ಹೋಗಬೇಡ. ಯಾವುದಾದರೂ ಸ್ಟೂಡೆಂಟ್ ಹಾಸ್ಟೆಲ್ಲಿಗೆ ಸೇರಿಸಿಬಿಡು." ಸ್ನೇಹಿತನೂ ಅದೇ ಸಲಹೆಯನ್ನಿತ್ತಾಗ, ಸುಧಾಕರ ಇನ್‌ಸ್ಪೆಕ್ಟರನ ಕಡೆ ನೋಡಿದ.

"ಅದು ಸರಿ. ಅಲ್ಲೀವರೆಗೆ ಈ ಪೊಲೀಸ್ ಸ್ಟೇಷನ್‌ನಲ್ಲಿ ಆ ಹುಡುಗಿಯನ್ನು ನಾವು ಇಟ್ಟುಕೊಳ್ಳುವುದಿಲ್ಲ" ಪೊಲೀಸ್ ಇನ್‌ಸ್ಪೆಕ್ಟರ್ ನುಡಿದ.

"ನಿಮ್ಮ ಹತ್ತಿರದ ಬಳಗದವರು ಯಾರೂ ಇಲ್ವೇನಯಾ?" ಅಂತ ಚಂದ್ರಕಾಂತ ನುಡಿದಾಗ, ಅವನ ಹೆಂಡತಿ ಶೀಲಾ ಮಧ್ಯೆ ನುಡಿದಳು.

"ಅವಳು ಸಧ್ಯಕ್ಕೆ ನಮ್ಮ ಮನೆಯಲ್ಲಿರಲಿ.... ನಾವೇ ಸರಿಯಾದ

ಹಾಸ್ಟೆಲನ್ನು ನೋಡಿ ಅವಳನ್ನು ಸೇರಿಸುತ್ತೇವೆ"

"ಶೀಲಾ..... ಹೆಣ್ಣು ಹುಡುಗಿಯ ಜವಾಬ್ದಾರಿ ಅತಿ ಹೆಚ್ಚು" ಎಂದ ಚಂದ್ರಕಾಂತ.

"ನಾವು ತಿಳಿದೂ ಈಗ ಇವರುಗಳಿಗೆ ಸಹಾಯ ಮಾಡದಿದ್ದರೆ ಏನು ಚೆನ್ನ?" ಅವಳನ್ನು ಪ್ರೀತಿಯಿಂದ ಮಾತನಾಡಿಸಿ, ಅವಳ ಸಮಸ್ಯೆ ಏನು ಅಂತ ತಿಳಿದುಕೊಳ್ಳೋಣ. ಅದನ್ನು ಸರಿಪಡಿಸೋಣ. ಇಲ್ಲದಿದ್ದರೆ ಅವ ಬಾಳು ಹಾಳಾಗಿ ಹೋಗುತ್ತದೆ.

ಆಗ ಇನ್‌ಸೆಕ್ಟರನೂ ಬಾಯಿ ಹಾಕಿ ನುಡಿದ. "ನೀವು ಹೇಳುವ ಮಾತು ಸರಿ ಮೇಡಂ. ನನಗೂ ಹಾಗೆ ಅನ್ನಿಸಿದ್ದರಿಂದಲೇ, ಇವರನ್ನು ಕರೆಸಿದೆ. ಇಲ್ಲದಿದ್ರೆ ಇದು ಪೊಲೀಸ್ ಸ್ಟೇಷನ್. ಇಲ್ಲಿ ಏನೇನೋ ಅನಾಹುತಗಳನ್ನು ಮಾಡಿ ಬಂದವರೆಲ್ಲಾ ಓಡಾಡುತ್ತಿರುತ್ತಾರೆ. ಇಂಥವರ ಮಧ್ಯೆ.... ಆ ಹುಡುಗಿ ಒಂದು ಗಂಟೆ ಕಳೆಯುವುದೂ ಸುಲಭವಲ್ಲ"

"ಥ್ಯಾಂಕ್ಸ್. ಏನೋ ಕೆಟ್ಟ ಗಳಿಗೆ. ಏನೇನೋ ಆಗಿ ಹೋಗುತ್ತೆ. ಈಚೆಗೆ ನಾವೂ ಆ ಹುಡುಗಿಯನ್ನು ನೋಡಿಲ್ಲ. ಎಲ್ಲಿ ಕರೆಸಿ ಅವಳನ್ನು. ಅವಳ ಹತ್ತಿರ ಮಾತನಾಡೋಣ" ಎಂದು ಶೀಲಾ ನುಡಿದಾಗ, ಇನ್‌ಸ್ಪೆಕ್ಟರ್ ಬೆಲ್ ಮಾಡಿದ.

ವಸುಧಾ ಹೊರಗೆ ಬಂದರೂ ಯಾರ ಕಡೆಗೂ ನೋಡಲಿಲ್ಲ. ಶೀಲಾ ತಾನಾಗಿಯೇ ಅವಳ ಬಳಿ ಬಂದು ಹೆಗಲ ಮೇಲೆ ಕೈಯಿಟ್ಟಾಗ ಅವಳು ಕೈ ಕೊಡವಿಕೊಂಡು ಹಿಂದೆ ಸರಿದಳು.

"ಹೇಗಿದೀಯಾ ವಸುಧಾ? ನಾನ್ಯಾರು ಅಂತ ಗೊತ್ತಾಗಲಿಲ್ಲ ಅಲ್ವಾ? ನಾನು ಶೀಲ ಅಂತ, ನಿನ್ನ ತಾಯಿಯ ಸ್ನೇಹಿತೆ. ನೀನೂ ಬೋರ್ಡಿಂಗ್ ಸ್ಕೂಲಿನಲ್ಲಿದ್ದೆ. ನಾವೂ ಊರಿನಲ್ಲಿರಲಿಲ್ಲ. ಎಷ್ಟು ದಿನಗಳಾಯಿತು ನಿನ್ನನ್ನು ನೋಡಿ" ಅವಳ ವಿಶ್ವಾಸದ ಮಾತುಗಳು ಕೃತಕವೆನಿಸಿದವು.

"ಈಗ ನಾನು ಇಲ್ಲಿದೀನಿ ಅಂತ ನಿಮಗ್ಯಾರು ಹೇಳಿದರು?"

"ಈ ಪೊಲೀಸ್ ಇನ್‌ಸ್ಪೆಕ್ಟರ್, ನಿನ್ನ ಅಂಕಲ್‌ಗೆ ಸ್ನೇಹಿತರು. ಅವರನ್ನು ಮನೆಗೆ ಡಿನ್ನರ್‌ಗೆ ಇನ್ವೈಟ್ ಮಾಡೋಣ ಅಂತ ಬಂದಿದ್ವಿ. ಇಲ್ಲಿ ನಿಮ್ಮ ತಂದೇನೂ ಸಿಕ್ಕಿದರು. ನೀನು ಇಲ್ಲಿಗೆ ಬಂದಿದೀಯ ಅಂತ ತಿಳೀತು. ನೀನೂ ಬರಬೇಕು ನಮ್ಮ ಮನೆ ಫಂಕ್ಷನ್‌ಗೆ" ತೋಚಿದ ಸುಳ್ಳನ್ನು ಹೇಳಿದ್ದಳು.

"ಇಲ್ಲ, ನಾನು ಎಲ್ಲಿಗೂ ಬರೋಲ್ಲ"

"ಯಾಕೆ? ನಿಮ್ಮ ಮನೆಗೇ ಹೋಗೋಣ. ನಾನು ನಿನ್ನನ್ನು ಅಲ್ಲೇ ಇನ್ವೈಟ್ ಮಾಡ್ತೀನಿ"

"ಇಲ್ಲ ನಾನು ಆ ಮನೆಗೆ ಹೋಗೊಲ್ಲ. ನನಗೆ ಇಷ್ಟವಿಲ್ಲ"

"ಯಾಕೆ ವಸುಧಾ? ಏನಾಯ್ತಮ್ಮ.... ಏನೋ ಬೇಜಾರು ಮಾಡಿಕೊಂಡಿರುವ ಹಾಗಿದೆ. ನನ್ನ ಹತ್ತಿರ ಹೇಳೊಲ್ವಾ?"

"ನಿಮಗೆ ಹೇಳಿದರೆ ನನಗೆ ಹೆಲ್ಪ್ ಮಾಡ್ತೀರಾ?" ಕೆಣಕುವಂತೆ ಪ್ರಶ್ನಿಸಿದಳು.

"ಖಂಡಿತಾ ಮಾಡ್ತೀನಿ. ನಾನು ನಿಮ್ಮ ತಾಯಿಯ ಸ್ನೇಹಿತೆ ಅಲ್ವಾ?"

"ನನಗೆ ಸ್ವಲ್ಪ ದುಡ್ಡು ಬೇಕಾಗಿತ್ತು. ಸಾಲ ಅಂತ ಕೊಟ್ಟರಿ. ಯಾವುದಾದರೂ ಹೋಟೆಲ್ಲಿನ ರೂಮಿನಲ್ಲಿದ್ದು, ಕೆಲಸಕ್ಕೆ ಪ್ರಯತ್ನ ಮಾಡ್ತೀನಿ. ಕೆಲಸ ಸಿಕ್ಕಿದ ಕೂಡಲೇ ನಿಮ್ಮ ಹಣವನ್ನು ವಾಪಸ್ಸು ಕೊಡ್ತೀನಿ" ಎಲ್ಲರೂ ಕಕ್ಕಾಬಿಕ್ಕಿಯಾದರು.

"ಛೆ, ಎಂಥಾ ಮಾತಾಡ್ತೀಯಮ್ಮಾ ನೀನು, ನನ್ನನ್ನ ಸಾಲ ಕೇಳೋದಾ? ನೀನು, ಎಷ್ಟು ಹಣ ಬೇಕೂಂತ ಕೇಳು. ನಾನು ಕೊಡ್ತೀನಿ"

"ಅದೆಲ್ಲಾ ಬೇಡ. ಲೆಖ್ಖ ಅಂದರೆ ಲೆಖ್ಖ. ನೀವು ಸಾಲ ಅಂತ ಕೊಟ್ಟರೆ ಮಾತ್ರ ನಾನು ತಗೋತೀನಿ"

"ಸರಿ. ಹಾಗೇ ಆಗಲಿ, ಆದರೆ ನೀನು ಹೋಟೆಲಿನಲ್ಲಿರುವುದು ಬೇಡ. ನಮ್ಮ ಮನೆಯಲ್ಲೇ ಪೇಯಿಂಗ್ ಗೆಸ್ಟ್ ಆಗಿರಬಹುದು"

"ಇದು ನಿಮ್ಮ ಪ್ಲಾನ್ ಅಲ್ಲ ಅಂತ ನಾನು ಭಾವಿಸಲೆ?" ಸಂಶಯದಿಂದ ಕೇಳಿದಳು.

"ಯಾಕೆ ಹೀಗೆ ಕೇಳ್ತಿದಿಯಾ?"

"ಒಂದು ಸಾರಿಯೂ ನಿಮ್ಮ ಹೆಸರನ್ನೇ ಕೇಳಿರಲಿಲ್ಲ ನಾನು. ನಿಮ್ಮ ಮನೆಗೆ ಹೇಗೆ ಬರಲಿ?"

"ನಿನ್ನ ಇಷ್ಟ ವಸುಧಾ. ನಾನು ಬಲವಂತ ಮಾಡುವುದಿಲ್ಲ. ಆದರೆ ನೀನು ನಮ್ಮ ಮನೆಗೆ ಬಂದರೆ, ನಾನು ನಿನ್ನನ್ನು ಮಗಳಂತೆ ನೋಡಿಕೊಳ್ತೀನಿ. ನನ್ನ ಸ್ನೇಹಿತೆಯ ಮಗಳಲ್ವಾ ನೀನು?"

ಅಷ್ಟರಲ್ಲಿ ಪೊಲೀಸ್ ಇನ್‌ಸ್ಪೆಕ್ಟರ್ ನುಡಿದ. "ನೋಡಮ್ಮಾ ಬೇಗ ಎಲ್ಲಿಗೆ ಹೋಗ್ತಿಯಾ ಅಂತ ನಿರ್ಧರಿಸಮ್ಮಾ..... ಇಲ್ಲಿ ಪೋಲಿಸ್ ಸ್ಟೇಷನ್‌ನಲ್ಲಿ ಹೆಣ್ಣು ಮಕ್ಕಳನ್ನು ಇಟ್ಟುಕೊಳ್ಳಲು ಸಾಧ್ಯವಿಲ್ಲ"

"ಏನ್ರಿ ಹೀಗಾಡ್ತೀರಿ? ಇದು ನಿಮ್ಮ ಮನೆಯಲ್ಲ. ಸರಕಾರದ್ದು. ನನಗೆ

ಇಷ್ಟವಾದರೆ ಇಲ್ಲೇ ಇರ್ತೀನಿ"

ಈ ಹುಡುಗಿಗೆ ಖಂಡಿತಾ ತಲೆ ಸರಿ ಇಲ್ಲವೆಂದು ಭಾವಿಸಿ, ತಲೆಯಾಡಿಸಿ ಹೆದರಿಸಿದ.

"ಸರಿಯಮ್ಮಾ. ಆದರೆ ಇಲ್ಲಿ ನಾವು ಯಾರೂ ಇರುವುದಿಲ್ಲ ಒಬ್ಬಳೇ ಇರಬೇಕಾಗುತ್ತದೆ. ಯೋಚಿಸು" ಹೆದರಿದ ವಸುಧಾ, ಶೀಲಾ ಆಂಟಿಯ ಬಳಿಗೆ ಸರಿದಳು.

"ಸರಿ, ನಡೀರಿ ಆಂಟಿ. ನಾನು ನಿಮ್ಮ ಮನೆಗೆ ಬರ್ತೀನಿ. ಏನು ಅಡಿಗೆ ಮಾಡಿದೀರಿ. ನನಗೆ ತುಂಬಾ ಹೊಟ್ಟೆ ಹಸಿಯುತ್ತಿದೆ"

ಶೀಲ ಗಾಬರಿಗೊಂಡಳು. ಈ ಹುಡುಗಿ ಅಪಾಯಕಾರಿ, ಆದಷ್ಟು ಬೇಗ ಈ ಹುಡುಗಿಗೆ ಬೇರೆ ವ್ಯವಸ್ಥೆ ಮಾಡದಿದ್ದರೆ ತಮಗೆ ಉಳಿಗಾಲವಿಲ್ಲವೆಂದು ಕೊಂಡಳು.

"ಈಗ ಹೊತ್ತಾಗಿದೆ ಅಲ್ವಾ? ಈಗ ಹೋಗಿ ಅಡಿಗೆ ಮಾಡೋದು ಲೇಟಾಗುತ್ತೆ. ಈಗ ಹೋಟೆಲ್ಲಿಗೆ ಹೋಗೋಣ. ಏನಂತೀರಾ?"

ಎಂದು ಗಂಡನಿಗೆ ಕಣ್ಸನ್ನೆ ಮಾಡಿ ಒಪ್ಪಿಸಿದಳು. ವಸುಧಾ ಆಗಲೇ ಮೆಟ್ಟಲಿಳಿದು ಬೀದಿಯಲ್ಲಿ ನಿಂತಾಗಿತ್ತು. ಸುಧಾಕರ ಸ್ನೇಹಿತನ ಕೈ ಕುಲಕಿ 'ಥ್ಯಾಂಕ್ಸ್' ಹೇಳಿದ.

"ನಾಳೆ ದಿನ ನಿಮ್ಮ ಮನೆಗೆ ನಾನೇ ಬರ್ತೀನಿ" ಎಂದು ಚಂದ್ರಕಾಂತ ನುಡಿದು, ಇನ್‌ಸ್ಪೆಕ್ಟರ್‌ನ ಕೈ ಕುಲಕಿ ಹೊರಬಂದ. ಕಾರಿನಲ್ಲಿ ಯಾವ ಯೋಚನೆಯೂ ಇಲ್ಲದೇ ಕುಳಿತಿದ್ದ ವಸುಧಾಳ ಬಗ್ಗೆ ಆತಂಕ ಶುರುವಾಗಿತ್ತು. ಆದಷ್ಟು ಬೇಗ ಈ ಹುಡುಗಿಯನ್ನು ಅವಳ ಮನೆಗೆ ವಾಪಸ್ಸು ಕಳಿಸಬೇಕು. ಒಪ್ಪದಿದ್ದರೆ ಹಾಸ್ಟೆಲ್ಲಿಗಾದರೂ ಸೇರಿಸಬೇಕು ಎಂದು ಗಂಡ ಹೆಂಡಿರಿಬ್ಬರೂ ಆಲೋಚಿಸುತ್ತಿದ್ದರು.

ಹೋಟೆಲ್ಲಿನಲ್ಲಿ ಊಟ ಮುಗಿಸಿ ಮನೆಯ ಕಡೆ ನಡೆದರು. ಆಂಟಿಯ ನೈಟಿಯನ್ನು ಧರಿಸಿ ವಸುಧಾ ನಿರಾತಂಕವಾಗಿ ಮಲಗಿ ನಿದ್ರಿಸಿದಳು. ಹೊತ್ತಿಗೆ ಮುಂಚೆ ಎದ್ದ ಚಂದ್ರಕಾಂತ, ಸುಧಾಕರನ ಮನೆಗೆ ಬಂದ. ಸುಧಾಕರ, ಸ್ನೇಹಿತನ ಜತೆ ಮಗಳು ಇಲ್ಲದುದನ್ನು ಗಮನಿಸಿದ. ಮನಸ್ಸು ಕಹಿಯಾಯಿತು. ಅಪ್ಪ ಎನ್ನುವ ಗೌರವ ಅವಳಿಗೇ ಇಲ್ಲದಿದ್ದ ಮೇಲೆ ನಾನು ಏನು ತಾನೇ ಮಾಡಲು ಸಾಧ್ಯ ಎಂದುಕೊಂಡ.

"ನಿನ್ನ ಮಗಳು ಇನ್ನೂ ಎದ್ದಿರಲಿಲ್ಲ. ಒಂದೆರಡು ದಿನ ನಮ್ಮ

ಮನೆಯಲ್ಲಿರಲಿ ಬಿಡು. ಆಮೇಲೆ ನಾನೇ ಸಮಾಧಾನ ಹೇಳಿ ಕಳಿಸ್ತೀನಿ. ಈಗ ಅವಳದ್ದು ಒಂದೆರಡು ಬಟ್ಟೆಗಳನ್ನು ಒಂದು ಚೀಲಕ್ಕೆ ಹಾಕಿ ಕೊಡು"

ಸುಧಾಕರ ಅಡಿಗೆಯವರನ್ನು ಕರೆದು, ಅವಳಿಗೆ ತಕ್ಷಣಕ್ಕೆ ಬೇಕಾದ ಬಟ್ಟೆಗಳನ್ನು ಇನ್ನೂ ಕೆಲವು ವಸ್ತುಗಳನ್ನು ಪ್ಯಾಕ್ ಮಾಡುವಂತೆ ತಿಳಿಸಿದ. ಸ್ನೇಹಿತನ ಕೈಗೆ ಒಂದಿಷ್ಟು ಹಣವನ್ನೂ ಒಂದು ಚೆಕ್‌ನ್ನು ಇತ್ತು ಹೇಳಿದ.

"ಸಂಕೋಚ ಮಾಡಿಕೋಬೇಡಪ್ಪಾ. ಹಣದ ಅಗತ್ಯ ಎಲ್ಲರಿಗೂ ಇರುತ್ತೆ. ನೀವು ಹಾಯಾಗಿದ್ದವರು, ನಮ್ಮ ಮನೆಯ ಸಮಸ್ಯೇನ ನೀವು ಪರಿಹಾರ ಮಾಡಲು ಸಾಧ್ಯವಾಗುತ್ಯೇ? ಆದಷ್ಟು ಬೇಗ ವಸುಧಾಳನ್ನು ಯಾವುದಾದರೂ ಲೇಡೀಸ್ ಹಾಸ್ಟೆಲ್ಲಿಗೆ ಸೇರಿಸಿಬಿಡಿ. ಅದೆಷ್ಟು ಖರ್ಚಾದರೂ ಪರವಾಗಿಲ್ಲ. ಅಪ್ಪನನ್ನು ಅವಳು ಬೈದುಕೊಳ್ಳುವುದು ಬೇಡ"

"ಮನೆ ಅಂದ ಮೇಲೆ ಇದೆಲ್ಲಾ ಸಾಮಾನ್ಯ. ಒಂದೆರಡು ದಿನಗಳು ಕಳೆಯಲಿ. ನೋಡೋಣ"

"ಸರಿ.... ಆದರೆ ಅವಳು ಇಲ್ಲಿಗೆ ಬರಲು ಇಷ್ಟಪಡದಿದ್ದರೆ ಬಲವಂತ ಮಾತ್ರ ಮಾಡಬೇಡ. ಮನೆಯಿಂದ ಹೊರಗೇ ಇರುವುದು ಎಷ್ಟು ಕಷ್ಟ. ಏನೇನು ಕಷ್ಟಗಳನ್ನು ಎದುರಿಸಬೇಕಾಗುತ್ತದೆ ಎನ್ನುವುದು ಅವಳಿಗೆ ಮೊದಲು ಅರ್ಥವಾಗಲಿ"

ಸ್ನೇಹಿತ ಹೊರಟುಹೋದ ಎಷ್ಟೋ ಹೊತ್ತಿನ ತನಕವೂ ಸುಧಾಕರ ಬೇಸರದಿಂದ ಹಾಗೇ ನಿಂತಿದ್ದ. ತಾನು ಮಾಡಿದ್ದು ತಪ್ಪೋ..... ಮಗಳು ಮಾಡುತ್ತಿರುವುದು ತಪ್ಪೋ.... ಆದರೆ ಇದನ್ನೆಲ್ಲ ಸರಿ ಮಾಡುವವರ್‍ಯಾರು?

ಎರಡು ದಿನ ಕಳೆಯುವಷ್ಟರಲ್ಲಿ ವಸುಧಾಳ ವರ್ತನೆ ಚಂದ್ರಕಾಂತ ದಂಪತಿಗಳಿಗೆ ಬಿಡಿಸಲಾಗದ ಒಗಟಾಗಿತ್ತು. ತಾನು ಏನೇ ಹೇಳಿದರೂ, ತನ್ನ ತಂದೆಯ ಮನೆಗೆ ಮತ್ತೆ ಹೋಗುವುದಿಲ್ಲವೆಂದು ಹಠ ಮಾಡುತ್ತಿದ್ದ ವಸುಧಾ.... ಅತಿಥಿಯಂತೆ ಕೂತಲ್ಲೇ ಎಲ್ಲವನ್ನು ಪೂರೈಸಿಕೊಳ್ಳುತ್ತಿದ್ದ ಅವಳ ಸೋಮಾರಿತನ.... ಅವಳನ್ನು ಯಾವುದಾದರೂ ಹುಡುಗಿಯರ ಹಾಸ್ಟೆಲ್ಲಿಗೇ ಕಳಿಸುವುದು ಸರಿ ಎಂದು ತೀರ್ಮಾನಿಸಿದರು.

ಶೀಲಾ ತನ್ನ ಕ್ಲಬ್ಬಿನ ಸದಸ್ಯೆಯರಿಗೆ ತಿಳಿಸಿ, ಕಡೆಗೂ ಒಂದು ಹಾಸ್ಟೆಲಿನಲ್ಲಿ ಜಾಗವನ್ನು ಹುಡುಕಿದಳು. ಅದಕ್ಕಾಗಿ ತಗಲುವ ವೆಚ್ಚವನ್ನು ಸುಧಾಕರನಿಂದ ತೆಗೆದುಕೊಂಡು, ಅವಳ ಲಗ್ಗೇಜುಗಳೊಡನೆ ಅವಳನ್ನು ಹಾಸ್ಟೆಲ್ಲಿಗೆ ಬಿಟ್ಟು ಬಂದರು.

"ಥ್ಯಾಂಕ್ಸ್ ಆಂಟೀ, ನನಗೆ ಬೇಜಾರಾದಾಗ ನಾನು ನಿಮ್ಮ ಮನೆಗೆ ಮತ್ತೆ ಬರ್ತೀನಿ" ಅಂತ ವಸುಧಾ ನುಡಿದಾಗ ದಿಗಿಲೂ ಆಗಿತ್ತು. ಅವಳ ಬಗ್ಗೆ ಕರುಣೆಯೂ ಮೂಡಿತ್ತು. ಮುಗ್ಧ ಹುಡುಗಿ.... ಹಠದ ಸ್ವಭಾವದವಳು. ಎಲ್ಲಾ ಹೇಗೆ ನಿಭಾಯಿಸ್ತಾಳೋ ಅಂತ ಆತಂಕವಾಗಿತ್ತು. ಆಗಾಗ್ಗೆ ಬಂದು ನೋಡಿಕೊಳ್ಳುವುದಾಗಿ ತಿಳಿಸಿ, ಬೈ ಹೇಳಿದಳು.

"ವಸುಧಾ ಹಾಸ್ಟೆಲ್ಲಿನ ಜೀವನಕ್ಕೆ ಬಹಳ ಬೇಗ ಹೊಂದಿಕೊಂಡಳು. ಅಲ್ಲಿಂದಲೇ ಕಾಲೇಜಿಗೆ ಹೋಗಿ ಬರುತ್ತಿದ್ದಳು. ಹಣದ ಕೊರತೆಯಿರಲಿಲ್ಲ. ಬೇಕಾದಾಗ ಬ್ಯಾಂಕಿನಿಂದ ಹಣವನ್ನು ಡ್ರಾ ಮಾಡಬಹುದಾಗಿತ್ತು. ಕೆಲವಾರು ತಿಂಗಳ ನಂತರ, ಚಂದ್ರಕಾಂತನ ಸಲಹೆಯಂತೆ, ವಸುಧಾಳ ಹೆಸರಿನಲ್ಲಿ ಬ್ಯಾಂಕ್‌ನಲ್ಲಿ ಒಂದು ಅಕೌಂಟನ್ನು ತೆರೆಯಲಾಗಿತ್ತು. ತಂದೆ ಮಗಳ ಮಧ್ಯೆ ಇದ್ದುದು ಕೇವಲ ಈ ಹಣದ ಕೊಂಡಿ ಒಂದು ಮಾತ್ರ. ಉಳಿದಂತೆ ಒಬ್ಬರನ್ನೊಬ್ಬರು ಮರೆತಂತೆಯೇ ಆಗಿತ್ತು."

ತಮ್ಮ ಮಧುಕರನ ಊರಿನಿಂದ ವಾಪಸ್ಸು ಬಂದ ತಂದೆ ತಾಯಿಗಳಿಗೆ ಸುಧಾಕರ ಯಾವ ವಿಷಯವನ್ನು ತಿಳಿಸಲೇ ಇಲ್ಲ. ಅವರಾಗಿಯೇ ಕೇಳಿದಾಗ ವಸುಧಾ ಬೇರೆ ಊರಿನಲ್ಲಿ ಕಾಲೇಜಿಗೆ ಸೇರಿರುವಳೆಂದು ತಿಳಿಸಿದ. ತಾನೇ ಆಗಾಗ ಹೋಗಿ, ಪುಷ್ಪಾಳ ಮನೆಯಲ್ಲಿ ಕಾಲ ಕಳೆದು ಬರುತ್ತಿದ್ದ. ಬೇಕೋ ಬೇಡವೋ ಈ ರೀತಿಯ ಜೀವನಕ್ಕೆ ತಂದೆ ಮಗಳು ಒಗ್ಗಿ ಹೋಗಿದ್ದರು. ಈಗಾಗಲೇ ಎರಡು ವರ್ಷಗಳು ಕಳೆದುಹೋಗಿವೆ. ಮತ್ತೆ ಬದಲಾಗಲು ಸಾಧ್ಯವಿದೆಯೋ ಇಲ್ಲವೋ.......? ಚಂದ್ರಕಾಂತ ಹಾಗೂ ಅವನ ಹೆಂಡತಿ ವಿದೇಶಕ್ಕೆ ಹೋಗಿ ಅಲ್ಲಿಯೇ ನೆಲೆಸಿಬಿಟ್ಟಿದ್ದರು. ತಂದೆ ತಾಯಿ ಯಥಾಪ್ರಕಾರ, ಎಲ್ಲಾ ಮಕ್ಕಳ ಮನೆಯಲ್ಲೂ ಕೆಲವಾರು ತಿಂಗಳುಗಳು ಇದ್ದು ಬರುತಿಲ್ತದ್ದರು. ತಂಗಿ ತನ್ನ ಮನೆಯಲ್ಲಿದ್ದ ಅಡಿಗೆಯ ಹೆಂಗಸನ್ನು ಇವರ ಮನೆಯಲ್ಲಿರಿಸಿದ್ದಳು. ಆಕೆಗೆ ಹಳೆಯ ಯಾವ ವಿಷಯವೂ ತಿಳಿಯದು. ಅಮೆರಿಕಾದಲ್ಲಿದ್ದ ಮಗಳ ಮನೆಗೆ ಹೋಗಿದ್ದ ತಂಗಿ ಬರುವವರೆಗೂ ಆಕೆ ಇಲ್ಲಿರುವುದೆಂದು ಮಾತಾಗಿತ್ತು.

ಶ್ರೀಕಾಂತ ವಾರ್ಡಿನೊಳಗೆ ಬಂದಾಗ, ಆತ ಅವನನ್ನು ಗುರುತಿಸಿ ಬಂದಾಗ, ಆತ ಅವನನ್ನು ಮುಗುಳ್ನಕ್ಕರು.

"ಈಗ ಹೇಗಿದ್ದೀರಿ ಸಾರ್?" ಎಂದು ಅವನು ವಿಶ್ವಾಸವಾಗಿ ಪ್ರಶ್ನಿಸಿದಾಗ ಅವರ ಕಣ್ಣಲ್ಲಿ ನೀರಾಡಿತು.

"ನನ್ನನ್ನು ಯಾಕೆ ಬದುಕಿಸಿದೆಯಪ್ಪಾ..... ನಾನು ಬದುಕಿ ಏನಾಗಬೇಕಾಗಿದೆ!"

"ಏನ್ಸಾರ್ ಹೀಗಂತೀರಾ......? ಹಾಗೇ ನನ್ನ ಮನಸ್ಸಿನಲ್ಲಿರುವುದಾದ್ರೆ ನಾನು ಇಲ್ಲಿಗೆ ನಿಮ್ಮನ್ನು ತಂದು ಸೇರಿಸುತಿಲ್ಲದ್ದೆನೆ? ಏನೋ ಮನಸ್ಸಿಗೆ ಬೇಸರವಾಗಿರಬಹುದು. ಆದರೆ ನೀವು ಹೀಗೆ ಮಾತನಾಡಿದರೆ ನನಗೆ ಬೇಸರವಾಗುತ್ತೆ ಅಷ್ಟೆ."

"ನಿನಗ್ಯಾಕಪ್ಪಾ ಬೇಸರ? ನಾನು ನಿನಗೇನಾಗಬೇಕು?"

"ನೀವು ನನ್ನ ಮೆಡಿಕಲ್ ಸ್ಟೋರ್ಸ್‌ಗೆ ಆಗಾಗ್ಗೆ ಬರ್ತೀರಿ. ಔಷಧಿ ಕೊಂಡು ಕೊಳ್ತೀರಿ. ನನಗೆ ಲಾಭವಲ್ಲವೆ" ಎಂದು ಅವನು ಹಾಸ್ಯವಾಗಿ ಮಾತನಾಡಿದಾಗ ಆತನೂ ಮುಗುಳ್ನಕ್ಕರು.

"ಪರವಾಗಿಲ್ಲಯ್ಯಾ.... ನಿನ್ನ ಲಾಭಕ್ಕೋಸ್ಕರ ನನ್ನನ್ನು ಉಳಿಸಿಕೊಂಡೆ ಅಂತ ಅನ್ನು......"

"ತಮಾಷೆ ಮಾಡಿದೆ ಅಷ್ಟೆ. ನೀವು ಮೊದಲು ಚೆನ್ನಾಗಿ ರೆಸ್ಟ್‌ತಗೊಳ್ಳಿ. ನಾನು ಮತ್ತೆ ಬಂದು ನೋಡ್ತೀನಿ"

"ಬೇಡಪ್ಪಾ.... ನಾನು ಮನೆಗೆ ಹೋಗ್ತೀನಿ. ನನಗೆ ಇಲ್ಲಿರಲು ಇಷ್ಟವಿಲ್ಲ"

"ಯಾಕೆ? ನಾನು ಬಂದು ನೋಡುವುದು, ಮಾತನಾಡುವುದು ನಿಮಗೆ ಅಷ್ಟು ಬೇಡ ಅಂತನ್ನಿಸುತ್ತೇನೊ....." ಅವನು ಮತ್ತೆ ಲಘುವಾಗಿ ನುಡಿದ.

"ತಪ್ಪು ತಿಳಿದುಕೋ ಬೇಡಯ್ಯಾ.... ಯಾರಾದ್ರೂ ಆಸ್ಪತ್ರೇಲಿ ಒಂಟಿಯಾಗಿ ಮಲಗಿರಲು ಇಷ್ಟ ಪಡ್ತಾರಾ? ಅದಕ್ಕೇ ಮನೆಗೆ ಹೋಗ್ತೀನಿ ಅಂತಂದೆ. ನೀನು ಅಲ್ಲಿಗೇ ಬರಬಹುದು ನಿನಗಿಷ್ಟವಿದ್ದರೇ....."

"ಸರಿ, ನಿಮ್ಮ ಮನೆ ಎಲ್ಲಿದೆ ಅಂತ ತಿಳಿಸಿ ನಾನೀಗಲೇ ಹೋಗಿ ನಿಮ್ಮ ಮನೆಯವರಿಗೆ ತಿಳಿಸಿ ಬರ್ತೀನಿ" ಅಂತ ಕೇಳಿದಾಗ ಆತ ದೃಷ್ಟಿ ಕೆಳಗೆ ಮಾಡಿದರು. ಶ್ರೀಕಾಂತ ಗಂಭೀರನಾದ. ಅವರ ಪಕ್ಕದಲ್ಲಿ ಕುಳಿತು ಅವರ ಕೈಗಳನ್ನು ಹಿಡಿದ.

"ನನ್ನನ್ನು ನಿಮ್ಮ ಒಬ್ಬ ಮಗನಂತೆ ಭಾವಿಸಿ ಸಾರ್..... ನಿಮಗೇನು ಸಹಾಯ ಬೇಕೋ ನಿಸ್ಸಂಕೋಚವಾಗಿ ಕೇಳಿ" ಅವನ ವಿಶ್ವಾಸಕ್ಕೆ ಅವರು ಕರಗಿ ನೀರಾಗಿ ಹೋದರು.

"ಆಗಲಪ್ಪಾ..... ನಿನ್ನಿಂದ ನನಗೊಂದು ಸಹಾಯವಾಗಬೇಕು. ನಾನು ಇಲ್ಲಿರುವ ವಿಷಯ ಯಾರಿಗೂ ತಿಳಿಯಕೂಡದು. ನಮ್ಮ ಮನೆಯಲ್ಲಿ ಒಬ್ಬ ಅಡಿಗೆಯ ಹೆಂಗಸರಿದ್ದಾರೆ. ಆಕೆ ಗಾಬರಿಯಾಗಬಹುದು. ಆದ್ದರಿಂದ ಅವರಿಗೆ ಈಗಲೇ ವಿಷಯ ತಿಳಿಸುವುದು ಬೇಡ. ಆದರೆ, ಅವರು ಮನೆಯಲ್ಲಿ

ಒಬ್ಬರೇ ಇರುವುದೂ ಸರಿಯಲ್ಲ. ನಾನೀಗ ಏನು ಮಾಡಲಿ ನೀನೇ ಹೇಳು"

ಶ್ರೀಕಾಂತ ಗೊಂದಲಕ್ಕೊಳಗಾದ. "ಇವರು ಆಸ್ಪತ್ರೆಯಲ್ಲಿದ್ದಾರೆ ಅಂತ ಮನೆಯವರಿಗೆ ತಿಳಿಯದಿದ್ದರೆ ಹೇಗೆ? ಇವರಿಗೇನಾದರೂ ಹೆಚ್ಚು ಕಡಿಮೆ ಆದರೇ......" ಎಂದುಕೊಂಡು ಮಹೇಶನ ಮುಖ ನೋಡಿದ.

ರೋಗ ರಟ್ಟು ಅಂತ ಅಂತಾರೆ..... ಇವರ್‍ಯಾಕೆ ಇವರ ಅನಾರೋಗ್ಯವನ್ನು ಮುಚ್ಚಿಡಲು ಪ್ರಯತ್ನಿಸುತ್ತಿದ್ದಾರೆ. ಆಮೇಲೆ ತನ್ನ ತಲೆಯ ಮೇಲೆ ಆರೋಪ ಬಂದರೇ.... ಎಂದು ಗಾಬರಿಯೂ ಆಯಿತು.

"ನೋಡಿದ್ಯಾ? ನನ್ನ ವಿಷಯ ಅಂದರೆ ಹೀಗೇ..... ನನಗೆ ಸಹಾಯ ಮಾಡಲು ಹಿಂದೆ ಮುಂದೆ ನೋಡ್ತಾರೆ"

"ಹಾಗಲ್ಲ..... ಡಾಕ್ಟರ ಹತ್ತಿರ ಮಾತನಾಡಿದ್ರಾ?"

"ಇಲ್ಲ, ಡಾಕ್ಟರನ್ನನಂಬೋದು ಕಷ್ಟ. ನಮಗೆ ತಿಳಿಯದಂತೆ ಅವರು ಮನೆಯವರಿಗೆ ಎಲ್ಲಾ ವಿಷಯವನ್ನು ತಿಳಿಸಿರುತ್ತಾರೆ."

"ಅದು ಸರಿ. ಆದರೆ ಮನೆಯವರಿಗೆ ವಿಷಯ ತಿಳಿಯಬೇಕಲ್ಲವೇ?"

"ಹೇಳಿದ್ನಲ್ಲಯ್ಯಾ.... ಅಲ್ಲಿ ಇರೋದು ಬರೀ ಅಡಿಗೆಯವರು ಅಂತ. ನನ್ನ ಮನೆಯವರು ಯಾರೂ ಇಲ್ಲ" ಆತ ಏರು ಧ್ವನಿಯಲಿ ಜೋರಾಗಿ ಮಾತನಾಡಿದಾಗ ಇವನು ಮೆತ್ತಗಾದ. ಮಹೇಶ ಪಿಸುದನಿಯಲ್ಲಿ ನುಡಿದ.

"ಎಲ್ಲರೂ ಇಲ್ಲೇ ಎಲ್ಲಾದರೂ ಟೂರ್ ಹೋಗಿರಬಹುದು. ಮನೇಲಿ ಬೆಲೆ ಬಾಳುವ ಸಾಮಾನುಗಳಿರಬಹುದು. ಕಳುವಾಗಿ ಹೋದರೆ ಅಂತ ಚಿಂತೆಯೇನೋ" ಅಷ್ಟರಲ್ಲಿ ಆತ ಇವರು ಯಾರು...... ಅಂತ ಕೇಳಿದಾಗ, ಮಹೇಶನ ಪರಿಚಯ ಮಾಡಿಕೊಟ್ಟ.

"ನೋಡಪ್ಪಾ. ನನ್ನ ಪಾಡಿಗೆ ನಾನಿದ್ದೆ. ಈಗ ಏನು ಮಾಡಬೇಕೂಂತ ಗೊತ್ತಾಗ್ತಿಲ್ಲ. ಒಳ್ಳೆ ಗ್ರಹಚಾರವಾಯ್ತಲ್ಲ"

"ಹೋಗಲಿ ಬಿಡಿ ಸಾರ್. ನೀವು ರೆಸ್ಟ್‌ತಗೊಳ್ಳಿ. ಟೆನ್ಷನ್ ಮಾಡಿಕೋಬೇಡಿ. ನಾನು ಮತ್ತೆ ಡಾಕ್ಟರನ್ನು ಕೇಳಿ ನೋಡ್ತೀನಿ. ಅವರು ಒಪ್ಪಿದರೆ ನಾನು ಡಿಸ್ಚಾರ್ಜ್ ಮಾಡಿಸಿ ನಿಮ್ಮ ಮನೆಗೆ ನಿಮ್ಮನ್ನು ಕ್ಷೇಮವಾಗಿ ತಲುಪಿಸ್ತೀನಿ"

"ಅಷ್ಟು ಮಾಡಿಬಿಡಪ್ಪಾ ಸಾಕು" ಎಂದು ಆತ ಒತ್ತಿ ನುಡಿದಾಗ, ಮಹೇಶನೊಡನೆ ಹೊರಗೆ ಬಂದ.

"ಈಗೇನು ಮಾಡೋದೋ.... ಎಂಥಾ ಫಜೀತಿ ನೋಡು" ಮಹೇಶ

ಕೇಳಿದಾಗ, "ತಡೀ ನೋಡೋಣ" ಎಂದು ಮತ್ತೆ ಡಾಕ್ಟರ್ ಬಳಿ ಬಂದು ಮಾತನಾಡಿದ.

"ನೋಡೀ ಮಿಸ್ಟರ್.... ಇಂಥ ಸಮಯದಲ್ಲಿ ಯಾರಾದ್ರೂ ರೋಗಿಯ" ಅಭಿಪ್ರಾಯ ಕೇಳ್ತಾರಾ? ಅವರ ಕಂಡೀಷನ್ ಕೆಡಲೂಬಹುದು. ಯಾವುದಕ್ಕೂ ಇಪ್ಪತ್ನಾಲ್ಕು ಗಂಟೆಗಳ ಅಬ್ಸರ್ವೇಶನ್ ಅಗತ್ಯ. ಇಷ್ಟರ ಮೇಲೆ ನಿಮ್ಮಿಷ್ಟ. ಅವರಿಗೇನಾದರೂ ಹೆಚ್ಚು ಕಡಿಮೆ ಆದರೆ ಅದಕ್ಕೆ ನೀವು ಜವಾಬ್ದಾರರಾಗ್ತೀರಿ ನಾವಲ್ಲ. ಎಂದು ಕಟುವಾಗಿ ನುಡಿದಾಗ ಶ್ರೀಕಾಂತ ತನ್ನ ತುಟಿಗಳನ್ನು ಕಡಿದು ಕೊಂಡ. ಇವತ್ತು ತಾನು ಬೆಳಿಗ್ಗೆ ಎದ್ದ ಹೊತ್ತು ಖಂಡಿತಾ ಸರಿಯಿಲ್ಲ. ಇಲ್ಲದಿದ್ದರೆ ಹೀಗೇಕೆ ಆಗುತ್ತಿತ್ತು ಎಂದುಕೊಂಡು ಮಹೇಶನ ಮುಖ ನೋಡಿದ. ಅವನು ಕೆಟ್ಟದಾಗಿ ನಕ್ಕ. ಇಬ್ಬರೂ ಹೊರಗೆ ಬಂದರು.

"ಹೌದು ಇಂಥಾ ವಿಷಯದಲ್ಲಿ ರೋಗಿಗಳು ಹೇಳಿದಂತೆ ಕೇಳುವುದು ಸರಿಯಲ್ಲ. ಡಾಕ್ಟರು ಹೇಳಿದ್ದು ಸರಿ. ಇವತ್ತೊಂದು ರಾತ್ರಿ ಅವರು ಇಲ್ಲಿರಲಿ. ಮನೆಯಲ್ಲಿ ಯಾರಿದಾರೋ ಅವರಿಗೆ ವಿಷಯ ತಿಳಿಸುವುದು ಒಳ್ಳೆಯದು. ನಾಳೆ ಒಂದು ಹೋಗಿ ಇನ್ನೊಂದು ಆದರೆ ಎಲ್ಲಾ ನಿನ್ನ ತಲೆಗೆ ಬರುತ್ತೆ ಅಷ್ಟೆ" ಎಂದ ಮಹೇಶ.

"ಹೌದು ಹೌದು" ಎಂದು ಒಪ್ಪಿಕೊಂಡ. ಡಾಕ್ಟರು ಹೇಳಿದ್ದನ್ನೇ ಆತನೊಡನೆ ಹೇಳಿದಾಗ ಆತನ ಮುಖ ಗಂಭೀರವಾಯಿತು.

"ಸರಿ, ಅದೇನೇನು ಆಗಿ ಹೋಗಿತ್ತೋ ಆಗಿ ಹೋಗಲಿ. ಆದರೆ ನೀವೇ ಹೋಗಿ ನಮ್ಮ ಮನೆಯ ಅಡಿಗೆಯವರಿಗೆ ವಿಷಯ ತಿಳಿಸಬೇಕು. ಈಗಲೇ ಯಾರಿಗೂ ತಿಳಿಸಬಾರದು ಅಂತ ಸ್ಪಷ್ಟವಾಗಿ ಹೇಳಿಬಿಡಿ. ಹಾಗೇ ಆಕೆ ಒಬ್ಬರೇ ಮಾತ್ರ ಮನೆಯಲ್ಲಿರಕೂಡದು. ಆಕೆಗೇನಾದರೂ ಹೆಚ್ಚು ಕಡಿಮೆ ಆದರೆ ನನ್ನ ತಂಗಿ ಏನಂದಾಳು.? ಅವರ ಮನೆಯವರಿಗೆ ಏನುತ್ತರ ಹೇಳಲಿ? ನಿಮ್ಮ ಮನೆಗೆ ಆಕೆ ಬರಲು ಒಪ್ಪಿದರೆ ಕರೆದುಕೊಂಡು ಹೋಗಿ.... ಇಲ್ಲ ಆಕೆಯ ಜತೆ ಯಾರಾದರೂ ನಮ್ಮ ಮನೆಯಲ್ಲಿರಲಿ"

ಇದೊಳ್ಳೆ ಪೀಕಲಾಟ ಎಂದೆನಿಸಿತು ಇಬ್ಬರಿಗೂ. ಯಾರಾದರೂ ಅಪರಿಚಿತರಿಗೆ ಸಹಾಯ ಮಾಡಲು ಹೋದರೆ.... ಹೀಗೆಲ್ಲಾ ಆಗಬಹುದು ಅಂತೆನಿಸಿರಲಿಲ್ಲ. ಆದರೂ ಈಗ ಬೇರೆ ವಿಧಿ ಇಲ್ಲ. "ಆಗಲಿ" ಎಂದು ಆತನಿಗೆ ಹೇಳಿ, ಅವರ ಮನೆಯ ವಿಳಾಸವನ್ನು ತಿಳಿದುಕೊಂಡು ಹೊರ ಬಂದರು.

ಅಡಿಗೆಯ ಕಾವೇರಮ್ಮ ಬಾಗಿಲನ್ನು ತೆಗೆದು ಅಪರಿಚಿತರನ್ನು ಕಂಡು ದಿಗಿಲುಗೊಂಡಳು. ಮಹೇಶ ತಮ್ಮ ಪರಿಚಯ ಹೇಳಿಕೊಂಡ. ಶ್ರೀಕಾಂತ ವಿಷಯವನ್ನು ಸಂಕ್ಷಿಪ್ತವಾಗಿ ತಿಳಿಸಿದ. ಆಕೆಯ ಮುಖ ಬಿಳುಚಿಕೊಂಡಿತು.

"ಗಾಬರಿಯಾಗಬೇಡಿ..... ನಿಮಗೆ ನಮ್ಮ ಮೇಲೆ ನಂಬಿಕೆ ಇಲ್ಲದಿದ್ದರೆ, ನಮ್ಮ ಜತೆ ಬನ್ನಿ. ನೀವೇ ಡಾಕ್ಟರ್ ಹತ್ತಿರ ಮಾತನಾಡಿ" ಎಂದ ಮಹೇಶ.

"ನಾನೀಗ ಏನು ಮಾಡಲಿ? ಯಾರಿಗೆ ತಿಳಿಸಲಿ?"

"ಯಾರಿಗೂ ಈಗಲೇ ತಿಳಿಸುವುದು ಬೇಡ ಅಂತ ಅವರಿಷ್ಟ. ನಾಳೆ ಬೆಳಿಗ್ಗೆ ಅವರೇ ಮನೆಗೇ ಬಂದು ಬಿಡ್ತಾರಲ್ಲ"

"ಆದರೂ..... ಆದರೂ..... ಆಕೆ ತಡವರಿಸಿದಾಗ, ಅವಳ ಆತಂಕ ಇಬ್ಬರಿಗೂ ಅರ್ಥವಾಗಿತ್ತು"

"ಯಾರೇ ನಿಮ್ಮ ಪರಿಸ್ಥಿತಿಯಲ್ಲಿದ್ದರೂ, ಹೀಗೆ ಗೊಂದಲವಾಗುವುದು ಸಹಜ. ನೀವು ಒಬ್ಬರೇ ಮನೆಯಲ್ಲಿರುತ್ತೀರಲ್ಲ ಅಂತ ರಾಯರಿಗೆ ಆತಂಕ. ನಿಮಗೆ ನಿಜವೋ ಸುಳ್ಳೋ ಎನ್ನುವ ಸಂದೇಹ. ಎಷ್ಟೇ ಆಗಲೀ ನಾವೂ ಪರಿಚಿತರಲ್ಲ. ನಿಮ್ಮ ಮನೇಲಿ ಫೋನ್ ಇದ್ದರೆ, ಈಗಲೇ ಆಸ್ಪತ್ರೆಗೆ ಫೋನು ಮಾಡಿ ಖಚಿತ ಮಾಡಿಕೊಳ್ಳಿ"

"ನಿಮ್ಮಿಬ್ಬರನ್ನು ನೋಡಿದರೆ ಒಳ್ಳೆಯವರ ತರಹ ಕಾಣ್ತೀರಿ. ನಿಮ್ಮ ಮೇಲೆ ನನಗೆ ಸಂದೇಹವಿಲ್ಲ. ಆದರೆ ಯಾಕೆ ಹೀಗಾಯ್ತು ಅಂತ"

"ಯಾಕೆ ಅಂತ ಹೇಗೆ ಹೇಳೋದು....! ಬೆಳಗಿನವರೆಗೂ ನೀವು ಒಬ್ಬರೇ ಇರ್ತೀರಿ. ಯಾರಿಗೂ ಬಾಗಿಲು ತೆಗೆಯಬೇಡಿ. ಯಾರದ್ದಾದರೂ ಫೋನ್‌ಕಾಲ್ ಬಂದರೂ ಯಾರಿಗೂ ವಿಷಯ ತಿಳಿಸಬೇಡಿ. ನಾವಿನ್ನು ಬರ್ತೀವಿ. ನಿಮಗೇನಾದರೂ ಬೇಕಿದ್ದರೆ, ಈ ನಂಬರಿಗೆ ಫೋನ್ ಮಾಡಿ" ಎಂದು ತಮ್ಮಿಬ್ಬರ ಮನೆಯ ಫೋನ್ ನಂಬರನ್ನು ಕೊಟ್ಟ.

ಪುನಃ ತನ್ನ ಅಂಗಡಿಗೆ ಬಂದು, ಎಲ್ಲಾ ಸರಿಯಾಗಿದೆಯೋ ಇಲ್ಲವೋ ಪರೀಕ್ಷಿಸಿ ಬೀಗ ಹಾಕಿ ಮನೆಯ ಕಡೆ ಹೊರಟ. ಮಹೇಶನಿಗೆ ಮತ್ತೊಮ್ಮೆ ಹೇಳುವುದನ್ನು ಮರೆಯಲಿಲ್ಲ.

ಮಗ ಎಂದಿನಂತಿರದೇ ಮೌನವಾಗಿ ಊಟ ಮಾಡುವುದನ್ನು ತಾಯಿ ಪಾರ್ವತಿ ಗಮನಿಸಿದಳು.

"ಯಾಕೋ ಕಾಂತೂ, ಮಂಕಾಗಿದೀಯ. ಹುಶಾರಾಗಿದೀಯ ತಾನೇ....."

"ಹೂಂನಮ್ಮ, ಏನಿಲ್ಲ" ಎಂದ. ಏಕೋ ಏನೋ ನಡೆದ ವಿಷಯಗಳನ್ನು ತಾಯಿಗೆ ತಿಳಿಸಲು ಇಷ್ಟವಾಗಲಿಲ್ಲ. ಊಟ ಮುಗಿಸಿ ಕೈಯಲ್ಲಿ ಆ ದಿನದ ದಿನಪತ್ರಿಕೆಯನ್ನು ಹಿಡಿದು ತನ್ನ ರೂಮಿಗೆ ಹೊರಟುಹೋದ. ಎಲೆಗೋಮೆ ಹಚ್ಚುತ್ತಿದ್ದ ರಮ, ಶ್ರೀಕಾಂತ ತನ್ನನ್ನು ಮಾತನಾಡಿಸಲಿಲ್ಲವೆನ್ನುವುದನ್ನು ಗಮನಿಸಿದಳು. ಕಡೇಪಕ್ಷ ದಿನದಂತೆ, ವಿಶೂ ಬಗ್ಗೆ ಸಹ ಕೇಳಲಿಲ್ಲವಲ್ಲ ಅಂತನ್ನಿಸಿತ್ತು. ಮನಸ್ಸಿಗೆ ಮೋಡ ಕವಿಯಿತು.

"ಶ್ರೀಕಾಂತ ಎಷ್ಟಾಗಲೀ ತನ್ನ ಮೈದುನ. ಅವನೇಕೆ ತನ್ನನ್ನು, ತನ್ನ ಮಗನನ್ನು ದಿನಾ ವಿಚಾರಿಸಬೇಕು" ಎಂದು ಮನ ನುಡಿದರೂ, ಏನೋ ದುಃಖ ತುಂಬಿಕೊಂಡಿತ್ತು. ಏನೋ ಕಳೆದು ಹೋದ ಅನುಭವ.

ಕೈಯಲ್ಲಿ ದಿನಪತ್ರಿಕೆ ಹಿಡಿದರೂ, ಮನಸ್ಸು ಆ ದಿನ ನಡೆದ ಘಟನೆಗಳನ್ನೇ ಮೆಲಕು ಹಾಕುತ್ತಿತ್ತು. ರಮಾ ಬಾಗಿಲ ಬಳಿನಿಂತು ಇಣುಕಿ ನುಡಿದಳು.

"ಶ್ರೀಕಾಂತ, ನಿನಗ್ಯಾರೋ ಕಾವೇರಮ್ಮ ಅನ್ನೋರು ಫೋನು ಮಾಡಿದ್ದಾರೆ" ಆಂ ಎನ್ನುತ್ತಾ ಧಿಗ್ಗನೆ ಎದ್ದ.

"ಹಲೋ" ಎಂದ.

"ನನಗ್ಯಾಕೋ ದಿಗಿಲಾಗ್ತಾ ಇದೆಯಪ್ಪಾ. ಬೆಳಿಗ್ಗೆ ಸ್ವಲ್ಪ ಬೇಗ ಬರ್ತೀಯಾ...... ನಾನು ಸ್ವಲ್ಪ ನಿಮ್ಮ ಹತ್ತಿರ ಮಾತನಾಡಬೇಕು" ಎಂದು ಅಡಿಗೆಯ ಕಾವೇರಮ್ಮ ನುಡಿದಾಗ ಇವನಿಗೆ ಆಶ್ಚರ್ಯವೆನಿಸಲಿಲ್ಲ. ಎಷ್ಟಾಗಲೀ ಆಕೆ ಹೊರಗಿನವರು, ಅಲ್ಲದೇ ತನ್ನನ್ನು ಪರೀಕ್ಷಿಸಲು ಫೋನ್ ಮಾಡಿರಲೂ ಬಹುದು ಅಂತಂದುಕೊಂಡ. 'ಆಗಲಿ' ಎನ್ನುತ್ತಾ ಫೋನನ್ನಿಟ್ಟ. ಅಲ್ಲಿಯೇ ನಿಂತಿದ್ದ ರಮಾಳ ಕಡೆ ಅವನ ಗಮನ ಹೋಯ್ತು.

"ಇನ್ನು ಮಲಗಲಿಲ್ವಾ ನೀವೆಲ್ಲಾ? ವಿಶೂ ಎದ್ದಿದಾನಾ?"

"ಇಲ್ಲ, ಮಲಗಿಬಿಟ್ಟ. ನಿನಗಾಗಿ ಕಾದು ಕಾದು ಸಾಕಾಗಿ ನಿದ್ದೆ ಹೋದ"

"ಸರಿ ಎಲ್ಲಿ ಎಬ್ಬಿಸು ಅವನನ್ನು. ನಾನು ಅವನ ಹತ್ತಿರ ಆಟವಾಡಬೇಕು" ಎಂದಾಗ ಪಾರ್ವತಿ ಗದರಿದಳು.

"ಚೆನ್ನಾಗಿದೆ. ನಡುರಾತ್ರಿಯಲ್ಲಿ ಮಲಗಿದ ಮಗುವನ್ನು ಎಬ್ಬಿಸಿ ಯಾರಾದ್ರೂ ಆಟ ಆಡ್ತಾರಾ! ಅದ್ಸರಿ, ಏನು ವಿಷಯ? ಈ ಕಾವೇರಮ್ಮ ಯಾರು!"

"ನಾನು ಮಹೇಶ ಎಲ್ಲೋ ಹೋಗಿದ್ದೆವು. ಅವರು, ಅವರ ಮನೆ ಅಡಿಗೆಯವರು" ಅವನು ನುಡಿದ. ರಮಾ ನಕ್ಕಳು.

"ಮಹೇಶ ಅಡಿಗೆಯವರನ್ನು ಇಟ್ಟುಕೊಳ್ಳುತ್ತಾನಾ? ಸುಳ್ಳು....."

"ಸುಳ್ಯಾಕೆ? ಅವನ ಹೆಂಡತಿ ಬಾಣಂತನಕ್ಕೆ ಹೋಗಿದಾಳಲ್ಲ..... ಅವನಿಗೆ ಅಡಿಗೆ ಮಾಡೊಕ್ಕೆಲ್ಲಿ ಬರುತ್ತೆ?" ತಾನು ತಟಕ್ಕನೇ ನುಡಿದಾಗ ಅಲ್ಲಿ ಇದ್ದಕ್ಕಿದ್ದಂತೆ ಗಂಭೀರವಾದ ಮೌನ ಆವರಿಸಿಕೊಂಡಿತು. ರಮಾ ತನ್ನ ರೂಮಿಗೆ ಹೊರಟುಹೋಗಿದ್ದಳು. ತಾಯಿ ಪೆಚ್ಚಾಗಿದ್ದಳು. ಮಗನ ಕಡೆ ತಿರುಗಿ ಏನಾದರೂ ಆಡುವ ತವಕದಲ್ಲಿದ್ದಳು. ಅಷ್ಟರಲ್ಲಿ ಅವನು ಅಲ್ಲಿಂದ ಮರೆಯಾದ.

ಮರೆಯದೇ ರೂಮಿನ ಬಾಗಿಲನ್ನು ಭದ್ರಪಡಿಸಿಕೊಂಡು ಮತ್ತೆ ಮಂಚದ ಮೇಲೆ ಉರುಳಿಕೊಂಡ. ತಂದೆ ಯಾವುದೋ ಊರಿಗೆ ಹೋಗಿದ್ದವರು ಇನ್ನು ಬಂದಿರಲಿಲ್ಲ. ತಾಯಿ ಒಬ್ಬಳೇ ಅಡಿಗೆ ಮನೆಯಲ್ಲಿ ಉಳಿದ ಕೆಲಸಗಳನ್ನು ಮಾಡುತ್ತಿರಬಹುದು ಅಂತೆನ್ನಿಸಿದಾಗ, ತಾಯಿ ತನ್ನನ್ನು ಕುರಿತು ಏನು ಚಿಂತಿಸುತ್ತಿರಬಹುದು ಅಂತ..... ಇನ್ನೇನು.... ಶ್ರೀಕಾಂತ ಇನ್ನು ಎಷ್ಟು ವರ್ಷ ಹೀಗೇ ಇರ್ತೀಯೋ... ಈಗೇನು ಕಡಿಮೆ ವಯಸ್ಸಲ್ಲ. ನನಗೂ ಹೆಣ್ಣಿನ ಕಡೆಯವರಿಗೆ ಉತ್ತರ ಹೇಳಿ ಹೇಳಿ ಸಾಕಾಗಿದೆ. ಇತ್ಯಾದಿ ಇತ್ಯಾದಿ..... ಶ್ರೀಕಾಂತ ಮಗ್ಗುಲು ಬದಲಾಯಿಸಿದ. ಮನದ ಮಡಿಕೆಗಳು ಬಿಚ್ಚಿಕೊಂಡವು. ತಾನು ಹೀಗೇ ಇರಲು ಬಯಸಿದ್ದನೇ......?

ತಂಗಿ ರಂಜನಿ ಶ್ರೀಕಾಂತನಿಗಿಂತ ಎರಡು ವರ್ಷ ಚಿಕ್ಕವಳು. ಎಲ್ಲರಿಗಿಂತ ದೊಡ್ಡವನು ಪ್ರಕಾಶ. ಮೂವರೂ ಒಂದೇ ಸ್ಕೂಲಿಗೆ ಹೋಗುತ್ತಿದ್ದರು. ಮುಂದಿನ ರಸ್ತೆಯಲ್ಲಿದ್ದ ರಮಾ ಸಹ ದಿನಾ ಇವರ ಜತೆಯಲ್ಲಿ ಸ್ಕೂಲಿಗೆ ಹೋಗುತ್ತಿದ್ದಳು. ಅವಳು ರಂಜನಿಯ ಸ್ನೇಹಿತೆ. ಆದರೆ ವಯಸ್ಸಿನಲ್ಲಿ ಒಂದು ವರ್ಷಕ್ಕೆ ಅವಳಿಗಿಂತ ದೊಡ್ಡವಳು. ಶ್ರೀಕಾಂತನ ಸಹಪಾಠಿ. ನಾಲ್ಕು ಜನವೂ ಒಟ್ಟಿಗೇ ಹೋಗಿ ಬರುತ್ತಿದ್ದರು. ಅವರ ಮನೆಯ ಸಮೀಪದಲ್ಲಿದ್ದ ದೊಡ್ಡ ಮೈದಾನದಲ್ಲಿ ಸಾಯಂಕಾಲದ ಹೊತ್ತು ಆಟ ಆಡುತ್ತಿದ್ದರು.

ಬೆಳೆದು ದೊಡ್ಡವರಾದಂತೆ, ಪ್ರಕಾಶ ಕಾಲೇಜಿಗೆ ಸೇರಿದಾಗ, ಇವರು ಮೂವರೇ ಒಂದಾದರು. ಆದರೂ ಪ್ರಕಾಶ ಆಗಾಗ್ಗೆ ಇವರುಗಳ ಜತೆ ಮಾತಿಗೆ ಹರಟೆಗೆ ಸೇರುತ್ತಿದ್ದ. ಎಸ್.ಎಸ್.ಎಲ್.ಸಿ.ಯಲ್ಲಿ ರಮಾ ಫೇಲಾದಾಗ ಅವಳಿಗಿಂತ ಹೆಚ್ಚಾದ ದುಃಖವಾದುದು ಶ್ರೀಕಾಂತನಿಗೆ.

"ಏನೇ ರಮಾ, ಯಾಕೆ ಫೇಲಾಗಿ ಬಿಟ್ಟೆ. ನಾನು ನೀನು ಒಟ್ಟಾಗಿ ಕಾಲೇಜಿಗೆ ಹೋಗುವ ಆಸೆ ಇಟ್ಟುಕೊಂಡಿದ್ದೆ" ಎಂದಿದ್ದ ತಮಾಷೆಯಾಗಿ.

"ಅಷ್ಟು ಆಸೆ ಇದ್ದರೆ, ನೀನೂ ಈ ವರ್ಷಕಾಲೇಜಿಗೆ ಸೇರಬೇಡ"

ಎಂದಿದ್ದಳು ನಗುತ್ತಾ. ಅವನು ತಲೆಯ ಮೇಲೆ ಮೊಟಕಿದ್ದ. ರಮಾ ಪ್ರಕಾಶನ ಬಳಿ ತನಗೆ ಅರ್ಥವಾಗದ ವಿಷಯಗಳ ಬಗ್ಗೆ ಕೆಲವೊಮ್ಮೆ ಪಾಠ ಹೇಳಿಸಿಕೊಳ್ಳಲು ಬರುತ್ತಿದ್ದಳು. ಹೀಗೆ ಅವರ ಸ್ನೇಹ ಗಾಢವಾಯಿತು. ಹಾಗೇ ಮುಂದುವರೆಯಿತು. ಆದರ ಆ ಬಗ್ಗೆ ಮನೆಯವರ್‍ಯಾರಿಗೂ ತಿಳಿಯಲೇ ಇಲ್ಲ. ಆ ವರ್ಷ ಕಷ್ಟಪಟ್ಟು ಓದಿ ಪಾಸುಮಾಡಿದ ರಮಾ ಹತಿರದಲ್ಲೇ ಇದ್ದ ಹುಡುಗಿಯರ ಕಾಲೇಜಿಗೆ ಸೇರಿಕೊಂಡಿದ್ದಳು. ಈಗ ನಾಲ್ಕು ಜನವೂ ನಾಲ್ಕು ದಿಕ್ಕಿಗೆ ಅನ್ನುವಂತಾದರೂ ರಮಾ ಮಾತ್ರ ದಿನಾ ರಂಜನಿಯ ನೆವ ಮಾಡಿಕೊಂಡು ಇವರ ಮನೆಗೆ ಬರುತ್ತಿದ್ದಳು. ಪ್ರಕಾಶನ ಪಿ.ಯು.ಸಿ. ಪರೀಕ್ಷೆ ಮುಗಿದಿತ್ತು. ಇಂಜನಿಯರಿಂಗ್ ಕ್ಲಾಸುಗಳು ಪ್ರಾರಂಭವಾಗಲು ಸಾಕಷ್ಟು ಸಮಯ ಬಾಕಿ ಇತ್ತು.

ಶ್ರೀಕಾಂತ ಮೆಡಿಕಲ್ ಕಾಲೇಜಿಗೆ ಸೇರುವ ಹಂಬಲದಲ್ಲಿ ಬಹಳ ಶ್ರಮಪಟ್ಟು ಓದುತ್ತಿದ್ದ. ಪರೀಕ್ಷೆ ಮುಗಿಯುವವರೆಗೂ ಅವನಿಗೆ ವಿಶ್ರಾಂತಿ ಇಲ್ಲ. ರಂಜಿನಿ ಸಹ ತನ್ನ ಪರೀಕ್ಷೆಗೆ ತಯಾರಿ ನಡೆಸುತ್ತಿದ್ದಳು. ಅವರವರ ಚಿಂತೆ ಅವರವರಿಗೆ. ಆದರೆ ರಮಾ ಪ್ರಕಾಶರು ಮಾತ್ರ ನಿಶ್ಚಿಂತರಾಗಿದ್ದರು.

ಆದರೆ ಶ್ರೀಕಾಂತನ ಆಸೆ ಫಲಿಸಲಿಲ್ಲ. ಅವನು ನಿರೀಕ್ಷಿಸಿದಷ್ಟು ಮಾರ್ಕ್ಸ್ ಬರಲಿಲ್ಲವಾದ್ದರಿಂದ ಅವನಿಗೆ ಮೆಡಿಕಲ್ ಕಾಲೇಜಿಗೆ ಸೀಟು ಸಿಗಲಿಲ್ಲ. ತೀರಾ ನಿರಾಶಗೊಂಡ ಶ್ರೀಕಾಂತ..... ಇದನ್ನು ಗಮನಿಸಿದವಳು ರಂಜಿನಿ. ರಮಾಳೊಡನೆ ವ್ಯಥೆಯನ್ನು ಹೇಳಿಕೊಂಡಿದ್ದಳು.

ಕಡೆಗೆ ಶ್ರೀಕಾಂತ, ತಂದೆಯ ಸಲಹೆಯನ್ನು ತಳ್ಳಿ ಹಾಕದೇ ಬಿ.ಫಾರ್ಮ ಕೋರ್ಸಿಗೆ ಸೇರಿಕೊಂಡಿದ್ದ. ಗೆಲುವಿಲ್ಲದ ಅವನ ಮುಖವನ್ನು ಕಂಡು ರಮಾ ಚುಡಾಯಿಸಿದ್ದಳು.

"ಯಾಕೋ ಹೀಗೆ ಡಲ್ ಆಗಿದೀಯ? ನಾನು ಫೇಲಾದಾಗ ಸಹ ಇಂತಹ ಹರಳೆಣ್ಣೆ ಕುಡಿದ ಮುಖ ಮಾಡಿ ಕೊಂಡಿರಲಿಲ್ಲ"

"ನಾನು ಹಾಗೇನೇ..... ನಿನಗೇನು ಕಷ್ಟ?" ಎಂದಿದ್ದ ರೇಗುತ್ತಾ.

"ಏಯ್, ನಾನು ತಮಾಷೆ ಮಾಡಿದರೆ, ಯಾಕಿಷ್ಟು ಸೀರಿಯಸ್ ಆಗಿ ತಗೋತೀಯ" ಎನ್ನುತ್ತಾ ಅವಳು ಅವನ ಭುಜಗಳನ್ನು ತನ್ನ ಕೈಯಿಂದ ಒತ್ತಿದಾಗ, ಅವನು ಅವಳನ್ನೇ ನೋಡಿದ. ಅವಳ ಕಣ್ಣುಗಳಲ್ಲಿ ಏನೋ ಹೊಳಪನ್ನು ಕಂಡ. ಇವಳ ಹಾಗೆ ನಗುನಗುತ್ತಾ ಇದ್ದರೆ ಏನನ್ನಾದರೂ ಸಾಧಿಸಬಹುದು ಅಂತನ್ನಿಸಿತು.

"ಸಾರಿ ರಮಾ..., ಯಾಕೋ ಈ ನಡುವೆ ಬಹಳ ಬೇಗ ಸಿಟ್ಟು ಬಂದು ಬಿಡುತ್ತೆ....."

"ಪರವಾಗಿಲ್ಲ ಬಿಡು ಶ್ರೀಕಾಂತ...... ನಿನಗೆ ತುಂಬಾ ನಿರಾಸೆಯಾಗಿದೆ ಅಂತ ರಂಜಿನಿ ಹೇಳಿದಳು. ಆದರೆ ನಿನ್ನ ಸಪ್ಪೆಮುಖವನ್ನು ನನ್ನ ಕೈಲಿ ನೋಡೋಕಾಗ್ಲಿಲ್ಲ....."

"ನಾನು ಹೇಗಿದ್ದರೆ ನಿನಗೇನು?" ಎಂದು ಕೇಳುವ ಮನಸ್ಸಾದರೂ ತಡೆದುಕೊಂಡ.

ಪ್ರಕಾಶನಿಗೆ ಇಂಜನಿಯರಿಂಗ್ ಸೀಟು ಬೇರೆ ಊರಿನಲ್ಲಿ ಸಿಕ್ಕಿತ್ತು. ನಾಲ್ಕಾರು ದಿನಗಳ ರಜದ ಮೇಲೆ ಬಂದವನಿಗೆ ಮತ್ತೆ ಹೊರಡುವುದಕ್ಕೆ ಬೇಸರ.

"ನನಗೂ ನಿಮ್ಮೆಲ್ಲರನ್ನು ಬಿಟ್ಟು ಮತ್ತೆ ಊರಿಗೆ ಹೋಗಲು ಮನಸ್ಸಿಲ್ಲ. ಇದೇ ಊರಿಗೆ ಟ್ರಾನ್ಸ್‌ಫರ್‌ಗೆ ಟ್ರೈ ಮಾಡ್ತಿದೀನಿ. ನಾನಿಲ್ಲ ಅಂತ ಪೆದ್ದು ಪೆದ್ದಾಗಿ ಫೀಲಾಗ ಬೇಡ. ಶ್ರೀಕಾಂತನ ಕೈಯಲ್ಲಿ ಪಾಠ ಹೇಳಿಸಿಕೋ. ರಂಜನಿ ಜತೆ ಹರಟೆ ಹೊಡಿ. ನಿನಗೆ ಟೈಂಪಾಸ್ ಆಗುತ್ತೆ. ಆದರೆ ನನಗೇ ಕಷ್ಟ....." ಎಂದಿದ್ದ.

"ಈಗ ಕಷ್ಟ ಅಂತೀಯ. ಅಲ್ಲಿಗೆ ಹೋದಮೇಲೆ ನನ್ನನ್ನು ಮರೆತೇ ಬಿಡ್ತೀಯೋ ಏನೋ. ಹೊಸ ಕಾಲೇಜು, ಹೊಸಾ ಫ್ರೆಂಡ್ಸು.....,"

"ಹೊಸಾ ಫ್ರೆಂಡ್ಸ್ ಸಿಕ್ಕಿದರೆ ಹಳಬರನ್ನ ಯಾರಾದ್ರೂ ಮರೆತು ಬಿಡ್ತಾರೇನೇ ಪೆದ್ದೀ....." ಎಂದು ಅವಳ ಕೆನ್ನೆ ಚಿವುಟಿದ್ದ. ಅವಳ ಕೆನ್ನೆ ಕೆಂಪಾಗಿತ್ತು. ಹಾಗೆ ನೋಡಿದರೆ ರಮಾ ಏನೂ ಅಪ್ರತಿಮ ಸುಂದರಿಯಲ್ಲ. ಲಕ್ಷಣವಾಗಿದ್ದಳು. ತೆಳ್ಳಗೆ ಬೆಳ್ಳಗೆ ಇದ್ದಳು. ಅವಳಿಗಿಂತ ರಂಜನಿಯೇ ಚೆನ್ನ.

"ಏಯ್ ರಂಜಿ..... ನೀನೆಷ್ಟು ಚೆನ್ನಾಗಿದೀಯ ಗೊತಾ? ಯಾರಾದ್ರೂ ನಿನ್ನನ್ನು ಹಾರಿಸಿಕೊಂಡು ಹೋಗಿ ಮದುವೆಯಾಗ್ತಾರೆ. ನಾನೇನು ಮಾಡ಼್್ಲೇ" ಎಂದು ಕೇಳುತ್ತಿದ್ದಳು.

"ಅಯ್ಯೋ ಅದಕ್ಯಾಕೆ ಅಳ್ತೀಯ? ಇದಾರಲ್ಲ ನನಗೆ ಇಬ್ಬರು ಅಣ್ಣಂದಿರು. ಯಾರನ್ನಾದರೂ ಒಬ್ಬರನ್ನು ಕೇಳಿಕೋ. ನಿನಗೆ ಇಬ್ಬರೂ ತಾಳಿ ಕಟ್ಟೋಕೆ ಸಿದ್ದ" ಎಂದು ತಮಾಷೆ ಮಾಡುತ್ತಿದ್ದಳು.

"ಥೂ ಹೋಗೇ" ಅಂತ ಸ್ನೇಹಿತೆಯ ಮುಂದೆ ಆಡಿದರೂ ಅವಳ

ಕಣ್ಣ ಮುಂದೆ ಬಂದು ನಿಲ್ಲುತ್ತಿದ್ದವನು ಪ್ರಕಾಶ. ಆ ಬಗ್ಗೆ ಯಾರಿಗೂ ಸುಳಿವು ಕೊಟ್ಟಿರಲಿಲ್ಲ. ಅವನ ನೆನಪಾದಾಗೆಲ್ಲಾ ಶ್ರೀಕಾಂತನ ಬಳಿಗೆ ಹರಟೆ ಹೊಡೆಯಲು ಬರುತ್ತಿದ್ದಳು. ಇಬ್ಬರೂ ತಮ್ಮ ತಮ್ಮ ಕಾಲೇಜಿನ ವಿಷಯಗಳ ಬಗ್ಗೆ ಮಾತನಾಡಿ ಸಮಯ ಕಳೆಯುತ್ತಿದ್ದರು. ಒಮೊಮ್ಮೆ ರಂಜನಿಯೂ ಬಂದು ಸೇರುತ್ತಿದ್ದಳು.

ಎರಡನೇ ವರ್ಷದ ಕ್ಲಾಸುಗಳು ಪ್ರಾರಂಭವಾಗುವ ಮೊದಲು ಒಂದೆರಡು ದಿನಗಳ ರಜೆಯಲ್ಲಿ ಪ್ರಕಾಶ ಊರಿಗೆ ಬಂದಿದ್ದ. ಆಗಿನ್ನು ಶ್ರೀಕಾಂತ ತನ್ನ ಕೋರ್ಸ್‌ಗೆ ಸೇರಿದ ಹೊಸತು. ಮಾತಿನ ಭರಾಟೆಯಲ್ಲಿ ಸಮಯ ಕಳೆಯುತ್ತಿದ್ದುದೇ ಗೊತ್ತಾಗುತ್ತಿರಲಿಲ್ಲ. ಈಗ ಪಾರ್ವತಿಗೆ ಏಕೋ ಏನೋ ತನ್ನ ಗಂಡುಮಕ್ಕಳು, ರಮಾಳೊಡನೆ ನಗುತ್ತಾ ಹರಟೆ ಹೊಡೆಯುವುದು ಸರಿ ಎನಿಸುತ್ತಿರಲಿಲ್ಲ. ಸಿಡುಕಿನಿಂದ ರಂಜಿನಿಯನ್ನು ಕರೆಯುತ್ತಿದ್ದಳು.

"ಸಾಕು ಬಾರೇ..... ಹೊತ್ತಿಲ್ಲ ಗೊತ್ತಿಲ್ಲ ಅದೇನು ನಗು? ಅದೇನು ಹರಟೆ? ಹೆಣ್ಣು ಹುಡುಗಿ ನಿನಗೆ ಬೇರೆ ಕೆಲಸವೇ ಇಲ್ಲವೇ?" ಅಂತ.

ರಂಜನಿ ಸಿಟ್ಟಿನಿಂದ ಎದ್ದು ಹೋಗುತ್ತಿದ್ದಳು. "ಏನಮ್ಮಾ.... ಯಾಕೆ ಹೀಗಾಡ್ತೀಯಾ? ಹುಡುಗೀರು ಹರಟೆ ಹೊಡೆಯಬಾರದು, ನಗಬಾರದು ಅಂತ ಯಾವ ಶಾಸ್ತ್ರದಲ್ಲಿ ಹೇಳಿದೆ" ಅಂತ ಪ್ರಶ್ನಿಸುತ್ತಿದ್ದಳು.

"ತಲೆ ಹರಟೆ ಸುಮ್ಮನಿರು. ನೀನು ಎದ್ದು ಬಂದರೆ ಆ ರಮಾನು ಎದ್ದು ಹೋಗ್ತಾಳೆ. ಅವಳಿಗೆ ಮನೇಲಿ ಹೇಳೋರು ಕೇಳೋರು ಯಾರು ಇಲ್ಲವೇ......"

"ಯಾಕಿಲ್ಲ ಎಲ್ಲರೂ ಇದಾರೆ. ಆದರೆ ನಿನ್ನ ಹಾಗೆ ಯಾರೂ ಆಡುಲ್ಲ ಅಷ್ಟೇ" ಎಂದು ಗೊಣಗುತ್ತಿದ್ದಳು.

"ಎಲ್ಲೀ ಆ ಶ್ರೀಕಾಂತನ್ನ ಕರೀ. ಒಂದಿಷ್ಟು ತರಕಾರಿಗಳನ್ನು ತರಲಿ. ನಾಳೆ ಬಿಸಿಬೇಳೆಭಾತ್ ಮಾಡ್ತೀನಿ. ಪ್ರಕಾಶನಿಗೆ ತುಂಬಾ ಇಷ್ಟ"

"ಅವನಿಗೆ ಇಷ್ಟಾ ಅಂತ ಮಾತ್ರ ಮಾಡ್ತೀಯಲ್ಲ.... ನಮಗೆಲ್ಲಾ ಏನು ಮತ್ತೆ!"

"ಸಾಕು ಸುಮ್ಮನಿರೇ..... ರಜದಲ್ಲಿ ನಾಲ್ಕು ದಿನ ಬಂದಿದಾನೆ. ಅಲ್ಲಿ ಹಾಸ್ಟೆಲ್ಲು ಊಟ. ಸರಿಯಾಗಿ ಸೇರುತ್ತೋ ಇಲ್ಲವೋ..... ನೋಡು ಹೇಗಾಗಿ ಹೋಗಿದಾನೆ. ಅವನನ್ನು ಕರಿ. ನಮ್ಮ ಹತ್ತಿರ ಮಾತು ಬೇಕಿಲ್ಲ ಅವನಿಗೆ. ಅದಕ್ಕೆ ಅವಳನ್ನು ಕಳಿಸು ಅಂತ ಹೇಳಿದ್ದು....."

"ನಾನು ಹೇಗಮ್ಮಾ ಹೇಳಲಿ ಅವಳಿಗೆ ಹೋಗು ಅಂತ.... ನೀನೇ ಹೋಗಿ ಹೇಳು ಬೇಕಾದ್ರೆ....." ತಾಯಿ ಸಿಟ್ಟನಿಂದ ನಾಲ್ಕಾರು ಪಾತ್ರೆಗಳನ್ನು ಬೀಳಿಸಿದಾಗ, ಶ್ರೀಕಾಂತ ಒಳಗೆ ಬಂದಿದ್ದ.

"ಏನೇ ರಂಜಿ.... ಇದೇನು ಹೋಟ್ಲೇನೇ...." ಎಂದಾಗ, ಅವಳು ಅಮ್ಮನಿಗೆ ಸಿಟ್ಟು ಬಂದಿದೆ ಎನ್ನುವಂತೆ ಕೆನ್ನೆ ಉಬ್ಬಿಸಿ ಸಂಜ್ಞೆ ಮಾಡಿ ತೋರಿದಳು. ಅವನು ನಗುತ್ತಾ ತಾಯಿಯ ಬಳಿಗೆ ಹೋದ.

"ಏನಾಯ್ತಮ್ಮಾ.... ನಿನ್ನ ಸಿಟ್ಟನ್ನೆಲ್ಲಾ ಆ ಬಡಪಾತ್ರೆಗಳ ಮೇಲೆ ಏಕೆ ತೋರಿಸ್ತೀಯ. ನಿನಗೇನು ಬೇಕು?"

"ನಿಮ್ಮಪ್ಪ ಇನ್ನು ಮನೆಗೆ ಬಂದಿಲ್ಲ. ತರಕಾರಿ ತರೋರು ಯಾರು?"

"ನನ್ನ ಕೈಲಿ ಆಗುಲ್ಲ... ಓದೋದಿದೆ. ಪ್ರಕಾಶಂಗೆ ಹೇಳ್ತೀನಿ" ಎಂದಾಗ ತಾಯಿ ಕಣ್ಣುಕಣ್ಣು ಬಿಟ್ಟಳು.

"ಅವನು ಅಪರೂಪಕ್ಕೆ ಊರಿಗೆ ಬಂದಿರೋ ಹುಡುಗ. ಅವನಿಗ್ಯಾಕೆ ತೊಂದರೆ! ನಾನೇ ಹೋಗಿ ತರ್ತೀನಿ ಬಿಡು"

ಅಮ್ಮಾ ಯಾಕೆ ಹೀಗೆ ಆಡ್ತಿದಾಳೆ ಎಂದು ಅರ್ಥವಾಗದಿದ್ದರೂ ಅವನ ಮನಸ್ಸು ಕಹಿಯಾಯಿತು. ನಾಲ್ಕು ದಿನ ಮಗ ಹೊರಗಿದ್ದ ಮಾತ್ರಕ್ಕೆ ಅವನು ಅಪರೂಪ.... ತಾನೂ ಎಲ್ಲಾದರೂ ಹೊರಗೆ ಹೋಗಿ ಬಂದರೆ ಮಾತ್ರ ಅಮ್ಮ ನನ್ನ ಬಗ್ಗೆ ಅದೇ ಭಾವನೆ ತಾಳ ಬಹುದು ಅಂತನ್ನಿಸಿದರೂ, ತಾನು ಮಾರ್ಕೆಟ್ಟಿಗೆ ಮಾತ್ರ ಹೋಗಲಿಲ್ಲ. ತನ್ನ ಪಾಡಿಗೆ ತಾನು ತನ್ನ ರೂಮಿಗೆ ಹೊರಟು ಹೋದ. ಬೀದಿ ಬಾಗಿಲಲ್ಲಿ ಗಂಟೆಗಟ್ಟಲೆ ಹರಟುತ್ತಾ ನಿಂತಿದ್ದ ರಮಾ ಮತ್ತು ಪ್ರಕಾಶರಿಗೆ ಸಮಯದ ಪ್ರಜ್ಞೆಯೇ ಇರಲಿಲ್ಲ. ಪ್ರಕಾಶನ ತಂದೆ ನಂಜುಂಡಯ್ಯ ಬಂದಾಗ ರಮಾ ತನ್ನ ಮನೆಗೆ ಹೊರಟಳು. ಪ್ರಕಾಶ ತಂದೆಯೊಡನೆ ಮಾತನಾಡುತ್ತಾ ನಿಂತ. ಸಿಡುಕುತ್ತಾ ಹೊರಗೆ ಬಂದ ಪಾರ್ವತ್ತಿ, ತಂದೆ ಮಗ ಮಾತನಾಡುತ್ತಿದ್ದುದನ್ನು ಕಂಡು ಹಾಗೇ ಒಳಗೆ ಹೋದಳು.

* * *

ಹಿಂದಿನ ನೆನಪುಗಳಿಂದ ಶ್ರೀಕಾಂತನ ಮನ ತಾಯಿಗಾಗಿ ಮಿಡುಕಿತು. ಹಿರಿಯವನು, ಇಂಜನಿಯರ್ ಎಂಬ ಹೆಮ್ಮೆ ಆಸೆಗಳಿಂದ ಪ್ರಕಾಶನ ಮೇಲೆ ಅತೀ ವ್ಯಾಮೋಹದಿಂದಿದ್ದವಳು... ಈಗ ದುಃಖವನ್ನು ನುಂಗಿ ಅದು ಹೇಗೆ ಬದುಕುತ್ತಿದ್ದಾಳೋ ಅಂತೂ ದಿನಗಳನ್ನು ತಳ್ಳುತ್ತಿದ್ದಾಳೇನೋ.....

ಅಂತಂದುಕೊಂಡು ಆ ವಿಷಯಗಳನ್ನು ಮರೆಯಲೋ ಎಂಬಂತೆ, ತಲೆಯ ಮೇಲೆ ಮುಸುಕನ್ನೆಳೆದು ಮಲಗಿದ.

ಬೆಳಗ್ಗೆ ನಿತ್ಯದಂತೆ ಸರಿಯಾದ ಸಮಯಕ್ಕೆ ಎಚ್ಚರವಾಯಿತು. ಕಣ್ಣು ಹೊಸಕುತ್ತಾ ಚಿಂತಿಸಿದವನಿಗೆ ಮೊದಲು ನೆನಪಾದದ್ದು ಹಿಂದಿನ ದಿನ ನಡೆದ ವಿಷಯ. ಮೊದಲು ಕಾವೇರಮ್ಮನನ್ನು ಕಾಣಬೇಕೋ ಅಥವಾ ಆಸ್ಪತ್ರೆಗೆ ಹೋಗಬೇಕೋ ಎಂದು ನಿರ್ಧರಿಸಲಾಗದೇ ಎದ್ದು ಮುಖ ತೊಳೆದು ನಂತರ ಮಹೇಶನಿಗೆ ಫೋನ್ ಮಾಡಿದ.

"ಮೊದಲು ಕಾವೇರಮ್ಮನ್ನ ನೋಡು. ರಾತ್ರಿ ಆಕೆ ಸುರಕ್ಷಿತವಾಗಿದ್ದರೇ..... ಆಮೇಲೆ ಆತನನ್ನು ಮನೆಗೆ ತಲುಪಿಸುವುದು ಒಳ್ಳೆಯದು ಅಲ್ಲವೇ?" ಎಂದು ಸ್ನೇಹಿತ ಸಲಹೆಯಿತ್ತಾಗ ಸರಿ ಎನಿಸಿತು.

ಬೇಗ ಸ್ನಾನ ಇತ್ಯಾದಿ ಮುಗಿಸಿ, ಸ್ಕೂಟರನ್ನೇರಿದ. ರಮಾ ಪ್ರಶ್ನಾರ್ಥವಾಗಿ ಅವನನ್ನೇ ನೋಡಿದಳು. 'ಈಗ ಬರ್ತೀನಿ' ಎಂದಷ್ಟೇ ನುಡಿದು ಮುಂದಕ್ಕೆ ಗಾಡಿ ಓಡಿಸಿದ.

ಕಾವೇರಮ್ಮ ಅವನಿಗಾಗಿಯೇ ಕಾದಿರುವಂತೆ ಕಂಡಿತು. ಮೊದಲು ಬಿಸಿ ಬಿಸಿ ಕಾಫಿಯನ್ನು ತಂದಿತ್ತು ಮಾತಿಗೆ ಪ್ರಾರಂಭಿಸಿದಳು.

"ರಾಯರು ಹಠವಾದಿಗಳು. ಅವರಿಗೆ ಅವರ ಆರೋಗ್ಯದ ಮೇಲೆ ಹೆಚ್ಚು ಗಮನವಿಲ್ಲ. ಏನಾದ್ರೂ ಆದರೆ ತಕ್ಷಣಕ್ಕೆ ನೋಡೋರು ಸಹ ಇಲ್ಲ"

"ಯಾರೂ ಇಲ್ಲವೇ.... ಹೆಂಡತಿ ಮಕ್ಕಳು?"

"ಇಲ್ಲ, ಆದರೆ ನಿಮಗೆ ಎಲ್ಲಾ ಹೇಳಬಹುದೋ ಬೇಡವೋ..... ಆದರೆ ನಿಮಗೆ ತಿಳಿಸುವುದು ಒಳ್ಳೆಯದು ಅಂತ ಹೇಳ್ತಾ ಇದೀನಿ. ಈಗಲಾದರೂ ಅವರ ಸಂಸಾರ ಸರಿಯಾಗಬೇಕು. ನೀವು ಅವರಿಗೆ ಸ್ವಲ್ಪ ತಿಳುವಳಿಕೆ ಹೇಳಿ" ಎನ್ನುತ್ತಾ ಅವರ ಮಗಳು ವಸುಧಾ ಎಲ್ಲೋ ಹಾಸ್ಟೆಲ್ಲಿನಲ್ಲಿರುವ ವಿಷಯದೊಂದಿಗೆ ತನಗೆ ತಿಳಿದ ಕೆಲವು ವಿಷಯಗಳನ್ನು ತಿಳಿಸಿದಳು.

"ಇನ್ನು ಎಷ್ಟು ವರ್ಷ ತಂದೆ ಮಗಳು ಹೀಗೆ ದೂರ ದೂರ ಇರೋದು? ಬೆಳೆದ ಹುಡುಗಿ ಅವಳು. ಅಲ್ಲೆಲ್ಲೋ ಇವರು ಹೀಗೆ ಒಂಟಿ ಮನೆಯಲ್ಲಿ ಇವರಿಗೆ ಯಾರೂ ಬೇಡವಾಗಿದೆ. ಬೇಯಿಸಿ ಹಾಕೋಕೆ ನಾನೊಬ್ಬಳು ಇದೀನಿ. ಅದೂ ಅವರ ತಂಗಿ ಮನೆಯವರ ಬಲವಂತದಿಂದ. ಇಲ್ಲದಿದ್ದರೆ ದಿನಾ ಹೋಟಲ್ಲೇ ಗತಿಯಾಗುತ್ತಿತ್ತು. ಇವರಿಗೆ"

ತಾನು ಆತನಿಗೆ ತಿಳುವಳಿಕೆ ಹೇಳುವುದೇ? ನೀನ್ಯಾರು ಅಂತಂದು ಬಿಟ್ಟರೇ..... ಅಲ್ಲದೇ ನನಗೇಕೆ ಇದೆಲ್ಲಾ ಅಂತಂದು ಕೊಂಡರೂ, ಮನಸ್ಸು ಒಡಂಬಡಲಿಲ್ಲ. ಆತ ಅನಾರೋಗ್ಯದಿಂದ ಬಿದ್ದಾಗ ಆತನಿಗೆ ಸಹಾಯ ಮಾಡಿದೆ. ಈಗ ಇದನ್ನು ಸಹಾಯ ಎನ್ನುವಂತೆ ಮಾಡಿದರೇ..... ಅಂತಂದು ಕೊಂಡರೂ, ಮಹೇಶನನ್ನು ಒಂದು ಮಾತು ಕೇಳೋಣ ಎಂತನ್ನಿಸಿತ್ತು.

"ಆಗಲಿ, ಪ್ರಯತ್ನ ಮಾಡ್ತೀನಿ. ಈಗ ನಾನು ಆಸ್ಪತ್ರೆಗೆ ಹೋಗ್ತಿದೀನಿ. ನೀವೂ ಬರ್ತೀರಾ?" ಪ್ರಶ್ನಿಸಿದ.

"ಪರವಾಗಿಲ್ಲ. ಅವರನ್ನು ಕಳಿಸುವುದಾದರೆ, ಮನೆಗೆ ಬಂದುಬಿಡಲಿ. ಅವರಿಗೂ ನೆಮ್ಮದಿ ಇರುತ್ತೆ" ಎಂದು ಆಕೆ ನುಡಿದಾಗ ಇವನು ಎದ್ದ. ಮಹೇಶನ ಮನೆಗೆ ಬಂದು ಅವನನ್ನು ಎಬ್ಬಿಸಿಕೊಂಡು ಇಬ್ಬರೂ ಆಸ್ಪತ್ರೆಗೆ ಬಂದರು. ಗೆಲುವಿನಿಂದ ಕಂಡು ಬಂದ ರಾಯರು ಇವರಿಬ್ಬರ ಕಡೆ ನೋಡಿ ಮುಗುಳ್ನಕ್ಕರು.

"ಹೇಗಿದೀರಿ ಸಾರ್?" ಪ್ರಶ್ನಿಸಿದ.

"ರಾತ್ರಿ ಚೆನ್ನಾಗಿ ನಿದ್ದೆ ಬಂತಪ್ಪಾ..... ಸ್ಲೀಪಿಂಗ್ ಡೋಸ್ ಸ್ವಲ್ಪ ಹೆಚ್ಚಾಗಿರಬಹುದು" ನಗುತ್ತಾ ಅವರು ನುಡಿದರು.

"ಹಾಗಾದ್ರೆ ಇನ್ನೂ ಒಂದೆರಡು ದಿನ ಇಲ್ಲಿದ್ದು ರೆಸ್ಟ್ ತಗೋತೀರಾ? ನಾನು ಡಾಕ್ಟರನ್ನು ಕೇಳಲೇ?"

"ಬೇಡಪ್ಪಾ ಬೇಡ..... ನಮ್ಮ ಮನೆ ನಮಗೆ ಸ್ವರ್ಗ....."

ಆದರೆ ಸ್ವರ್ಗದಲ್ಲಿ ನಿಮಗೆ ನೆಮ್ಮದಿ ಇಲ್ಲ. ಸುಖನಿದ್ರೆ ಇಲ್ಲ ಎಂದು ಹೇಳುವ ಮನಸ್ಸಾದರೂ ತಡೆದುಕೊಂಡ.

"ಬ್ರೇಕ್ ಫಾಸ್ಟ್ ಆಯ್ತಾ? ಅಥವಾ ಏನಾದ್ರೂ ತಂದು ಕೊಡಲಾ?"

"ಬೇಡ. ಎಲ್ಲಾ ಆಯ್ತು. ಇನ್ನೇನು ಮನೆಗೆ ಹೋದರೆ ಬರೀ ಅದೇ ಕೆಲಸ ತಿಂಡಿ..... ಊಟ.... ತಿಂಡಿ. ಮೂರು ಹೊತ್ತು ಅದೇ.... ಮಲಗಿದರೂ ಮೂರು ಕಾಸಿನ ನಿದ್ದೆ ಇಲ್ಲ" ಆತ ಗೊಣಗಿದಾಗ ಮಹೇಶ ನುಡಿದ.

"ಡಾಕ್ಟರನ್ನ ಕೇಳಿದ್ರೆ ನಿದ್ರೆ ಮಾತ್ರೆ ಬರೆದುಕೊಡ್ತಾರೆ"

"ಬೇಡ ಬೇಡ..... ನಿದ್ರೇಲೇ ನಾನೇನಾದರೂ ಗೊಟಕ್ ಅಂದುಬಿಟ್ಟರೆ ನನ್ನ....." ಎಂದು ಹೇಳಹೊರಟವರು ಮಾತನ್ನು ಮುಗಿಸದೇ ಹಾಗೇ ಸುಮ್ಮನಾದರು. ಮಹೇಶನ ಮೊಣಕೈ ಶ್ರೀಕಾಂತನನ್ನು ತಿವಿಯಿತು.

"ನಿಮ್ಮ ಹತ್ತಿರದವರು ಯಾರಿಗಾದ್ರೂ ವಿಷಯ ತಿಳಿಸಬೇಕಾದ್ರೆ ಹೇಳಿ

ಸಾರ್. ನಾನು ಖುದ್ದಾಗಿ ಹೋಗಿ ತಿಳಿಸ್ತೀನಿ....." ಆತ ಯಾರೂ ಇಲ್ಲವೆನ್ನುವಂತೆ ತಲೆಯಾಡಿಸಿದಾಗ ಅವನು ಸುಮ್ಮನಾದ.

ಡಾಕ್ಟರು ಬಂದು ಮತ್ತೊಮ್ಮೆ ಪರೀಕ್ಷಿಸಿ ನುಡಿದರು.

"ಏನ್ರೀ ಬಿ.ಪಿ. ರೈಸ್ ಆಗಿದೆಯಲ್ಲಾ.... ಯಾಕೆ ನಿದ್ದೆ ಬರಲಿಲ್ವಾ?" ತಮಾಷೆಯಿಂದ ಕೇಳಿದಾಗ ಶ್ರೀಕಾಂತ ಪೆಚ್ಚಾದ.

"ರಾತ್ರಿಯೆಲ್ಲಾ ಕನವರಿಸುತ್ತಿದ್ದರಂತೆ.... ವಾರ್ಡ್‌ಬಾಯ್ ಹೇಳಿದ. ಅದೇನು ಕನಸು ಅಂತ ಸ್ವಲ್ಪ ವಿವರಿಸಿ ಹೇಳ್ತೀರಾ....." ಡಾಕ್ಟರ್ ಮತ್ತೆ ನುಡಿದಾಗ ಮಹೇಶ ಹಿಂದಕ್ಕೆ ಸರಿದು ಪಿಸುಗುಟ್ಟಿದ.

"ಇವರೆಂಥಾ ಡಾಕ್ಟರ್ರೋ..... ಪೇಶೆಂಟ್ ಹತ್ತಿರಾ ಹೀಗಾ ಮಾತಾಡೋದು?"

"ಇದು ಹೊಸಾ ವಿಧಾನವಿರಬಹುದು. ಅವರನ್ನು ನಗಿಸ್ತಾ ಇದಾರೆ ಅಂತ ಕಾಣಿಸುತ್ತೆ. "

"ಅವರಿಬ್ಬರೂ ನಗ್ತಾ ಇರಲಿ, ನಾನು ಹೊರಡ್ತೀನಿ. ಹೊತ್ತಾಯ್ತು. ನೀನೂ ಹೊರಡು. ಅವರು ಈಗ ಸರಿಯಾಗಿದಾರೆ. ಮನೆಗೆ ಹೋದರೆ ಎಲ್ಲಾ ಸರಿ ಹೋಗುತ್ತೆ"

"ಹೌದು. ಆದಷ್ಟು ಬೇಗ ಅವರನ್ನು ಮನೆಗೆ ತಲುಪಿಸಿ ಬಿಡೋಣ"

"ಸುಧಾಕರರಾಯರನ್ನು ಅಲ್ಲಿಂದ ಡಿಸ್‌ಚಾರ್ಜ್ ಮಾಡಿಸಿಕೊಂಡು, ಟ್ಯಾಕ್ಸಿಯಲ್ಲಿ ಸುರಕ್ಷಿತವಾಗಿ ಅವರ ಮನೆಗೆ ಸೇರಿಸಿದ್ದಾಯಿತು. ಎಲ್ಲಾ ಬಿಲ್‌ಗಳನ್ನು ಮಹೇಶನೇ ಕೊಟ್ಟಿದ್ದ. ಒಂದೆರಡು ಚೆಕ್‌ಗಳು ಕ್ಯಾಷ್ ಆಗೋದಿದೆ. ಆದ ತಕ್ಷಣ ಕೊಟ್ಟುಬಿಡ್ತೀನಿ " ಎಂದು ಶ್ರೀಕಾಂತ ನುಡಿದಿದ್ದ. ಮಹೇಶ ತಲೆ ಆಡಿಸಿದ್ದ.

ಮಹೇಶನಿಗೂ ಶ್ರೀಕಾಂತನಿಗೂ ಒಂದು ರೀತಿಯ ಗಳಸ್ಯ ಕಂಠಸ್ಯ. ಅವರ ಗೆಳೆತನ ಕೆಲವು ವರ್ಷಗಳ ಹಿಂದೆ ಪ್ರಾರಂಭವಾದರೂ ಸ್ನೇಹದ ಬೇರು ಬಹಳ ಬೇಗ ಆಳಕ್ಕೆ ಇಳಿದಿತ್ತು. ಅದೇ ಟ್ಯಾಕ್ಸಿಯಲ್ಲಿ ಅವರಿಬ್ಬರೂ ಮತ್ತೆ ಹೊರಟಾಗ, ರಾಯರು ಹಣದ ಮಾತನ್ನೇ ಎತ್ತಿರಲಿಲ್ಲ. ಶ್ರೀಕಾಂತನಿಗೆ ಮುಜುಗರವಾಗಿತ್ತು. ಅವರಾಗಿಯೇ ಕೇಳದೇ ತಾವಾಗಿಯೇ ಕೇಳುವುದು ಹೇಗೆ? ಇಬ್ಬರೂ ಮಾತಿಲ್ಲದೇ ನಡೆದರು.

ಶ್ರೀಕಾಂತ, ಮಹೇಶನನ್ನು ಅವನ ಮನೆಯ ಬಳಿ ಇಳಿಸಿ, ಅವಸರವವಸರವಾಗಿ ಮನೆಗೆ ಬಂದ. ರಮಾ ಕೆಲಸಕ್ಕೆ ಹೊರಟು ಹೋಗಿದ್ದಳು.

ತಾಯಿ ಮೊಮ್ಮಗನನ್ನು ಎತ್ತಿಕೊಂಡು ಆಡಿಸುತ್ತಿದ್ದಳು. ವಿಶೂ ಅವನನ್ನು ಕಂಡೊಡನೆ ಎತ್ತಿಕೋ ಎನ್ನುವಂತೆ ಮುಂದೆ ಮುಂದೆ ಬಾಗಿದ. ಅವನು ಎತ್ತಿಕೊಳ್ಳದಿದ್ದಾಗ, ಅಳತೊಡಗಿದ.

"ಕಾಂತೂ, ಸ್ವಲ್ಪ ಎತ್ಕೊಳ್ಳೋ ನೋಡು ಹೇಗಾಡ್ತಾ ಇದಾನೆ?"

"ಈಗ ಬಿಡುವಿಲ್ಲಮ್ಮ. ಸ್ವಲ್ಪ ಬ್ಯಾಂಕಿಗೆ ಹೋಗಬೇಕು" ಎನ್ನುತ್ತಾ ತನಗೆ ಬೇಕಾದ ಕೆಲವನ್ನು ಎತ್ತಿಕೊಂಡು, ಮಗುವಿನ ಕೆನ್ನೆ ಸವರಿ ಹೊರಟೇಬಿಟ್ಟ. ವಿಶೂ, ಕಿಟಾರನೇ ಕಿರುಚಿ ಅಳತೊಡಗಿದ. ತಾಯಿ ಸಮಾಧಾನ ಮಾಡುತ್ತಲೇ ಇದ್ದಳು.

"ಪಾಪ.... ಅಮ್ಮನಿಗೆ ಈ ವಯಸ್ನಲ್ಲಿ ಎಷ್ಟು ಕಷ್ಟ. ಅವನನ್ನು ಸುಧಾರಿಸುವುದು ಸಾಮಾನ್ಯವೇ? ಆದರೆ ಹಾಗಂತ.... ಬರೀ ಮಗುವನ್ನು ನೋಡಿಕೊಂಡು, ರಮಾ ಮನೆಯಲ್ಲೇ ಇರಲು ಸಾಧ್ಯವೇ.... ಅವಳಿಗೆ ಸಮಯ ಕಳೆಯುವುದು ಕಷ್ಟವಾಗುವುದಿಲ್ಲವೇ...."

ಪ್ರಕಾಶನಿದ್ದ ಕಂಪೆನಿಯಲ್ಲೇ ನಾನು ಕೆಲಸಕ್ಕೆ ಸೇರುತ್ತೀನಿ. ಹೇಗೂ ಅವರೇ ಕೆಲಸ ಕೊಡ್ತಿದಾರಲ್ಲ ಅಂತ ರಮಾ ಹೇಳಿದಾಗ ತಾಯಿ ಪಾರ್ವತಿ ಅತ್ತು ಕರೆದು ರಂಪ ಮಾಡಿದ್ದಳು. "ಏನೂ ಬೇಡ.... ನೀನು ಕೆಲಸಕ್ಕೆ ಹೋದರೆ ನಮ್ಮನ್ನು ಜನ ಆಡಿಕೊಂಡು ನಗ್ತಾರೆ. ನಿನಗೆ, ನಿನ್ನ ಮಗುವಿಗೆ ಒಂದು ತುತ್ತು ಅನ್ನ ಹಾಕಲಾಗದಷ್ಟು ಬಡತನ ನಮಗಿಲ್ಲ ತಿಳೀತೆ?" ನೀನೂ ಹೊಟ್ಟೆ ಉರಿಸ ಬೇಡ.

ಅಳುತ್ತಾ ನಿಂತಿದ್ದ ರಮಾಳ ಪರವಹಿಸಿ ಶ್ರೀಕಾಂತ ಮಾತನಾಡಿದ್ದ.

"ಇದು ಬಡತನದ ಪ್ರಶ್ನೆ ಅಲ್ಲಮ್ಮ. ಅವಳ ಹೆಸರಿಗೂ ಬೇಕಾದಷ್ಟೂ ದುಡ್ಡು ಬರುತ್ತೆ. ಆದರೆ ನೀನೇ ಯೋಚಿಸು. ಮನೇಲಿ ಅವಳು ಹೇಗೆ ಕಾಲ ಕಳೆಯ ಬೇಕು?" ಅವಳಿಗೂ ಬೇಜಾರಾಗೋಲ್ವ?

"ಯಾಕೆ? ನಾವೆಲ್ಲಾ ಹೇಗೆ ಕಾಲ ಕಳೀತೀವೋ ಹಾಗೇ. ಮನೆಕೆಲಸ ವಿರುತ್ತೆ, ಮಗು ಇದೆ, ಎಷ್ಟು ಹೊತ್ತಿದ್ದರೂ ಸಾಲದು."

"ಮನೆ ಕೆಲಸಕ್ಕೆ ಕೆಲಸದವರಿದಾರೆ. ಅಡಿಗೆ ನೀನು ಮಾಡ್ತೀಯ. ವಿಶೂನೇನು ಸದಾ ಎತ್ತಿಕೊಂಡಿರಬೇಕೇ.... ಇನ್ನೊಂದೆರಡು ವರ್ಷ ಕಳೆದರೆ ಅವನು ಸ್ಕೂಲಿಗೆ ಹೋಗ್ತಾನೆ. ಆಗ ಈ ಕೆಲಸ ಸಿಗುತ್ತೋ ಇಲ್ಲವೋ, ಮನೇಲೇ ಇದ್ದು ಇದ್ದೂ ಬರೀ ಚಿಂತೇಲೇ ಕಾಲ ಕಳೆದರೆ ಅವಳ ಆರೋಗ್ಯವೂ ಹಾಳಾಗೊಲ್ಲವೇನಮ್ಮಾ. ಹೊರಗೆ ಹೋಗಲಿ, ನಾಲ್ಕು ಜನರ

ಜತೆ ಬೆರೆಯಲಿ, ಕೆಲಸ ಅಂತ ಒಂದಿದ್ದರೆ ಮನಸ್ಸಿಗೆ ಎಷ್ಟೋ ಸಮಾಧಾನ ಸಿಗುತ್ತೆ"

"ಏನೋಪ್ಪ.... ನನ್ನ ಮಾತು ನಿನಗೆ ಅರ್ಥವಾಗೊಲ್ಲ. ನಿನ್ನ ಮಾತು ನನಗೆ ಅರ್ಥವಾಗೊಲ್ಲ. ಹಿಂದಿನ ಕಾಲದಲ್ಲಿ ಹೀಗಿರಲಿಲ್ಲ"

"ಹೌದು, ಹಿಂದಿನ ಕಾಲದಲ್ಲಿ ಹೀಗಿರಲಿಲ್ಲ. ಸೀತತ್ತೆಯ ಬಗ್ಗೆ ನಿನಗೇ ಎಷ್ಟೋ ಸಲ ಅಯ್ಯೋ ಅಂತ ಅನ್ನಿಸಿರಲಿಲ್ಲವೇ.... ಈಗ ಕಾಲ ಬದಲಾಗಿದೆ. ಸೀತತ್ತೆಯ ತರಹ ರಮಾ ಬಾಳಬೇಕಾಗಿಲ್ಲ. ಅವಳು ಇಷ್ಟಪಟ್ಟರೆ ಮತ್ತೆ ಮದುವೆ ಸಹ ಮಾಡಿಕೊಳ್ಳಬಹುದು"

"ಸಾಕು ಚೆನ್ನಾಗಿದೆ ನಿನ್ನ ಮಾತು. ಮೊದಲ್ನಿಂದ ನೀನು ಅವಳ ಪರ ವಹಿಸಿಕೊಂಡು ಮಾತನಾಡಿ ಮಾತನಾಡಿ ನನ್ನ ಮಾತಿಗೆ ಬೆಲೆ ಇಲ್ಲದ ಹಾಗೆ ಮಾಡಿದೆ. ಏನಾದ್ರೂ ಮಾಡ್ಕೊಳ್ಳಿ" ಎಂದು ತಾಯಿ ಮುನಿಸಿಕೊಂಡು ಒಳಗೆ ಹೋದಾಗ ಅವನಿಗೂ ಪೆಚ್ಚಾಗಿತ್ತು. ರಮಾ ಸಹ ಅಳುತ್ತಾ ಒಳಗೋಡಿದ್ದಳು.

ಈಗ ರಮಾ ದಿನಾ ಕೆಲಸಕ್ಕೆ ಹೋಗುತ್ತಿದ್ದಾಳೆ. ಅಮ್ಮ ಮೊಮ್ಮಗನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾಳೆ. ಈಗ ಅದೇ ಅಭ್ಯಾಸವಾಗಿಹೋಗಿದೆ. ಆದರೆ ದುಃಖ ಮಾತ್ರ ಕಡಿಮೆ ಆಗಿಲ್ಲ. ಅಮ್ಮ ಕೃಶವಾಗಿ ಹೋಗಿದಾಳೆ ಅಂತನ್ನಿಸಿದಾಗ ದುಗುಡದಿಂದ ಹೃದಯ ಭಾರವಾಗಿತ್ತು. ಈ ತಾಯಿಗೆ ತಾನೇನು ಸಮಾಧಾನ ಮಾಡಬಲ್ಲೆ.

ರಮಾಳಿಗಾಗಿ ಅಟೆಂಡರ್ ಕೈಯಲ್ಲಿ ಹೇಳಿ ಕಳಿಸಿ, ಅವಳಿಗಾಗಿ ಕಾಯುತ್ತಾ ನಿಂತ. ಗಾಬರಿಯಿಂದ ಬಂದವಳನ್ನು ಕಂಡು ಮುಗುಳ್ನಕ್ಕ.

"ಹೆದರಬೇಡ ರಮಾ, ನನಗೆ ನಿನ್ನಿಂದ ಒಂದು ಕೆಲಸವಾಗಬೇಕಾಗಿತ್ತು. ಅದಕ್ಕೇ ಬಂದೆ"

"ಏನು ಹೇಳು...."

"ಮಹೇಶನಿಗೆ ಅರ್ಜೆಂಟಾಗಿ ಎರಡು ಸಾವಿರ ರೂಪಾಯಿ ಕೊಡಬೇಕಾಗಿತ್ತು. ನನ್ನ ಬ್ಯಾಂಕ್‌ನಲ್ಲಿ ಚೆಕ್‌ಗಳು ಕ್ಯಾಷ್ ಆಗಿಲ್ಲ ಅಂತ ತಿಳೀತು"

"ಓ ದುಡ್ಡಾ? ಸಾಯಂಕಾಲ ಕೊಟ್ಟರೆ ಆಗುತ್ತಾ?"

"ಈಗ ಪರ್ಮಿಷನ್ ತಗೊಂಡು ನನ್ನ ಜತೆ ಬರೊಕ್ಕೆ ಆಗೊಲ್ವಾ?"

"ಅಷ್ಟು ಅರ್ಜೆಂಟಿದ್ದರೆ ಬರ್ತೀನಿ" ಎನ್ನುತ್ತಾ ತನ್ನ ಬಾಸ್ ಬಳಿಗೆ ಹೋಗಿ ಕೆಲವೇ ನಿಮಿಷಗಳಲ್ಲಿ ಬಂದಳು.

"ಸಾರಿ ರಮಾ. ಏನೇನೋ ಆಗಿಹೋಯ್ತು. ನಿನ್ನೆ ಏನಾಯ್ತು ಗೊತ್ತಾ" ಅಂತ ಹೇಳ ಹೊರಟವನನ್ನು ತಡೆದಳು.

"ನಾನೇನೂ ತಿಳಕೊಳ್ಳಲ್ಲಪ್ಪಾ.... ನಾನು ಅವತ್ತೇ ಹೇಳಿದೆ. ಪ್ರಕಾಶನ ಹಣವನ್ನೆಲ್ಲ ಅಮ್ಮನ ಹೆಸರಿನಲ್ಲಿ ಇಡ್ತೀನಿ ಅಂತ. ನೀವೆಲ್ಲಾ ಬೇಡ ಬೇಡ ಅಂತ ಅಂದ್ರಿ. ಅಷ್ಟಕ್ಕೂ ನನಗೀಗ ಹಣದ ಅಗತ್ಯವೇ ಇಲ್ಲ"

"ಅದೆಲ್ಲ ವಿಶೂನ ಹಣ.... ಆದರೆ ಸಮಯ ಬಿದ್ದು ಬಿಡುತ್ತಲ್ಲಾ.... ಅಮ್ಮಂಗೆ ಹೇಳಬೇಡ. ನೊಂದ್ಕೋತಾಳೆ"

"ಇಲ್ಲ, ಶ್ರೀಕಾಂತ, ನನಗೆ ಅಷ್ಟೂ ತಿಳಿಯೋಲ್ವೇ.... ಬಿಸಿನಸ್, ವ್ಯಾಪಾರ ಅಂತಂದರೆ ಏರುಪೇರಾಗುತ್ತೆ.... ಅದು ಏನು ಮಹಾ?"

"ನಾನೂ ಪ್ರಕಾಶನ ಹಾಗೆ ಯಾವುದಾದರೂ ಕಂಪನಿಗೆ ಕೆಲಸಕ್ಕೆ ಸೇರಿದ್ದರೆ ಚೆನ್ನಾಗಿತ್ತೇನೋ, ಇದ್ದಬದ್ದ ಬಂಡವಾಳವನ್ನೆಲ್ಲಾ ಸುರಿದು ಮೆಡಿಕಲ್ ಸ್ಟೋರ್ಸ್ ತೆಗೆದೆ. ಈಗ ಈ ಕಡೆಗೆ ಎಳೆದರೆ ಆ ಕಡೆಗೆ ಇಲ್ಲ, ಆ ಕಡೆಗೆ ಎಳೆದರೆ ಈ ಕಡೆಗೆ ಇಲ್ಲ"

"ನಿನಗೇ ಇಷ್ಟು ಕಷ್ಟವಾಗಿರುವಾಗ ನೀನೇಕೆ ಮಹೇಶನಿಗೆ ಹಣ ಕೊಡಬೇಕು ಹೇಳು? ಅವನಿಗೇನು ಖರ್ಚಿದೆ ಈಗ?"

"ಏನೋ ಆಯ್ತು ಅಂದ್ನಲ್ಲ.... ಮಹೇಶ ಕೇಳಲಿಲ್ಲ. ನಾನೇ ಕೊಡ್ತಾ ಇದೀನಿ"

"ಏನು ಸ್ನೇಹಿತನೋ? ನಿನ್ನ ಕಷ್ಟದ ಅರಿವಿರಬೇಡ್ವಾ ಅವನಿಗೆ"

"ಹಾಗೆನ್ನಬೇಡ ರಮಾ.... ಅವನೊಬ್ಬನೇ ನನ್ನ ನಿಜವಾದ ಸ್ನೇಹಿತ"

"ಈಗ ಹಾಗಂತೀಯ.... ಅವನಿಗೆ ಅವನದೇ ಆದ ಸಂಸಾರವಿದೆ. ಸದಾ ನಿನಗೆಲ್ಲಿ ಸಿಗ್ತಾನೆ?" ಅಷ್ಟರಲ್ಲಿ ಬ್ಯಾಂಕು ಸಮೀಪಿಸಿತು. ಶ್ರೀಕಾಂತ ಗಾಡಿ ನಿಲ್ಲಿಸಿದ. ಇಬ್ಬರೂ ಇಳಿದು ಒಳಗೆ ಹೋದರು.

ಶ್ರೀಕಾಂತ ಬೇಡ ಬೇಡವೆಂದರೂ, ರಮಾ ಐದು ಸಾವಿರ ರೂಗಳನ್ನು ಡ್ರಾ ಮಾಡಿಕೊಟ್ಟಳು.

"ಉಳಿದ ದುಡ್ಡಿನಲ್ಲಿ ಅಮ್ಮನಿಗೆ ಒಂದು ಸೀರೆ, ಮಾವನವರಿಗೆ ಶರ್ಟು ಪ್ಯಾಂಟು ಹೊಲಿಸಿಕೊಡು ಶ್ರೀಕಾಂತ......" ಅವನ ಗಂಟಲುಬ್ಬಿ ಬಂತು. ಆ ಕಡೆ ಮುಖ ತಿರುಗಿಸಿದ.

"ಯಾಕೆ ಶ್ರೀಕಾಂತ.... ನನಗೆ ಅಷ್ಟು ಹೇಳುವ ಹಕ್ಕು ಸಹ ಇಲ್ವಾ....."

"ರಮಾ ಪ್ಲೀಸ್"

"ನಾನೇ ಹೋಗೋಣ ಅಂದರೆ, ಮುಜುಗರವಾಗುತ್ತೆ. ಪ್ರಕಾಶ ಬದುಕಿದ್ದಿದ್ದರೆ, ಅಪ್ಪ ಅಮ್ಮನಿಗೆ ಹೊಸ ಬಟ್ಟೆ ತಂದು ಕೊಡುತ್ತಿರಲಿಲ್ವಾ. ಈ ಹಣವೆಲ್ಲಾ ಅವರದೇ ತಾನೇ....." ಶ್ರೀಕಾಂತ ಹೆಚ್ಚು ಮಾತನಾಡದೆ ಹಣವನ್ನು ಕೈಗೆ ತೆಗೆದುಕ್ಕೊಂಡ.

"ಉಳಿದದ್ದನ್ನು ಆದಷ್ಟು ಬೇಗ ಕೊಟ್ಟು ಬಿಡ್ತೀನಿ"

"ಏಯ್..... ನಾನೆಲ್ಲಿ ಕೇಳಿದೆ ಈಗ. ರಂಜನಿಗೆ, ಅವಳ ಗಂಡನಿಗೆ ಹಬ್ಬಕ್ಕೆ ಹಣ ಕಳಿಸು. ಏನಾದರೂ ಅವರಿಗಿಷ್ಟವಾದದ್ದನ್ನು ಕೊಂಡುಕೊಳ್ಳಲಿ"

"ರಮಾ.... ನಾನು ಸಾಲಾಂತ ಕೇಳಿದರೆ, ನೀನು ಏನೇನೋ ಖರ್ಚು ಹೇಳ್ತಿದೀಯ..... ಈಗ ಅದರ ಅವಶ್ಯಕತೆ ಏನಿದೆ?"

"ನಿನಗಿಲ್ಲದಿರಬಹುದು. ನನಗಿದೆ. ಹಬ್ಬ ಹುಣ್ಣಿಮೆ ಎಂದರೆ ಎಷ್ಟು ಸಂಭ್ರಮವಿತ್ತು ನಿಮ್ಮ ಮನೆಯಲ್ಲಿ? ಈಗ ನೋಡು ಬರೀ ಯಾಂತ್ರಿಕ. ಹೇಗಾದರೂ ನಿಮ್ಮ ಮನೆಯಲ್ಲಿ ಆ ಸಂಭ್ರಮ ಬರುತ್ತಿರಲಿ ಅಂತ ಹಾರೈಸುತ್ತೀನಿ"

"ಹೊರಡೋಣ್ವಾ? ನಿನ್ನನ್ನ ನಿನ್ನ ಆಫೀಸಿನಿಗೆ ತಲುಪಿಸಿ, ನಾನು ಅಂಗಡಿ ಕಡೆ ಹೋಗ್ತೀನಿ" ಎನ್ನುತ್ತಾ ಸ್ಕೂಟರನ್ನು ಏರಿದ. ರಮಾ ಹಿಂದೆ ಕುಳಿತಳು.

ಮಧ್ಯಾಹ್ನ ಮಹೇಶ ಸ್ಟುಡಿಯೋ ಮುಚ್ಚಿ ಊಟಕ್ಕೆ ಹೊರಡುವ ಸಮಯದಲ್ಲಿ ಶ್ರೀಕಾಂತನ ಅಂಗಡಿಗೆ ಬಂದ. ಇವನು ತಕ್ಷಣವೇ ಹಣವನ್ನು ಎಣಿಸಿಕೊಟ್ಟ.

"ಅರ್ಜೆಂಟೇನಿತ್ತು ನಿಧಾನವಾಗಿ ಕೊಟ್ಟರಾಗಿತ್ತು" ಅಂತ ಮಹೇಶ ಹೇಳಿದರೂ ನೋಟುಗಳನ್ನು ತೆಗೆದುಕೊಂಡ. ಚೆಕ್ ಎಲ್ಲಾ ಕ್ಯಾಷ್ ಆಗಿರಬೇಕು ಎಂದುಕೊಂಡ ತನ್ನಲ್ಲೇ.....

"ನಿನಗೆ ಅರ್ಜೆಂಟಲ್ಲದೇ ಇರುತ್ತಾ ಮಹೇಶ? ನಿನ್ನ ಹೆಂಡತಿ ಮನೆಯಿಂದ ಫೋನು ಬಂದ ತಕ್ಷಣ ಓಡಿ ಹೋಗ್ತೀಯ. ಖರ್ಚಿಗೆ ಬೇಡ್ವಾ!" ಹೆಂಡತಿಯ ನೆನಪಾದೊಡನೆ ಮಹೇಶ ಯಾವುದೋ ಗುಂಗಿನಲ್ಲಿ ಮುಳುಗಿಹೋದ. ಶ್ರೀಕಾಂತ ಅಂಗಡಿಯ ಬಾಗಿಲನ್ನು ಹಾಕುತ್ತಾ ಕೇಳಿದ.

"ನೀನು ಈ ಲೋಕದಲ್ಲಿದ್ದರೆ ನಿನ್ನನ್ನು ಒಂದ್ಮಾತು ಕೇಳಬೇಕು"

"ಹೂಂ. ಇದೀನಿ ಏನು ಹೇಳು"

"ಅಮ್ಮನಿಗೆ ಒಂದು ಸೀರೆ ತಗೋಬೇಕು. ನನ್ನ ಜತೆಗೆ ಬರ್ತೀಯಾ?

ನಿನಗಾದರೆ ಅನುಭವವಿದೆ. ನನಗಂತೂ ಏನೂ ತಿಳಿಯಲ್ಲ" ಇಬ್ಬರೂ ಹತ್ತಿರದಲ್ಲೇ ಇದ್ದ ಸೀರೆ ಅಂಗಡಿಯೊಂನ್ನು ಹೊಕ್ಕರು.

ಸೀರೆ, ಸೀರೆಗೆ ತಕ್ಕ ರವಿಕೆ ಬಟ್ಟೆಯನ್ನು ಮಹೇಶನೇ ಆರಿಸಿದ.

"ಏನು ವಿಶೇಷ ಅಂತ ಕೇಳಬಹುದಾ?"

"ಇದು ರಮಳ ಆಸೆ. ರಮಾ ಕೊಟ್ಟರೆ ಅಮ್ಮ ತಗೋತಾಳೋ ಇಲ್ಲವೋ ಅಂತ ಅಷ್ಟೆ....."

"ಯಾಕೆ? ನಿಮ್ಮ ಅಮ್ಮನಿಗೆ ನಿನ್ನ ಅತ್ತಿಗೆಯ ಮೇಲಿನ ಕೋಪ ಅಸಮಧಾನ ಇನ್ನು ಕಡಿಮೆ ಆಗಿಲ್ವಾ?"

"ಕೋಪ, ಅಸಮಧಾನ, ದುಃಖ ಎಲ್ಲಾ ಇನ್ನೂ ಹೆಚ್ಚಾಗಿದೆ....ನನಗೆ ರಮನ್ನ ನೋಡಿದರೆ ಅಯ್ಯೋ ಅಂತನ್ನಿಸುತ್ತೆ"

"ನಾನು ಒಂದ್ಮಾತು ಕೇಳ್ತೀನಿ ಶ್ರೀಕಾಂತ. ನಿನ್ನ ಅತ್ತಿಗೆ ಏಕೆ ಮತ್ತೆ ಮದುವೆಯಾಗಬಾರದು?"

"ಆಗಬಾರದು ಅಂತೇನಿಲ್ಲ. ಆದರೆ.... ಏನು ಹಗರಣವಾಗುತ್ತೋ ಅಂತ ನೆನೆಸಿಕೊಂಡರೇ ಭಯವಾಗುತ್ತೆ......"

"ನಿಮ್ಮಂತಹ ಸಂಪ್ರದಾಯಸ್ಥರ ಮನೆಯಲ್ಲಿ ಹಗರಣವಾಗುವುದು ಸಹಜವೇ. ಹಾಗಂತ.... ಅವರು ಜೀವಮಾನವೆಲ್ಲಾ ಒಂಟಿಯಾಗಿರಬೇಕಾ? ನೀನೇ ಏಕೆ ನಿನ್ನ ಅತ್ತಿಗೆಗೆ ಸಲಹೆ ಕೊಡಬಾರದು?"

ಶ್ರೀಕಾಂತ ಸ್ನೇಹಿತನ ಕಡೆ ನೋಡಿ ಸುಮ್ಮನಾದ. ಆದರೆ ಆ ಮಾತನ್ನು ರಮಳೊಡನೆ ಸುಲಭವಾಗಿ ಆಡುವಂತಿಲ್ಲ.

ಒಂದೆರಡು ದಿನಗಳ ನಂತರ ಸುಧಾಕರ ರಾಯರಿಂದ ಶ್ರೀಕಾಂತನಿಗೆ ಫೋನು ಬಂದಿತ್ತು.

"ಸ್ವಲ್ಪ ಮನೆ ಕಡೆ ಬರ್ತೀಯೇನಪ್ಪಾ.... ನಿನ್ನ ಹತ್ತಿರ ಮಾತನಾಡಬೇಕು" ಅಂದಿದ್ರು. ಎಂದಿನಂತೆ, ಅಂಗಡಿಯ ಬಾಗಿಲು ತೆರೆಯುವ ಮೊದಲೇ ಮಹೇಶನೊಡನೆ ಅವರ ಮನೆಗೆ ಬಂದ.

"ಇಬ್ಬರೂ ಕಾಫಿ ತಿಂಡಿ ತಗೊಳ್ಳಿ. ನನಗೆ ಕಂಪೆನಿ ಕೊಡಿ" ಎಂದು ಮುಗುಳ್ನಗುತ್ತಾ ನುಡಿದ ಆತನ ಮಾತನ್ನು ನಿರಾಕರಿಸಲಾಗದೇ ಸ್ವಲ್ಪ ಸ್ವಲ್ಪ ತಗೊಂಡರು.

"ಇದುವರೆಗೂ ಯಾವ ಭೀತಿಯೂ ಇಲ್ಲದೆ ಹಾಯಾಗಿದ್ದೆ. ಈಗ ಒಂದು ಸಲ ಆಸ್ಪತ್ರೆಗೆ ಸೇರಿ ಬಂದ ಮೇಲೆ ಏನೋ ಭಯ. ಒಬ್ಬನೇ

ಹೊರಗೆ ತಿರುಗಾಡಲು ಭಯ. ಸದಾ ನಿಸ್ಸಂತಹ ಒಳ್ಳೆಯವನ ಎದುರಿಗೇ ಕುಸಿದು ಬೀಳ್ತೀನಾ ನಾನು?"

"ಛೆ..... ಏನು ಮಾತು? ಇನ್ನು ಮೇಲೆ ಹಾಗೆಲ್ಲಾ ಏನೂ ಆಗುಲ್ಲ ಬಿಡಿ"

"ಆಗದಿದ್ದರೆ ಒಳ್ಳೆಯದೇ. ಆದರೆ ಮನೆ ಬಿಟ್ಟು ಕದಲುವ ಹಾಗಿಲ್ಲವಲ್ಲ. ಸಮಯ ಕಳೆಯುವುದು ಹೇಗೆ?"

"ನಿಮ್ಮ ಸ್ನೇಹಿತರು..... ನಿಮ್ಮನೆಂಟರು ಯಾರಾದರೂ ಬರುಲ್ವೇ"

"ನನ್ನ ಆಪ್ತ ಸ್ನೇಹಿತ ಅಮೆರಿಕಾದಲ್ಲಿದಾನೆ. ಇನ್ನು ನೆಂಟರು... ಯಾರೂ ಹತ್ತಿರದವರಲ್ಲ. ದೂರ ದೂರವೇ ಮೊದಲ್ನಿಂದ."

"ನಿಮ್ಮ ಮಗ.... ಮಗಳು.... ಅಕ್ಕ ತಂಗಿ ಯಾರನ್ನಾದರೂ ಕರೆಸಿ, ಒಂದ್ನಾಲ್ಕು ದಿನ ನಿಮ್ಮ ಜತೆಯಲ್ಲಿಟ್ಟುಕೊಳ್ಳಿ. ಎಲ್ಲಾ ಸರಿಹೋಗುತ್ತೆ."

"ಇಲ್ಲ. ಏನು ಸರಿ ಹೋಗೋಲ್ಲ. ನಿನಗೆ ಅದೆಲ್ಲ ಅರ್ಥವಾಗೊಲ್ಲ. ಬಿಡುವುದೇ ಸರಿ" ಆತ ವ್ಯಥೆಯಿಂದ ನುಡಿದಾಗ ಶ್ರೀಕಾಂತನಿಗೆ ಮುಜುಗರವೆನಿಸಿತು.

"ನಿಮಗೆ ಏನೋ ಬೇಜಾರಾಗಿದೆ. ನಾವು ಇದೀವಲ್ಲ. ನಾವಿಬ್ರೂ ಆಗ ಈಗ ಬಂದು ನಿಮ್ಮನ್ನು ವಿಚಾರಿಸಿಕೊಂಡು ಹೋಗ್ತೀವಿ ಬಿಡಿ. ಯೋಚನೆ ಮಾಡಬೇಡಿ" ಆತ ಕ್ಷೀಣವಾಗಿ ನಕ್ಕರು.

"ನೀವು ನಿಮ್ಮ ಕೆಲಸ ಕಾರ್ಯ ಬಿಟ್ಟು ನನ್ನ ಸಹಾಯಕ್ಕೆ, ನನ್ನ ಬೇಜಾರು ಕಳೆಯಕ್ಕೆ ಅಂತ ಬರೋಕ್ಕೆ ಸಾಧ್ಯಾನಾ? ನಿಮ್ಮ ಮನೆಯವರು ತಾನೇ ಏನಂದುಕೊಳ್ತಾರೆ? ಹೋಗಲಿ ಬಿಡಿ. ನಿಮ್ಮ ವಿಷಯ ಹೇಳಿ. ನಿಮ್ಮ ಮನೇಲಿ ಯಾರ್‍ಯಾರು ಇದೀರಿ? ಎಷ್ಟು ಜನ ಮಕ್ಕಳು?"

"ನಮ್ಮ ತಂದೆ ತಾಯಿಗೆ ನಾನೊಬ್ಬನೇ ಮಗ. ನನಗೆ ನಾಲ್ಕು ಜನ ಅಕ್ಕತಂಗಿಯರು. ಎಲ್ಲರಿಗೂ ಮದುವೆಯಾಗಿದೆ" ಎಂದ ಮಹೇಶ.

"ಈಗ ಇವನ ಹೆಂಡತಿಯೂ ಊರಿನಲ್ಲಿಲ್ಲ. ಬರಲು ಆರೇಳು ತಿಂಗಳಾಗಬಹುದು. ಅಲ್ಲೀವರೆಗೂ ಇವನು ಫ್ರೀ...." ನಗುತ್ತಾ ಶ್ರೀಕಾಂತನೆಂದ. ಮಹೇಶ ನಾಚಿಕೆಯಿಂದ ತಲೆ ತಗ್ಗಿಸಿದ. ಶ್ರೀಕಾಂತ ತನ್ನ ಮನೆಯ ವಿಷಯಗಳನ್ನು ಹೇಳಿಕೊಳ್ಳಲಿಲ್ಲ. ಅಷ್ಟಕ್ಕೇ ಮಾತು ನಿಂತಿತು. ಸುಧಾಕರರಾಯರು ಏನೋ ಆಲೋಚನೆಯಲ್ಲಿ ಮುಳುಗಿ ಹೋದಂತೆ ಅನ್ನಿಸಿತ್ತು. ಮಹೇಶ ಸುತ್ತಲೂ ಒಮ್ಮೆ ಕಣ್ಣು ಹಾಯಿಸಿದ. ಗೋಡೆ ಮೇಲೆ ಒಂದೇ ಒಂದು ಫೋಟೋ

ಇರಲಿಲ್ಲ. ಭಣಭಣ ಅನ್ನುತ್ತಿತ್ತು. ಇಬ್ಬರೂ ಎದ್ದಾಗ, ಆತ ಆಗಾಗ್ಗೆ ಬರುತ್ತಿರಿ ಎಂದರು. ಹೊರಗೆ ಬಂದಾಗ ಇಬ್ಬರಿಗೂ ಅನ್ನಿಸಿತ್ತು. ಆತ ಆತನಿಗಾಗಿ ಖರ್ಚಾದ ಹಣದ ವಿಷಯವನ್ನೇ ಎತ್ತಿರಲಿಲ್ಲ. ಮಹೇಶ ಕೇಳುವ ಮೊಧಲೇ ಶ್ರೀಕಾಂತ ನುಡಿದಿದ್ದ.

"ಆತ ಏನೋ ಕಷ್ಟದಲ್ಲಿದಾರೆ ಅಂತ ಅನ್ನಿಸುತ್ತೆ. ಆದರೆ ನಮ್ಮ ನಮ್ಮ ತಾಪತ್ರಯವೂ ಜಾಸ್ತಿ. ಯಾರಿಗಾದರೂ ಸಹಾಯ ಮಾಡಬೇಕಾದರೆ ಹಿಂದೆ ಮುಂದೆ ಆಲೋಚಿಸಬೇಕಾಗುತ್ತೆ"

"ಹೌದು.... ಈ ಸ್ಟುಡಿಯೋಗೆ ಕೈ ಹಾಕದೇ ಯಾವುದಾದರೂ ಕೆಲಸಕ್ಕೆ ಸೇರಿದ್ದರೆ, ತಿಂಗಳ ಕಡೇದಿನ ಸಂಬಳ ಅಂತಲಾದ್ರೂ ಕೈಗೆ ಬರುತ್ತಿತ್ತು"

"ಹೌದು.... ಈಗ ನಿನ್ನ ಸ್ಟುಡಿಯೋ ಹೇಗೆ ನಡೆಯುತ್ತಿದೆ?"

"ಸ್ಕೂಲು, ಕಾಲೇಜು, ಪ್ರಾರಂಭವಾಗುವ ದಿನಗಳಲ್ಲಿ ಸ್ವಲ್ಪ ಬಜಿಯಾಗಿರುತ್ತೆ. ಮದುವೆ ಮುಂಜಿ ಸೀಜನ್‌ಗಳಲ್ಲಿ ಸ್ವಲ್ಪ ಪರವಾಗಿಲ್ಲ. ಫೋಟೋಗ್ರಾಫರ್ ಆಗೋ ಬದಲು ಇಂಜನಿಯರ್ ಆಗಿದ್ದಿದ್ರೆ ಅಂತ ಎಷ್ಟೋ ಸಲ ಅನ್ನಿಸುತ್ತೆ. ಆದರೆ ನನಗೆ ಸೀಟೇ ಸಿಗಲಿಲ್ಲ ಇಂಜಿನಿಯರಿಂಗ್‌ಗೆ"

"ನಿನ್ನ ಹಾಗೇ ನಾನೂ ಎಷ್ಟೋ ಸಲ ಅಂದುಕೊಂಡಿದೀನಿ. ಆದರೆ ಬ್ರಹ್ಮ ನಿನ್ನ ಕೈಗೆ ಕ್ಯಾಮರಾ ಕೊಟ್ಟು ಕಳಿಸಿದಾನೆ. ನನ್ನನ್ನು ಔಷಧಿಗಳ ಮಧ್ಯೆ ಕೂರಿಸಿದಾನೆ. ಇದು ನಮ್ಮ ನಮ್ಮ ಹಣೇ ಬರಹವಲ್ಲದೇ ಮತ್ತೇನು?"

ಇದ್ದಕ್ಕಿದ್ದಂತೆ ಮಹೇಶ ನಕ್ಕ. "ನೀನು ಕ್ಯಾಮೆರಾ ಅಂತ ಹೇಳತ್ಲೂ ನನಗೆ ಒಂದು ವಿಷಯ ನೆನಪಿಗೆ ಬಂತು. ಮೊನ್ನೆ ಇಬ್ಬರು ಗಂಡ ಹೆಂಡತಿ ಫೋಟೋ ತೆಗೆಸಿಕೊಳ್ಳೋಕೆ ಅಂತ ಬಂದಿದ್ದರು. ವಯಸ್ಸಾದ ದಂಪತಿಗಳು. ಯಾವುದೋ ಪೆನ್ಶನ್‌ಗೆ ಸಂಬಂಧಿಸಿದ ಕಾಗದ ಪತ್ರಕ್ಕೆ ಅಂಟಿಸೋಕೆ ಅಂತ ಫೋಟೋ ತೆಗೆಸಿದ್ದು" ಮತ್ತೆ ಮಹೇಶ ನಕ್ಕ.

"ಅದಕ್ಯಾಕೆ ಅಷ್ಟು ನಗ್ತಾ ಇದೀಯ?"

"ಅಲ್ಲಾ ಕೇಳಿಲ್ಲಿ. ಅವನ ಹೆಂಡತಿ ಬುರ್ಖಾ ಹಾಕಿಕೊಂಡಿದ್ದಳು. ಅವಳು ಅವನ ಹೆಂಡತಿಯೇ ಅಂತ ಹೇಗೆ ಹೇಳೋದು.... ನೀನೇ ಹೇಳು ಅದಕ್ಕೇ ನಗು ಬಂತು."

"ಬುರ್ಖಾ ತೆಗೀಲೇ ಇಲ್ವಾ?"

"ಇಲ್ಲ. ಆಮೇಲೆ ಬಂದು ಕೇಳ್ತಾನೆ. ಏನಪ್ಪಾ ಹೀಗಾ ಫೋಟೋ ತೆಗೆಯೋದು? ನನ್ನ ಹೆಂಡತಿ ಮುಖವೇ ಕಾಣ್ತಿಲ್ಲವಲ್ಲ ಅಂತ...."

"ಅದಕ್ಕೆ ನೀನೇನು ಅಂದೆ?"

"ಮತ್ತೆ ಅವರನ್ನು ಕರೆದುಕೊಂಡುಬನ್ನಿ. ಬೇರೆ ಫೋಟೋ ತೆಗೀತೀನಿ. ಆದರೆ ಬುರ್ಖಾ ತೆಗೆದಿಡಬೇಕು ಅಂತ ಹೇಳಿದೆ. ಆ ಆಸಾಮಿ ನಾಪತ್ತೆ. ಮತ್ತೆ ಬಂದೇ ಇಲ್ಲ. ನಗದೇ ಏನು ಮಾಡಲಿ?" ಶ್ರೀಕಾಂತನೂ ನಕ್ಕ.

"ಹೋಗಲಿ ಬಿಡು. ಅದು ಅವನ ಹಣೇಬರಹ. ಬೇಕಾಗಿದ್ರೆ ಮತ್ತೆ ಬರುತ್ತಾನೆ ಬಿಡು. ಅದ್ಸರಿ.... ಆ ಮಹಾಶಯ ಅವರಿಗಾಗಿ ಖರ್ಚು ಮಾಡಿದ ಹಣದ ವಿಷಯವನ್ನೇ ಮಾತನಾಡಲಿಲ್ಲವಲ್ಲ. ಏನು ಮಾಡೋದು ಅಂತ" ಕೈ ಉಜ್ಜಿಕೊಂಡ ಶ್ರೀಕಾಂತ.

"ಇನ್ನು ಮುಂದೆ ಅಂಥೋರಿಗೆ ಸಹಾಯ ಮಾಡೋದನ್ನ ನಿಲ್ಲಿಸು ಅಂತ. ಇನ್ನು ಮೇಲೆ ಹುಶಾರಾಗಿರು. ನಿನ್ನ ಅಂಗಡಿಗೆ ಔಷಧಿಯ ನೆವದಲ್ಲಿ ಇಂಥ ಕೇಸುಗಳು ಬರುವುದು ಸಹಜ"

"ಆದರೆ ಹಾಗೆ ಮಾಡೋಕೆ ಸಾಧ್ಯಾನೇನೋ? ಮಾನವೀಯತೆಯನ್ನು ಮರೆಯೋಕೆ ಆಗುತ್ತಾ? "

"ಸಾಧ್ಯವಿಲ್ಲ. ಆದರೆ ನೀನು ಕುಬೇರನಲ್ಲವಲ್ಲ" ಶ್ರೀಕಾಂತ ಮಾತನ್ನು ಮುಂದುವರೆಸದೇ ಸುಮ್ಮನಾದ.

* * * *

ರೂಪಾ ಶ್ರೀಕಾಂತನ ಸೋದರತ್ತೆಯ ಮಗಳು. ತಂದೆ ತಾಯಿಗಳಿಗೆ ಎರಡನೇ ಮಗಳಾಗಿ ಹುಟ್ಟಿದವಳು, ನೋಡಿದವರ ಕಣ್ಣನ್ನು ಸೆಳೆಯುವಂತೆ ಮುದ್ದಾಗಿದ್ದವಳು. ಶ್ರೀಕಾಂತನ ಅಜ್ಜಿ ಅವಳು ಹುಟ್ಟಿದಾಗಲೇ ಇವನ ಹೆಂಡತಿ ಎಂದು ತೀರ್ಮಾನಿಸಿ ಬಿಟ್ಟಿದ್ದರು. ಯಾರೋ ಪರರ ಮನೆಗೆ ಸೇರುವುದು ಬೇಡ ಈ ಹುಡುಗಿ.... ನಮ್ಮ ಮನೆಯ ಸೊಸೆಯಾಗಿಯೇ ಉಳಿಯಲಿ ಅಂತ, ಈ ಮಾತನ್ನು ಶ್ರೀಕಾಂತನ ತಂದೆತಾಯಿಯಾಗಲೀ, ಸೋದರತ್ತೆ ಮೀನಾಕ್ಷಿಯಾಗಲೀ ವಿರೋಧಿಸಿರಲಿಲ್ಲ.

ಶ್ರೀಕಾಂತ, ರೂಪಾ, ಇಬ್ಬರೂ ಒಟ್ಟಾಗಿ ಸೇರಿದಾಗ ಆಟಕ್ಕಿಂತ ಜಗಳವೇ ಜಾಸ್ತಿ. "ಅಪರೂಪಕ್ಕೆ ಅಜ್ಜಿ ಮನೆಗೆ ಬಂದವಳನ್ನು ಗೋಳುಹುಯ್ಸಿಸ್ತೀಯಲ್ಲೋ. ಈಗಲೇ ಹೀಗಾದರೆ ಮುಂದೆ ಹೇಗೆ" ಎಂದು ಎಲ್ಲರೂ ಶ್ರೀಕಾಂತನನ್ನೇ ದೂಷಿಸುತ್ತಿದ್ದರು. ಆದರೆ ತಪ್ಪೆಲ್ಲಾ ರೂಪಳದೇ. ಕಾಲು ಕೆರೆದು ಜಗಳವಾಡಿ ಶ್ರೀಕಾಂತನನ್ನು ಹಂಗಿಸುತ್ತಿದ್ದಳು.

"ನೀನೊಬ್ಬಳೇ ಸಿಗು. ನಿನಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ" ಎಂದು ಹೆದರಿಸುತ್ತಿದ್ದ. ಬೆಳೀತಾ ಬೆಳೀತಾ ರೂಪಳ ಗರ್ವ ದಿನ ದಿನಕ್ಕೂ ಹೆಚ್ಚಾಯಿತು. ಅಜ್ಜಿ ಮನೆಗೆ ಬರುವುದು ಕಡಿಮೆ ಆಗಿತ್ತು. ಬಂದರೂ, "ನಂಗೆ ಇಲ್ಲಿರುಕ್ಕೆ ಬೇಜಾರು. ಇಲ್ಲೇನಿದೆ?" ಎಂದು ಮೂಗು ಮುರಿದು ಮಾತನಾಡುತ್ತಿದ್ದಳು.

"ಇದೇನೇ ಹಿಂಗಂತೀಯಾ..... ಮುಂದೆ ಈ ಮನೆ ಸೇರಿ ಬಾಳಬೇಕಾದವಳು ನೀನು. ಈಗಲೇ ಬೇಜಾರು ಅಂದ್ರೆ ಹೇಗೆ?" ಎಂದು ಯಾರಾದರೂ ಹೇಳಿದರೆ ಸಿಟ್ಟು ಮಾಡಿಕೊಳ್ಳುತ್ತಿದ್ದಳು. ಶ್ರೀಕಾಂತನ ಕಿವಿಗೆ ಬೀಳುವಂತೆ, "ಇವನನ್ಯಾರು ಮದುವೆಯಾಗ್ತಾರೆ ಹುಂ....." ಎಂದು ಕತ್ತು ಎತ್ತರ ಮಾಡಿ ಮಾತನಾಡುತ್ತಿದ್ದಳು. ಶ್ರೀಕಾಂತ ನಕ್ಕು ಸುಮ್ಮನಾಗುತ್ತಿದ್ದ. ನಮಗೆ ತಿಳುವಳಿಕೆ ಇಲ್ಲದ ವಯಸ್ಸಿನಲ್ಲೇ, ನಮ್ಮ ಮದುವೆಯನ್ನು ಗೊತ್ತು ಮಾಡಲು, ಈ ಹಿರಿಯರಿಗೇನು ಬೇರೆ ಕೆಲಸವಿರಲಿಲ್ಲವೇ.... ಅಂತನ್ನಿಸಿದರೂ, ರೂಪಳಂತೆ ಮಾತನ್ನಾಡುತ್ತಿರಲಿಲ್ಲ.

ಕಾಲೇಜಿಗೆ ಸೇರಿದ ಹೊಸದರಲ್ಲಿ ರೂಪಳ ಬಗ್ಗೆ ಅನೇಕ ಪುಕಾರುಗಳು ಕೇಳಿಬರತೊಡಗಿದವು. ಯಾವುದೋ ಊರಾಚೆ ಇದ್ದ ಕಾಲೇಜಿಗೆ ಸೇರಿದ್ದಳವಳು. ಯಾರೋ ಗಂಡು ಹುಡುಗನ ಜತೆ ಸುತ್ತಾತ್ತಾಳೆ ಎನ್ನುವ ಸುದ್ದಿಯನ್ನು ತಂದರು. ಶ್ರೀಕಾಂತನ ತಂದೆ, ತನ್ನ ತಂಗಿಯನ್ನು ಕರೆಸಿ ಕೇಳಿದಾಗ, ಅವಳೂ ಪೆಚ್ಚಾಗಿದ್ದಳು. ವಯಸ್ಸಾದ ತಾಯಿಗೆ ಕಿವಿ ಕೇಳುವಂತಿರಲಿಲ್ಲವಾದ್ದರಿಂದ ಈ ಸುದ್ದಿ ಕಿವಿಗೆ ಬೀಳಲಿಲ್ಲ. ಆದರೆ ಆ ನಂತರ ನಡೆದದ್ದೇ ಬೇರೆ. ಮಗಳ ಮೇಲೆ ನಿನ್ನ ತವರು ಮನೆಯವರು ಆರೋಪ ಹೊರಿಸಿದರು, ಎನ್ನುವ ಕಾರಣದಿಂದ, ಮೀನಾಕ್ಷಿಯ ಗಂಡ ಸಿಕ್ಕಾಬಟ್ಟೆ ಗಲಾಟೆ ಮಾಡಿ, ಎಲ್ಲರನ್ನು ಅಂದು ಆಡಿ, ಒಬ್ಬರಿಂದ ಒಬ್ಬರು ದೂರವಾಗುವಂತೆ ಮಾಡಿಬಿಟ್ಟ. ತಿಳುವಳಿಕೆ ಹೇಳಲು ಹೋದ ಶ್ರೀಕಾಂತನ ತಂದೆಯನ್ನು "ನೀವ್ಯಾವ ಕುಬೇರನ ವಂಶದವರು ಅಂತ ನಿಮ್ಮ ಮನೆಗೆ ನನ್ನ ಮಗಳನ್ನು ಕೊಡಬೇಕು? ನಿಮ್ಮ ತಾಯಿಯ ಮಾತಿಗೆ ನಾನು ಎಂದೂ ಬೆಲೆಯನ್ನು ಕೊಟ್ಟಿಲ್ಲ. ಸುಮ್ಮನೇ ಹೋಗಿ..... ನನ್ನ ಮಗಳು ಬೀದಿಲಿ ಬಿದ್ದಿಲ್ಲ. ಎಂತೆಂಥೋರ ಮನೆಗೋ ಸೇರಿಸುಕ್ಕೆ" ಎಂದು ಹೀನಾಯವಾಗಿ ಆಡಿ ಕಳಿಸಿಬಿಟ್ಟ. ಮನೆಗೆ ಬಂದ ಅಣ್ಣನಿಗೆ ಆದ ಅವಮರ್ಯಾದೆಯನ್ನು ಕಂಡು ನೊಂದರೂ, ಅಸಹಾಯಕಳಾಗಿ ನಿಂತಿದ್ದ ಮೀನಾಕ್ಷಿ ಕೈ ಮುಗಿದಾಗ, ಆತ ಅವಮಾನಿತರಂತೆ ಹಿಂತಿರುಗಿ ಬಂದಿದ್ದರು.

ಈ ವಿಷಯವನ್ನು ಯಾರೂ ಅಜ್ಜಿಯ ತನಕ ತಲುಪಿಸಲಿಲ್ಲ.

ಮೀನಾಕ್ಷಿ ಯಾಕೋ ಬಂದಿಲ್ಲವೆಂದು ಅಜ್ಜಿ ಮತ್ತೆ ಮತ್ತೆ ಕೇಳಿದಾಗ, ಶ್ರೀಕಾಂತ, ಅತ್ತೆಗೆ ಹೇಳಿಬರಲೆಂದು ಹೋಗಿದ್ದ. ಮನೆಯಲ್ಲಿ ರೂಪಾ ಮಾತ್ರ ಇದ್ದಳು. ಅವಳು ಇವನೊಡನೆ ಸರಿಯಾಗಿ ಮಾತನಾಡಲಿಲ್ಲ. ಆದರೆ ಒಬ್ಬಳೇ ಸಿಕ್ಕಿದಾಳೆ ಇದೇ ಸಮಯವೆಂದುಕೊಂಡು, ಶ್ರೀಕಾಂತ ಸಂಕೋಚವನ್ನು ಬದಿಗಿಟ್ಟು ಕೇಳಿದ್ದ.

"ಬೇರೆ ಯಾರೋ ಹುಡುಗನ ಜತೆ ನಿನ್ನ ಸ್ನೇಹ ಇದೆ ಅಂತ ಎಲ್ಲರೂ ಹೇಳ್ತಾರೆ." ಯಾಕೆ ನಿನಗೆ ನನ್ನನ್ನು ಮದುವೆಯಾಗಲು ಇಷ್ಟವಿಲ್ಲವಾ? ರೂಪ ನಕ್ಕಿದ್ದಳು.

"ಎಸ್. ನನಗೆ ನಿನ್ನನ್ನ ಮದುವೆ ಯಾಗೋಕೆ ಸುತರಾಂ ಇಷ್ಟವಿಲ್ಲ. ನಾನು ಆ ಹುಡುಗನ್ನ ಲವ್ ಮಾಡ್ತಿದೀನಿ. ಅವನನ್ನೇ ಮದುವೆಯಾಗ್ತೀನಿ. ನಾನು ಅಪ್ಪನನ್ನು ಒಪ್ಪಿಸಿಯಾಗಿದೆ"

"ಯಾಕೆ ಹೀಗೆ ಮಾಡಿದೆ? ಈ ವಿಷಯ ಅಜ್ಜಿಗೆ ತಿಳಿದರೆ ಏನೆಂದು ಕೊಳ್ತಾರೆ?"

"ನಾನು ಹುಟ್ಟೋಕ್ಮುಂಚೇನೇ ಗೊತ್ತು ಮಾಡಿರುವ ಮದುವೆಗೆ ನಾನು ಬೆಲೆ ಕೊಡಲ್ಲ. ನನಗೆ ನೀನೆಂದೂ ಇಷ್ಟವಾಗಲೇ ಇಲ್ಲ. ಐ ಲವ್ ಹಿಮ್.... ಅವರು ಎಷ್ಟು ಶ್ರೀಮಂತರು ಗೊತ್ತಾ? ಕಾರು ಬಂಗ್ಲೆ ಎಲ್ಲಾ ಇದೆ. ನಾನು ಹಳೇ ಕಾಲದವಳಲ್ಲ. ಈ ಕಾಲದವಳು, ನನ್ನ ಲೈಕಿಂಗ್ಸ್‌ಗಳೇ ಬೇರೆ"

"ಆದರೂ......"

"ಯಾಕೋ ಹೀಗಾಡ್ತೀ ಶ್ರೀಕಾಂತ. ಹೆಣ್ಣುಮಕ್ಕಳ ತರಹ ಅಳಬೇಡ. ಬೋಲ್ಡ್ ಆಗಿರು.... ನನ್ನ ತರಹ" ಅವಳು ಕತ್ತು ಕೊಂಕಿಸಿ ನುಡಿದಾಗ ಬೇಸರವಾಗಿತ್ತು.

"ನಾವು ಶ್ರೀಮಂತರಲ್ಲ ಅಂತ ಹಂಗಿಸಿ ಅಂತೀಯಲ್ಲ. ಶ್ರೀಮಂತಿಕೆ ಶಾಶ್ವತವಲ್ಲ. ನಮ್ಮ ಹೃದಯವಂತಿಕೆ ಶಾಶ್ವತ. ಅದು ನಮ್ಮ ಶ್ರೀಮಂತಿಕೆ"

"ಸಾಕು ಈ ಲೆಕ್ಚರ್ ಎಲ್ಲಾ ನನಗೆ ಬೇಡ. ನಮಗೂ ನಿಮಗೂ ಸರಿ ಹೋಗೋಲ್ಲ ಅಂತ ಅಪ್ಪ ಅವತ್ತೇ ಮಾವನ ಹತ್ತಿರ ಹೇಳಿದ್ರಲ್ಲ.... ನೀನ್ಯಾಕೆ ಮತ್ತೆ ಬಂದೆ?"

"ಅಜ್ಜಿ ಹೇಳಿಕಳಿಸಿದ್ರು ಅಂತಬಂದೆ. ನಿನಗೆಷ್ಟು ಗರ್ವ ಅಂತ ಗೊತ್ತಾಯ್ತು.

ಇವತ್ತು ಅವನ್ಯಾವನೋ ಕುಬೇರ ಸಿಕ್ಕಿದಾನೆ ಅಂತ, ನಮ್ಮ ಸಂಬಂಧಗಳನ್ನೆಲ್ಲಾ ಮುರಿದು ಹಾಕ್ತಿದೀಯ. ಇದರಿಂದ ನನಗೇನೂ ನಷ್ಟವಿಲ್ಲ ತಿಳಕೋ. ಮುಂದೆಂದಾದರೂ ನಿನಗೆ ಬುದ್ಧಿ ಬರಬಹುದು. ಆಗ ಕಾಲ ಮಿಂಚಿರುತ್ತೆ ಅಷ್ಟೆ"

"ಹಾಗೇನೂ ಆಗೊಲ್ಲ. ಡೋಂಟ್ ವರಿ....." ಎಂದು ಅವಳು ವಿಚಿತ್ರವಾಗಿ ನಕ್ಕಾಗ ಅವನಿಗೆ ಅವಮಾನವಾದಂತಾಗಿತ್ತು.

ಆಮೇಲೆ ಕೆಲವಾರು ತಿಂಗಳ ನಂತರ ಅವಳ ಮದುವೆ ಆ ಶ್ರೀಮಂತ ಹುಡುಗನೊಡನೆ ವೈಭವವಾಗಿ ನೆರವೇರಿತ್ತು. ಇವರಿಗೂ ಮದುವೆ ಆಹ್ವಾನ ಪತ್ರಿಕೆ ಬಂದಿತ್ತು. ಆದರೆ ಯಾರೂ ಹೋಗಿರಲಿಲ್ಲ. ಅಜ್ಜಿಗೆ ವಿಷಯವನ್ನೂ ತಿಳಿಸಲಿಲ್ಲ. ಆದರೆ ಕುತೂಹಲದ ನೆಂಟರಿಷ್ಟರು ಬಿಡಬೇಕಲ್ಲ. ಕೆದಕಿ ಬೆದಕಿ ವಿಷಯಗಳನ್ನು ಹೆಕ್ಕಿ ತಿಳಿದುಕೊಳ್ಳುವ ಪ್ರಯತ್ನ ಮಾಡಿದರು. ಅಜ್ಜಿಗೂ ವಿಷಯ ತಿಳಿಯಿತು. ಎಲ್ಲರನ್ನು ಒಂದಿಷ್ಟು ಬೈದರು. ಶ್ರೀಕಾಂತನನ್ನು ಕರೆಸಿ ಛೀಮಾರಿ ಹಾಕಿದರು.

"ಅವಳು ನಿನ್ನ ವಸ್ತು ಅಂತ ಅಂದಮೇಲೆ ಅವಳನ್ನು ಬೇರೆ ಯಾರಿಗೋ ನೀನು ಹೇಗೆ ಕೊಟ್ಟೆ? ನನ್ನ ಮಾತನ್ನು ನೀವೆಲ್ಲಾ ಮೀರಿದೀರಿ.... ನೀವ್ಯಾರೂ ಸುಖವಾಗಿರೋಲ್ಲ ನೋಡಿ"

ಅಜ್ಜಿಯ ಮಾತುಗಳು ನೆನಪಾದವು. ಮುಖದಿಂದ ಸುರಿಯುತ್ತಿದ್ದ ಬೆವರನ್ನು ಒರೆಸಿಕೊಂಡ. ಹೌದು. ಅಜ್ಜಿಯ ಮಾತು ನಿಜವಾಯಿತು. ನಾವ್ಯಾರೂ ಸುಖವಾಗಿಲ್ಲ ಈಗ.... ಅಂತನ್ನಿಸಿದರೂ, ನನ್ನದು ಯಾವ ತಪ್ಪೂ ಇರಲಿಲ್ಲ. ಆದರೆ ನಾನು ಏಕೆ ಸುಖವಾಗಿಲ್ಲ....? ಶ್ರೀಕಾಂತ ಅಂತ ಯಾಕೆ ಹೆಸರಿಟ್ಟರೋ? ಸಿರಿಗಾಗಿ ಪರದಾಡ ಬೇಕಾದ ಸ್ಥಿತಿ ನನಗೆ! ಎಂದುಕೊಂಡ. ವ್ಯಂಗ್ಯ ನಗೆ ತುಟಿಯಂಚಿನಲ್ಲಿ ಮೂಡಿತು.

"ಯಾಕೋ ಶ್ರೀಕಾಂತು... ನಿನಗೆ ನೀನೇ ನಗ್ತಾ ಇದೀಯ? ತಾಯಿ ಗಮನಿಸಿ ಕೇಳಿದಾಗ ಮತ್ತೆ ನಕ್ಕ"

"ನಗದೇ ಏನು ಮಾಡಲಿ? ನನಗೇಕೆ ಶ್ರೀಕಾಂತ ಅಂತ ಹೆಸರಿಟ್ಟರೋ ಅಂತ ಯೋಚಿಸ್ತಿದ್ದೆ"

"ಹೆಸರಿನಲ್ಲೇನಿದೆ? ಎಲ್ಲಾ ಅವರವರ ಹಣೆಬರಹ..... " ತಾಯಿ ನಿಟ್ಟುಸಿರುಬಿಟ್ಟಾಗ, ವ್ಯಥೆಯೆನಿಸಿತು. ಜತೆಗೇ ತಾನು ತಾಯಿಗೆಂದು ತಂದಿದ್ದ ಸೀರೆ ನೆನಪಾಯಿತು. ಸೀರೆಯ ಪ್ಯಾಕೆಟ್ಟನ್ನು ತಂದು ತಾಯಿಯ ಕೈಗಿತ್ತ.

"ಇದೇನು?" ಎನ್ನುತ್ತಾ ಪಾರ್ವತಿ ಸೀರೆಯನ್ನು ತೆಗೆದು ನೋಡಿದಳು.

"ಯಾರಿಗೆ ಸೀರೆ?" ಪ್ರಶ್ನಿಸಿದಳು.

"ನಿನಗೇನಮ್ಮಾ...."

"ನನಗಾ? ನನಗ್ಯಾಕೆ ಈಗ? ಮದುವೇನೆ? ಮುಂಜೀನೇ? ಇರೋ ಸೀರೆಗಳೇ ಪೆಟ್ಟಿಗೆಯಲ್ಲಿ ಬದ್ದಿವೆ. ನನಗೆ ಬೇಡ"

"ಬೇಡ ಅನ್ನಬೇಡ ಉಟ್ಟುಕೋ.... ಮದುವೆ ಮುಂಜಿ ಇಲ್ಲದಿದ್ದರೆ ಹೊಸಾ ಸೀರೆ ತರಬಾರದು ಅಂತೇನಿಲ್ಲವಲ್ಲ."

"ಮನೇಲೇ ಇರೋಳು ನನಗೇಕೆ ಅಂತಂದೆ. ನನ್ನ ಬದಲಿಗೆ ರಂಜಿನಿಗಾದ್ರೂ ತಂದಿದ್ರಾಗುತ್ತಿತ್ತು. ತವರು ಮನೆ ಅಂತ ಕರೆದು ಕಳಿಸಿ, ಹೆಣ್ಣುಮಕ್ಕಳಿಗೆ ಉಡುಗೊರೆ ಕೊಟ್ಟರೆ ಖುಷಿಯಾಗುತ್ತೆ"

"ಅವಳಿಗೂ, ರಮನಿಗೂ ಮುಂದಿನ ತಿಂಗಳು ಒಟ್ಟಿಗೇ ತಂದ್ರಾಯ್ತು. ಹೇಗೂ ಗೌರಿಹಬ್ಬ ಬರುತ್ತಲ್ಲ" ತಾಯಿ ಮಾತನಾಡಲಿಲ್ಲ. ಹಬ್ಬದಲ್ಲಿ ರಮಳಿಗೇಕೆ ಸೀರೆ ಅಂತನ್ನಿಸಿರಬಹುದು. ಶ್ರೀಕಾಂತನಿಗೆ ಪಿಚ್ಚೆನಿಸಿತು. ಇದರಲ್ಲಿ ರಮಾಳ ತಪ್ಪೇನು? ಅಮ್ಮ ತನ್ನ ಅನಿಸಿಕೆಗಳನ್ನು ಈ ಜನ್ಮದಲ್ಲಿ ಬದಲಿಸಿಕೊಳ್ಳಲು ಸಾಧ್ಯವಿಲ್ಲವೇನೋ? ರಮಳ ಬಗ್ಗೆ ಮರುಕ ಉಕ್ಕಿತು. ಅವಳಿಗೆ ಈ ಕೆಲಸವೂ ಇಲ್ಲದಿದ್ದರೆ ಕಾಲ ಕಳೆಯುವುದು ಕಷ್ಟವಾಗುತ್ತಿತ್ತೋ..... ವಿಶೂ ಬಂದು ಅವನ ತೊಡೆಯೇರಿದ. ಅವನ ಆಲೋಚನೆಗಳು ತುಂಡಾದವು.

"ಏನೋ ವಿಶ್.... ಮಮ್ಮೂ ಆಯ್ತೇನೋ" ತಾನೂ ಮುದ್ದಾಗಿ ಕೇಳಿದ. ಹೂಂ ಎನ್ನುತ್ತಾ ಅವನು ತಲೆಯಾಡಿಸಿದ. ಇವನು ಎತ್ತಿಕೊಂಡು ಲೊಚಲೊಚನೆ ಮುತ್ತು ಕೊಟ್ಟ.

"ನನ್ನ ಸೀರೆಗೆ ದುಡ್ಡು ಹಾಕೋ ಬದಲು, ಮಗು ಹೆಸರಿನಲ್ಲಿ ಬ್ಯಾಂಕಿನಲ್ಲಿ ದುಡ್ಡಿಟ್ಟದ್ದರೆ ಆಗ್ತಾ ಇತ್ತು....." ಪಾರ್ವತಿ ತ್ತಲೋ ನೋಡುತ್ತಾ ನುಡಿದಳು.

"ಅದಕ್ಕೆಲ್ಲಾ ಅವಸರ ಏನಿಲ್ಲ. ಎಲ್ಲಾ ಆಗುತ್ತೆ. ನಿನಗೇಕೆ ಚಿಂತೆ"

"ನನಗೆ ಚಿಂತೆ ಇರೊಲ್ಲವೇನೋ..... ಪಾಪ ತಬ್ಬಲಿ ಮಗು"

"ಅವನ್ಯಾಕಮ್ಮಾ.... ತಬ್ಬಲಿ? ನಾವುಗಳೆಲ್ಲಾ ಇದೀವಲ್ಲ"

"ನಾವು ಇದ್ದರೆ ಅವನ ಅಪ್ಪ ಇದ್ದ ಹಾಗೆ ಆಗುತ್ತೇನೋ"

"ಆ ಜಾಗ ನಾವು ತುಂಬುಕ್ಕಾಗುಲ್ಲ ನಿಜ. ಆದರೆ ಅವನಿಗೆ ಏನೂ ಕಷ್ಟ ಬರದ ಹಾಗೆ ನೋಡಿಕೊಳ್ಳುವುದು ನನ್ನ ಕರ್ತವ್ಯ"

"ಅದು ಸರಿ, ನಿನ್ನದೇ ಅಂತ ಒಂದು ಸಂಸಾರ ಶುರುವಾದ ಮೇಲೆ

ಹೇಗೆ ಅಂತ? ನನಗೆ ಸದಾ ಅದೇ ಚಿಂತೆ" ತಾಯಿ ಆತಂಕದಿಂದ ನುಡಿದಳು.

"ನನ್ನದೇ ಸಂಸಾರ ಅಂತ ಬೇರೆ ಯಾಕಮ್ಮಾ.... ಈಗ ಇರುವ ರೀತೀನೇ ಸರಿಯಾಗಿದೆ" ತಾಯಿಯ ಮಾತಿನ ಸೂಚನೆ ಯಾವ ದಿಕ್ಕಿಗಿದೆ ಅಂತ ಅವನಿಗೆ ತಿಳಿದಿತ್ತು.

"ಇಲ್ಲ, ಸರಿಯಾಗಿಲ್ಲ. ನೀನು ಮದುವೆಯಾಗದೇ ಎಷ್ಟು ವರ್ಷ ಹೀಗೇ ಇರೋಕೆ ಸಾಧ್ಯ? ರಂಜಿನಿ ಕಾಗದ ಬರೆದಿದಾಳೆ. ಅವರ ಪೈಕಿ ಒಂದು ಹುಡುಗಿ ಇದಾಳಂತೆ"

"ನಾನು ಅವತ್ತೇ ಹೇಳಿದೆ. ನನಗೆ ಮದುವೆ ಬೇಡಾಂತ"

"ಶ್ರೀಕಾಂತ ವಿಶ್ವನನ್ನು ಎತ್ತಿಕೊಂಡು ತಾಯಿಯ ಎದುರಿನಿಂದ ಎದ್ದು ಹೋದ"

"ಯಾವಾಗ ಮದುವೆ ಮಾತನ್ನೆತ್ತಿದರೂ ಹೀಗೇ ಮಾತಾಡ್ತೀಯಲ್ಲ. ಎಲ್ಲರೂ ನನ್ನ ಹೊಟ್ಟೆ ಉರಿಸೋರೆ....." ಶ್ರೀಕಾಂತ ಕೇಳಿಸದವನಂತೆ ತನ್ನ ಪಾಡಿಗೆ ತಾನು ವಿಶ್ವಾಸನನ್ನು ಆಡಿಸತೊಡಗಿದ.

"ಅದೇನು ಹಠವೋ...... ಅದ್ಯಾವಾಗ ಬದಲಾಗ್ತೀಯೋ....." ಪಾರ್ವತಿ ಗೊಣಗುತ್ತಾ ಸೀರೆಯನ್ನು ಬದಿಗಿಟ್ಟು ಮಲಗಿದಳು. ಭುಜದ ಮೇಲೆ ಒರಗಿದ್ದ ವಿಶೂ ಹಾಗೇ ನಿದ್ದೆ ಹೋಗಿದ್ದ. ಅವನನ್ನು ತಾಯಿಯ ಮಗ್ಗುಲಿನಲ್ಲಿ ಮಲಗಿಸಿ, ಮುಂಗುರುಳು ನೇವರಿಸಿ, ತನ್ನ ರೂಮಿಗೆ ಹೋದ.

ಒಂದೆರಡು ದಿನಗಳ ನಂತರ ಸುಧಾಕರರಾಯರಿಂದ ಶ್ರೀಕಾಂತನಿಗೆ ಫೋನು ಬಂದಿತ್ತು. ಕೆಲವು ಔಷಧಿಗಳ ಹೆಸರನ್ನು ಹೇಳಿ, "ತಂದು ಕೊಡ್ತಿಯೇನಪ್ಪಾ" ಅಂತ ಕೇಳಿದ್ದರು. ಇಲ್ಲವೆನ್ನಲಾಗದೇ ಶ್ರೀಕಾಂತ ಒಪ್ಪಿಕೊಂಡಿದ್ದ. ಮಹೇಶನಿಗೆ ಹೇಳಿಕಳಿಸಿದ. ಅವನು ಹೊರಗೆಲ್ಲೋ ಹೋಗಿರುವನೆಂದು ತಿಳಿಯಿತು. ಇವನು ಔಷಧಿಗಳ ಪ್ಯಾಕೆಟ್ಟನ್ನು ಹಿಡಿದು ತಾನೊಬ್ಬನೇ ಅವರ ಮನೆಯ ಕಡೆ ಹೋದ. ಇವನಿಗಾಗಿಯೇ ಕಾಯುತ್ತಾ ಕೂತಿದ್ದವರು, ನಗುತ್ತಾ ಅವನನ್ನು ಬರಮಾಡಿಕೊಂಡರು. ಇವನು ಅವರ ಕೈಗೆ ಔಷಧಿಗಳ ಪ್ಯಾಕೆಟ್ಟನ್ನು ಇತ್ತ.

"ಥ್ಯಾಂಕ್ಸ್" ಎಂದು ಹೇಳಿ ಅವನಿಗೆ ಕುಳಿತುಕೊಳ್ಳುವಂತೆ ಹೇಳಿದರು.

"ಈಗ ಹೇಗಿದೀರಿ?" ಎನ್ನುತ್ತಾ ಅವನು ಕೂತ.

"ಪರವಾಗಿಲ್ಲ. ಅವತ್ತು ಇದ್ದಕ್ಕಿದ್ದಂತೆ ಏನಾಯ್ತು ಅಂತ ನನಗೆ ಇವತ್ತಿಗೂ

ಅರ್ಥವಾಗ್ತಿಲ್ಲ. ಸುಮ್ಮನೇ ಒಂದು ಪ್ರಕರಣ.... ಹ್ಲಾಂ, ತಗೋ. ಮರೆತೇ ಬಿಟ್ಟಿದ್ದೆ" ಎನ್ನುತ್ತಾ ಒಂದು ಚೆಕ್‌ನ್ನು ಅವನೆಡೆ ನೀಡಿದರು.

"ಪರವಾಗಿಲ್ಲ. ನಿಧಾನವಾಗಿ ಕೊಡಬಹುದಾಗಿತ್ತು" ಎಂದು ಅವನು ನುಡಿಯುತ್ತಾ ಕೈಗೆ ತೆಗೆದುಕೊಂಡ.

"ನಿಧಾನ...... ಇನ್ನೆಷ್ಟು ನಿಧಾನ? ನ್ಯಾಯವಾಗಿ ನಾನು ಅವತ್ತೇ ಕೊಡ ಬೇಕಾಗಿತ್ತು. ಎಷ್ಟು ಖರ್ಚಾಗಿದೆಯೋ ಅದಷ್ಟೂ ಮೊತ್ತವನ್ನು ಬರೆದುಕೊಂಡು ಬಿಡು"

ಶ್ರೀಕಾಂತನಿಗೆ ಸಂಕೋಚವೆನಿಸಿತು. ಮಹೇಶ ಬಂದಿದ್ದರೆ ಚೆನ್ನಾಗಿತ್ತೆನಿಸದೇ ಇರಲಿಲ್ಲ.

"ಹಣ ತುಂಬಾ ಕೆಟ್ಟದು. ಅದು ಮನುಷ್ಯರನ್ನು ದೂರ ದೂರ ಮಾಡುತ್ತೇ ವಿನಾ ಒಂದುಗೂಡಿಸುವುದಿಲ್ಲ. ಆದರೆ ಅದಿಲ್ಲದೇ ಮನುಷ್ಯ ಈ ಕಾಲದಲ್ಲಿ ಬದುಕಲು ಸಾಧ್ಯವಿಲ್ಲ. ಇವತ್ತಿಗೆ ನನ್ನ ನಿನ್ನ ಸ್ನೇಹ ಮುಗಿಯಿತು ಅಂತ ಅಂದ್ಕೋ ಬೇಡಪ್ಪಾ. ಆಗಾಗ್ಗೆ ಬರ್ತಾ ಇರು. ನಿನ್ನ ಸ್ನೇಹಿತನಿಗೂ ಹೇಳು. ಅವನೂ ಬರಲಿ"

ಇವರಿಬ್ಬರ ಮಾತನ್ನು ಒಳಗೆ ನಿಂತು ಆಲಿಸುತ್ತಿದ್ದ ಕಾವೇರಮ್ಮ, ಶ್ರೀಕಾಂತ ಹೊರಡುವೆನೆಂದು ಹೇಳಿದಾಗ, ಅವನಿಗಿಂತ ಮುಂಚೆ ಬಾಗಿಲಿನಿಂದಾಚೆ ಒಂದು ಗೇಟಿನಲ್ಲಿ ನಿಂತಳು. ಅವನು ಗೇಟಿನ ಬಳಿಗೆ ಬಂದಾಗ ಪಿಸುದನಿಯಲ್ಲಿ ಹೇಳಿದಳು.

"ನನಗೆ ರಾಯರದ್ದೇ ಚಿಂತೆ ಆಗಿದೆ. ಸದಾ ಹೆಂಡತಿಯ ಫೋಟೋ ಹಿಡಿದುಕೊಂಡು ಏನೋ ಮಾತನಾಡುತ್ತಿರುತ್ತಾರೆ. ಆದರೆ ಯಾರಿಗೂ ಏನೂ ತಿಳಿಸುವುದು ಬೇಡ ಅಂತ ಹಠ ಮಾಡ್ತಾರೆ. ಅವರ ಮಗಳಿಗೆ ತಂದೆಗೆ ಅನಾರೋಗ್ಯ ಅಂತ ತಿಳಿದರೆ ಖಂಡಿತಾ ಬಂದೇ ಬರುತ್ತಾಳೆ ಅಂತ ನನಗನ್ನಿಸುತ್ತೆ. ನೀವು ಅವಳೆಲ್ಲಿದಾಳೆ ಅಂತ ಕಂಡುಹಿಡಿದು ತಿಳಿಸ್ತೀರಾ?"

"ಅಡ್ರೆಸ್ಸಿಲ್ಲದೇ ನಾನು ಅವಳನ್ನು ಹೇಗೆ ಹುಡುಕಲಿ?"

"ನನಗೂ ಅಡ್ರೆಸ್ಸು ತಿಳಿಯದು..... ಆದರೆ ಇವರು ಆಗಾಗ್ಗೆ ಅವಳ ಹೆಸರಿಗೆ ಇನ್ನೊಂದು ಬ್ಯಾಂಕಿಗೆ ಹಣ ಕಳಿಸ್ತಾರೆ....."

"ಯಾವ ಬ್ಯಾಂಕು ಅಂತ ತಿಳಿದರೆ ವಿಚಾರಿಸಬಹುದು"

"ನನಗೆ ಯಾವ ಬ್ಯಾಂಕಿನ ಹೆಸರೂ ತಿಳಿಯದು. ಆದರೆ ಒಂದ್ಮಾತು ನೀವು ತಪ್ಪು ತಿಳಿಯಬೇಡಿ. ನಿಮಗೆ ಒಂದು ಚೆಕ್ ಕೊಟ್ಟಿದಾರಲ್ಲ, ಅ

ಬ್ಯಾಂಕಿನಲ್ಲಿ ವಿಚಾರಿಸಿದರೆ ತಿಳಿಯಬಹುದು ಅಲ್ವಾ?"

ಆಕೆಯ ಬುದ್ಧಿವಂತಿಕೆಗೆ ಇವನು ಬೆರಗಾದ. ಅಂದರೆ ಈಕೆ ನಮ್ಮಿಬ್ಬರ ಮಾತನ್ನು ಮರೆಯಲ್ಲಿ ನಿಂತು ಕೇಳಿಸಿಕೊಳ್ಳುತ್ತಿದ್ದಳೆಂದು ಅರ್ಥವಾಗಿತ್ತು.

"ಬ್ಯಾಂಕಿನಲ್ಲಿ ವಿಚಾರಿಸಿದರೂ ಹೇಳ್ತಾರೋ ಇಲ್ಲವೋ" ಅನುಮಾನ ವ್ಯಕ್ತಪಡಿಸಿದ. ಆದರೂ ನುಡಿದ. "ಆಗಲಿ ಪ್ರಯತ್ನ ಪಡ್ತೀನಿ. ಆಗದಿದ್ದರೆ ಆಮೇಲೆ ನಿಮ್ಮನ್ನೇ ಕರೆದುಕೊಂಡು ಹೋಗ್ತೀನಿ ಆಯ್ತಾ?"

ಆಕೆ ಹೂಂ ಎಂದು ಕೈಮುಗಿದಳು. ಇವನು ಆಕೆಯ ಬಗ್ಗೆ ಮರುಕಗೊಂಡ.

ಬ್ಯಾಂಕಿಗೆ ಹೋಗಲು ಬಿಡುವಾಗಿರಲಿಲ್ಲ. ಮಹೇಶ ಒಂದೆರಡು ಕಡೆ ಕೆಲಸದ ಮೇಲೆ ಹೊರಗೆ ಹೊರಟುಹೋಗಿದ್ದ. ನಂತರ ಬಂದವನು ತಮಾಷೆಯಾಗಿ ಕೇಳಿದ್ದ.

"ಏನಾಯ್ತಪ್ಪಾ.... ಆಸ್ಪತ್ರೆ ಬಿಲ್ ಸಿಕ್ತೋ ಇಲ್ಲವೋ?"

"ಸಿಕ್ತು ಕಣೋ ಮಹೇಶ. ಅದನ್ನೇ ಹೇಳೋಣ ಅಂತಿದ್ದೆ. ನೀನು ಎಲ್ಲೋ ಹೊರಟುಹೋಗಿದ್ದೆ. ಚೆಕ್ ಕೊಟ್ಟಿದ್ದಾರೆ. ಹೋಗಿ ಕ್ಯಾಷ್ ತಗೋಬೇಕು. ಹಾಗೇ ಇನ್ನೊಂದು ಕೆಲಸ ಸಹ ತಲೆ ಮೇಲೆ ಬಿದ್ದಿದೆ" ಎನ್ನುತ್ತಾ ಅಡಿಗೆ ಕಾವೇರಮ್ಮ ಹೇಳಿದ್ದನ್ನು ಹೇಳಿದ.

"ಓ...... ಹಾಗಾದರೆ ಪತ್ತೇದಾರಿ ಕೆಲಸಾನೂ ಮಾಡಬೇಕು ನೀನು"

"ಮಾಡಲೇ ಬೇಕೂಂತ ಏನಿಲ್ಲ.... ಆತ ಹೇಳಿಲ್ಲವಲ್ಲ"

"ಆತನಿಗಿಲ್ಲದ ಆತಂಕ ಈಕೆಗ್ಯಾಕೆ?"

"ಏನೋ ನಂಗೇನು ಗೊತ್ತು?"

"ಬಹುಶಃ ನಿನ್ನಂತಹ ಪೆಕರ ಇದುವರೆಗೂ ಸಿಕ್ಕಿರಲಿಲ್ಲ ಅಂತ ಕಾಣುತ್ತೆ....."

"ನಾನು ಅಷ್ಟು ಪೆಕರಾನಾ? ಯಾರಿಗಾದ್ರೂ ಸಹಾಯ ಮಾಡಿದ್ರೆ ಅದನ್ನು ಪೆಕರತನ ಅಂತಾರಾ...... ಏನೋ ನೀನು?"

"ಸುಮ್ಮನೇ ತಮಾಷೆ ಮಾಡಿದೆ ಅಷ್ಟೇ. ಇದೂ ಒಂದು ಥರ ಥ್ರಿಲ್..... ಇಲ್ಲದಿದ್ದರೆ ನೀನೊಬ್ಬ ಸ್ಥಿತಪ್ರಜ್ಞನ ತರಹ ಇರ್ತೀಯ" ಅಷ್ಟೇ.

"ನಾನು ಸ್ಥಿತಪ್ರಜ್ಞನೂ ಅಲ್ಲ..... ಅಥವಾ ನನಗೆ ಯಾವ ಥ್ರಿಲ್ಲೂ ಬೇಡ. ನಿನ್ನ ಸಹಾಯ ಮಾತ್ರ ಬೇಕು"

"ಅಂದರೇ.... ಇನ್ನು ಮೇಲೆ ನಾನು ನಿನ್ನ ಅಸಿಸ್ಟೆಂಟು..... ಪತ್ತೇದಾರ ಶ್ರೀಕಾಂತನ ಅಸಿಸ್ಟೆಂಟು" ಇಬ್ಬರೂ ನಕ್ಕರು. ಮಹೇಶ ಹೇಳುವುದು ನಿಜ. ಇವನ ಸ್ನೇಹ ನನಗಿಲ್ಲದೇ ಇದ್ದಿದ್ದರೆ ನನ್ನ ಜೀವನ ಎಷ್ಟು ನೀರಸವಾಗಿರುತ್ತಿತ್ತೋ?

ಬರೀ ಅಂಗಡಿ...... ಮನೆ, ಮನೆ ಅಂಗಡಿ ಇದಿಷ್ಟೇ ಆಗುತ್ತಿತ್ತು. ತಮಾಷೆಯಾಗಿ ಮಾತನಾಡಿ ನನ್ನನ್ನು ಸ್ವಲ್ಪ ನಗಿಸ್ತಾನೆ. ಇಲ್ಲದಿದ್ದರೆ ನಗು ಅನ್ನೋದೇ ಮರೆತು ಹೋಗ್ತಿತ್ತೇನೋ...... ಅಂತ ಅನ್ನಿಸಿದಾಗ, ಸ್ನೇಹಿತನ ಮೇಲಿನ ಅಭಿಮಾನ ಹೆಚ್ಚಾಯಿತು.

"ಥ್ಯಾಂಕ್ ಯೂ ಮಹೇಶ" ಎಂದು ನುಡಿದ ಅವನ ಕೈ ಹಿಡಿದು.

* * * *

ಶ್ರೀಕಾಂತನಿಗೆ, ರೂಪ ತನ್ನನ್ನು ತಿರಸ್ಕರಿಸಿದ್ದು, ಅಭಿಮಾನಕ್ಕೆ ಪೆಟ್ಟು ಬಿದ್ದಂತಾಗಿತ್ತು. ತಾನೇನು ಅವಳನ್ನೇ ಮದುವೆಯಾಗಬೇಕು ಅಂತ ಎಂದೂ ಬಯಸಿದವನಲ್ಲ. ಅಜ್ಜಿ ಆಸೆಯಿಂದ ಗೊತ್ತು ಮಾಡಿದ್ದು. ಅವಳಂತೆಯೇ ಇವನೂ ಅಜ್ಜಿಯ ಮಾತನ್ನು ಗೌರವಿಸದೇ, ಅವಳನ್ನು ತಾನೇ ತಿರಸ್ಕರಿಸಬಹುದಾಗಿತ್ತು. ಆದರೆ ಆ ಅವಕಾಶವೇ ಬರಲಿಲ್ಲ. ಇವನಿನ್ನು, ಮದುವೆ ಎಂದರೇನು ಎಂದು ಸರಿಯಾಗಿ ಆಲೋಚಿಸಲೂ ಆಗದಂತಹ ವಯಸ್ಸಿನಲ್ಲಿದ್ದಾಗಲೇ ಅವಳು ಅವನನ್ನು ಕಡೆಗಣಿಸಿದ್ದು ಇವನಿಗೆ ಆಘಾತವಾದಂತಾಗಿತ್ತು. ರೂಪ ಬಯಸುವಂತೆ ತಾನು ಶ್ರೀಮಂತನಲ್ಲ, ಆದರೂ ಅವಳು ಹಾಗೆ ಮಾಡಬಾರದಾಗಿತ್ತು ಅಂತ ಪದೇ ಪದೇ ಅನ್ನಿಸುತ್ತಿತ್ತು. ಮಂಕನಂತೆ ಓದು ಬರಹವನ್ನು ಬಿಟ್ಟು ಯಾರ ಜತೆಯೂ ಬೆರೆಯದೇ ತನ್ನ ಪಾಡಿಗೆ ತಾನು ಇರಲಾರಂಭಿಸಿದ. ಇದನ್ನು ಮೊದಲು ಗಮನಿಸಿದವನು ಪ್ರಕಾಶ.

"ಏನೋ ಯಾಕೆ ಹೀಗಾಗಿದೀಯ..... ಹುಶಾರಿಲ್ವಾ?" ಅಂತ ಕೇಳಿದ್ದ.

"ಏನಿಲ್ಲ, ಸರಿಯಾಗಿದೀನಿ" ಅಂತ ಹೇಳಿದ್ದ.

"ಇಲ್ಲ, ನೀನು ಸರಿಯಾಗಿಲ್ಲ ಅಂತ ನಿನ್ನ ಮುಖವೇ ಹೇಳ್ತಿದೆ. ಕಾಲೇಜಿನಲ್ಲಿ ಏನಾದ್ರೂ ನಡೀತಾ?" ಕೇಳಿದ.

"ಇಲ್ಲ ಅಂದ್ನಲ್ಲ. ಮತ್ತೇನು ಪದೇ ಪದೇ ಕೇಳ್ತೀಯ?" ಇವನು ರೇಗಿದಾಗ ಅವನು ಸುಮ್ಮನಾಗಿದ್ದ. ಆದರೆ ಅದೇ ವಿಷಯವನ್ನು ರಮಳೊಡನೆ ಹೇಳಿದ್ದ.

"ನೋಡು ಅವನು ಹೇಗಾಗಿದಾನೆ.... ಏನಾಯ್ತೋ ಅಂತ ಕೇಳಿದ್ರೆ ಹೇಳೊಲ್ಲ, ರೇಗ್ತಾನೆ. ಈಗ ನಾನೂ ಊರಿನಲಿಲ್ಲ. ಇವನೂ ಹೀಗಿದ್ರೆ ಅಮ್ಮ ಅಪ್ಪಂಗೆ ಏನನ್ನಿಸುತ್ತೆ ನೀನೇ ಹೇಳು"

"ಕಾಲೇಜಿನಲ್ಲಿ ಏನೋ ನಡೆದಿರಬಹುದು. ನಾನು ಕೇಳ್ತೀನಿ ಬಿಡು" ಎಂದು ನುಡಿದಿದ್ದಳು. ಒಂದು ದಿನ ಸಮಯ ಸಾಧಿಸಿ, ಅವನೊಬ್ಬನೇ ಇದ್ದಾಗ ಅವನೊಡನೆ ಮಾತನಾಡಿದ್ದಳು.

"ಯಾಕೋ ಶ್ರೀಕಾಂತ, ಈ ನಡುವೆ ತುಂಬಾ ಮಂಕಾಗಿಬಿಟ್ಟಿದೀಯಲ್ಲ. ಯಾರ ಹತ್ತಿರನಾದ್ರೂ ಜಗಳ ಆಯ್ತಾ?"

"ಇಲ್ಲ" ಎಂದ ತಲೆಯಾಡಿಸಿ.

"ಮತ್ತೇನಾಯ್ತು? ಈ ನಡುವೆ ನೀನು ಕಾಲೇಜಿಗೂ ಸರಿಯಾಗಿ ಹೋಗ್ತಾ ಇಲ್ಲವಂತೆ?"

"ಹಾಗಂತ ನಿನಗ್ಯಾರು ಹೇಳಿದರು"

"ಯಾರಾದ್ರೂ ಹೇಳಿರಲಿ, ಸುಳ್ಳೋ ನಿಜವೋ ಹೇಳು....."

"ಅದನ್ನು ತಿಳಿದುಕೊಂಡು ನಿನಗೇನಾಗಬೇಕು ಹೇಳು"

"ಯಾಕೆ? ನಿನಗೆ ನಾನ್ಯಾರೂ ಅಲ್ವಾ?"

"ಮನೆಯವರೇ ಯಾರೂ ವಿಚಾರಿಸಿಲ್ಲ. ನಿನಗೇಕೆ ಕುತೂಹಲ?"

"ಕುತೂಹಲ ಅಲ್ಲ ಶ್ರೀಕಾಂತ, ನಾನು ನಿನ್ನ ಒಳ್ಳೆಯದನ್ನು ಬಯಸುವವಳು. ನಾನು ನಿನ್ನ ಸ್ನೇಹಿತೆ....." ಎನ್ನುತ್ತಾ ಅವಳು ಅವನ ಭುಜದ ಮೇಲೆ ಕೈ ಇಟ್ಟಳು. ಅವನಿಗೆ ಹಿತವೆನಿಸಿತು. ತಾನು ರೂಪಳೊಡನೆ ಮಾತನಾಡಿದುದನ್ನು, ಅವಳು ಗರ್ವದಿಂದ ತನ್ನನ್ನು ತಿರಸ್ಕರಿಸಿ ತನಗೆ ಅವಮಾನ ಮಾಡಿದುದನ್ನು ತಿಳಿಸಿ,

"ನೀನೇ ಹೇಳು ರಮಾ, ಅವಳು ಮಾಡಿದ್ದು ಸರೀನಾ? ನನಗೆ ಒಂದು ಬೆಲೆ ಬೇಡವಾ? ನನಗೆ ಎಷ್ಟು ಹಿಂಸೆಯಾಗ್ತಿದೆ ಗೊತ್ತಾ?" ಎಂದ.

ಒಂದು ಗಳಿಗೆ ಸುಮ್ಮನಿದ್ದು ರಮಾ ನುಡಿದಳು.

"ನೀನು ಅವಳು ಮನೆಗೆ ಹೋಗಬಾರದಾಗಿತ್ತು. ನೀನೇಕೆ ಹೋದೆ?"

"ಅಜ್ಜೀನೇ ಕಳಿಸಿದ್ದು......"

"ಅಜ್ಜಿಗೆ ಈ ವಿಷಯ ಗೊತ್ತಾ!"

"ಇಲ್ಲ, ನಾನು ಯಾರಿಗೂ ಹೇಳಲಿಲ್ಲ. ನಾನೇ ಅನುಭವಿಸ್ತಾ ಇದೀನಿ. ಅಜ್ಜಿಗೆ ಗೊತ್ತಾದ್ರೆ ಮತ್ತೊಂದು ರಂಪವಾಗುತ್ತೆ?"

"ಬಿಡು. ಯಾರಿಗೂ ಹೇಳಬೇಡ" ಹೇಗೂ ಅವಳ ಮದುವೆ ಗೊತ್ತಾಗಿದೆ. ಕ್ರಮೇಣ ಎಲ್ಲಾ ಮರೆತು ಹೋಗುತ್ತೆ. ಇನ್ನು ನಾಲ್ಕಾರು ವರ್ಷಗಳ ನಂತರ ನೀನೂ ಮದುವೆಯಾಗ್ತೀಯ. ಆಗ ಎಲ್ಲಾ ಸರಿಹೋಗುತ್ತೆ.

"ಅವಳು ನನ್ನನ್ನು ಮದುವೆಯಾಗುತ್ತಿಲ್ಲ ಅನ್ನೋ ಚಿಂತೆ ನನಗಿಲ್ಲ. ಅಜ್ಜಿಯ ಮಾತಿಗೆ ಗೌರವ ಬೆಲೆ ಇಲ್ಲದ ಹಾಗಾಯ್ತು. ಅದಕ್ಕೇ ನಾನೂ ಕಾರಣನಾದೆನಲ್ಲ. ನನಗೆ ಅದೇ ವ್ಯಥೆ. "

"ನೀನು ಹೇಗೆ ಕಾರಣವಾಗ್ತೀಯ.... ನಿನ್ನದೇನು ತಪ್ಪಿದೆ? ನೀನು ಅವಳಿಗೆ ಬುದ್ಧಿ ಕಲಿಸಬೇಕೂಂತ ಇದ್ದರೆ, ಅವಳಿಗಿಂತ ಒಳ್ಳೆಯ ಹುಡುಗಿಯನ್ನು ಪ್ರೀತಿಸು, ಮದುವೆಯಾಗು. ನೀನು ಖಂಡಿತಾ ಸುಖವಾಗಿರುತ್ತೀಯ....." ಅವಳು ಮುಗುಳ್ನಗುತ್ತಾ ಅವನನ್ನೇ ನೋಡಿದಾಗ, ಅವನೂ ಅವಳನ್ನೇ ದಿಟ್ಟಿಸಿ ನೋಡಿದ. ಏನೋ ಒಂದು ವಿಚಿತ್ರವಾದ ಅನುಭವ ಅವನನ್ನು ಆವರಿಸಿತು.

"ಥ್ಯಾಂಕ್ ಯೂ ರಮಾ" ಎನ್ನುತ್ತಾ ಅವಳ ಕೈ ಹಿಡಿದ.

"ಇಷ್ಟಕ್ಕೆಲ್ಲ ಯಾರು ತಲೆ ಕೆಡಿಸಿಕೊಳ್ತಾರೆ ಶ್ರೀಕಾಂತ.... ನೀನಲ್ಲದಿದ್ದರೆ ಇನ್ನೊಬ್ಬಳು. ನಿನ್ನನ್ನು ಮೀರಿಸಿದವಳು ಸಿಗ್ತಾಳೆ ಅನ್ನೋತರಹ ಮಾತಾಡಿದ್ರೆ ಅವಳ ಜಂಭ ಅಡಗುತ್ತಿತ್ತು. ಅಜ್ಜಿಗೇನು ತಿಳಿಯುತ್ತೆ? ಅವರ ಕಾಲದಲ್ಲಿ ಇದ್ದ ಹಾಗೇ ಎಲ್ಲಾ ನಡೆಯೋಕೆ ಸಾಧ್ಯಾನಾ? ಈಗ ಎಲ್ಲಾ ತಿಳಿದು ನಿಮ್ಮ ಅಪ್ಪ ಸುಮ್ಮನಿಲ್ಲವೇ? ಹಾಗೇ ನೀನೂ ನನಗೇನೂ ತೊಂದರೆ ಇಲ್ಲವೆನ್ನುವಂತೆ ವರ್ತಿಸಬೇಕು. ಅದು ಬಿಟ್ಟು ಅವಳಿಗಾಗಿ, ಅವಳು ಅಂದುದನ್ನೇ ಗಂಭೀರವಾಗಿ ತಗೊಂಡು, ನಿನ್ನ ಜೀವನವನ್ನು ಹಾಳು ಮಾಡಿಕೊಂಡರೆ ಏನು ಸಾರ್ಥಕ ಹೇಳು?"

"ಹೌದು ರಮಾ. ನೀನು ಹೇಳೋದು ಸರಿ. ನಾನು ಅವಳಿಗಾಗಿ ಕೊರಗುತ್ತಿಲ್ಲ. ಪ್ರೀತಿ ಗೀತಿ ಏನಿಲ್ಲ. ಏನೋ ಅವಳೇ ನನ್ನ ಹೆಂಡತಿ ಅಂತ ಎಲ್ಲರೂ ಆಡಿದ್ದನ್ನು ಒಪ್ಪಿಕೊಂಡಿದ್ದೆ ಅಂತ ಕಾಣಿಸುತ್ತೆ. ಅವಳು ಬೇರೆಯವನನ್ನು ಮದುವೆಯಾಗುತ್ತಿರುವುದರಿಂದ ಏನನ್ನೋ ಕಳೆದುಕೊಂಡ ಅನುಭವವಾಗಿತ್ತು. ಈಗ ಹಾಗೆನ್ನಿಸುತ್ತಿಲ್ಲ. ಆದರೆ ಅಜ್ಜಿಯ ಮಾತನ್ನು ಸುಳ್ಳು ಮಾಡಿದಳಲ್ಲ ಅವಳು ಅಂತ ಬೇಜಾರು."

"ನಿಮ್ಮ ಅಜ್ಜಿ ಏನು ಬ್ರಹ್ಮ ಅಲ್ಲ. ಬ್ರಹ್ಮ ನಿಮ್ಮಿಬ್ಬರಿಗೂ ಗಂಟು ಹಾಕಿಲ್ಲ ಅಷ್ಟೇ. ಅಜ್ಜಿಗೆ ನೀನೇ ಸಮಾಧಾನ ಹೇಳಬೇಕು. ಎಷ್ಟು ದಿನಾಂತ ಮುಚ್ಚಿಡೋಕೆ ಸಾಧ್ಯ?"

"ನಾನಂತೂ ಅಜ್ಜಿಗೆ ಹೇಳೋಲ್ಲ. ಯಾರಾದ್ರೂ ಹೇಳಿಕೊಳ್ಳಲಿ ನೀನೂ ಯಾರಿಗೂ ಹೇಳಬೇಡ ಪ್ಲೀಸ್......"

"ಓ.ಕೆ. ಹೇಳೋಲ್ಲ....." ಎನ್ನುತ್ತಾ ಅವಳು ಅವನ ಕೈಯ ಮೇಲೆ ತನ್ನ ಕೈಯನ್ನಿಟ್ಟುಕೊಂಡಾಗ ಅವನು ಆ ಕೈಗಳನ್ನು ತನ್ನ ಕೆನ್ನೆಗೊತ್ತಿಕೊಂಡ. ಅವನ ಕಣ್ಣಲ್ಲಿ ನೀರಾಡಿತ್ತು.

"ಏಯ್.... ಏನಿದು ಹುಡುಗೀರ ತರಹ....." ಅವನು ಕಣ್ಣೀರನ್ನು ಒರೆಸಿ ಕೊಂಡ. "ಏಕೋ ಮನಸ್ಸು ತುಂಬಾ ಭಾರವಾಗಿತ್ತು. ಈಗ ಹಗುರವಾಯ್ತು ನಿನಗೂ ರೂಪಳಿಗೂ ಎಷ್ಟು ವ್ಯತ್ತಾಸ! ಅವಳು ನನ್ನ ಕಸಿನ್. ಆದರೆ ಒಂದು ದಿನವೂ ಹೀಗೆ ವಿಶ್ವಾಸದಿಂದ ನನ್ನೊಡನೆ ಮಾತನಾಡಿರಲಿಲ್ಲ. ಏಕೆ?"

"ಏಕೆ ಅಂದರೆ? ಅವಳು ನಿನ್ನ ಕಸಿನ್. ನಿನ್ನ ಸ್ನೇಹಿತೆಯಲ್ಲ. ಸ್ನೇಹವೇ ಬೇರೆ. ಸಂಬಂಧವೇ ಬೇರೆ....."

"ಯಾಕೆ? ಸಂಬಂಧಿಗಳು ಸ್ನೇಹಿತರಂತೆ ಇರಲು ಸಾಧ್ಯ ಇಲ್ಲವಾ?"

"ಇರಲು ಪ್ರಯತ್ನಿಸಿದರೆ ಆಗಬಹುದೇನೋ..... ಆದರೆ ಸಾಮಾನ್ಯವಾಗಿ ಸಮಾನ ಮನೋಭಾವವಿರುವಲ್ಲಿ ಸ್ನೇಹ ಇರುತ್ತೆ. ಸಂಬಂಧಿಗಳಲ್ಲಿ ಅಸೂಯೆ, ಮತ್ಸರ, ಕುಟಿಲತೆ ಇವುಗಳೇ ಜಾಸ್ತಿ. ಅಲ್ಲಿ ಸ್ನೇಹಕ್ಕೆ ಅವಕಾಶ ಕಡಿಮೆ"

"ನೀನು ಎಷ್ಟೊಂದು ವಿಷಯ ತಿಳಿದುಕೊಂಡಿದೀಯಲ್ಲ ರಮಾ.... ಅದೇ ನಮ್ಮ ರಂಜಿ..... ಅದಕ್ಕೆ ಏನೂ ತಿಳೀದು"

"ಅವಳು ಮುಗ್ಧೆ. ಅವಳಿಗೂ ನನ್ನ ಹಾಗೇ ನಾಲ್ಕು ಜನ ಅಕ್ಕಂದಿರಿದ್ದಿದ್ದರೆ, ನನ್ನ ಹಾಗೇ ಎಲ್ಲಾ ಅರ್ಥ ಮಾಡಿಕೊಳ್ಳುತ್ತಿದ್ದಳು. ಈಗ ಅವಳು ಮುದ್ದಿನ ಕಿರಿಯ ಮಗಳು, ಅವಳನ್ನು ಪ್ರೀತಿಸುವ ಇಬ್ಬರು ಅಣ್ಣಂದಿರಿದ್ದಾರೆ. ಅವಳಿಗೆ ಅದೆಲ್ಲಾ ಗೊತ್ತಾಗೋಕೆ ಸಾಧ್ಯಾನೇ ಇಲ್ಲ"

"ನಿನ್ನಂತಹ ಸ್ನೇಹಿತೆ ನನಗೆ ಸಿಕ್ಕಿದ್ದು ಹೆಮ್ಮೆ ಅಂತನಿಸುತ್ತೆ." ಮತ್ತೆ ಅವಳ ಕೈಯನ್ನು ವಿಶ್ವಾಸದಿಂದ ಒತ್ತಿದ.

"ಸಾಕು ಹೊಗಳಿದ್ದು. ಇನ್ನು ಸ್ವಲ್ಪ ಮಿಕ್ಕಿರಲಿ. ಇವತ್ತೇ ಎಲ್ಲಾ ಮುಗಿಸಬೇಡ. ಎಷ್ಟು ಹೊತ್ತಾಯ್ತು. ನಾನು ಬರಲಾ? ಇನ್ನೂ ಯಾರೂ ಬರಲಿಲ್ಲವಲ್ಲ ಎಲ್ಲಿಗೆ ಹೋಗಿದಾರೆ?"

"ಯಾವುದೋ ಮದುವೆ ರಿಸೆಪ್ಶನ್‌ಗೆ ಹೋಗಿದ್ದಾರೆ. ಬರೋದು ತಡವಾಗುತ್ತೆ ಅಂತ ಹೇಳಿದ್ದರು"

"ನೀನೇಕೆ ಹೋಗಲಿಲ್ಲ? ಊಟಕ್ಕೇನು ಮಾಡ್ತೀಯಾ? ನಮ್ಮ ಮನೆಗೆ ಬಾ. ಅಮ್ಮ ಬಿಸಿ ಅಡಿಗೆ ಮಾಡಿರುತ್ತಾಳೆ"

"ನನಗೆ ಹಸಿವೇ ಇಲ್ಲ. ಬೆಳಿಗ್ಗೆ ಮಾಡಿದ್ದು ಇರಬಹುದು. ಅದನ್ನೇ ಬಿಸಿಮಾಡಿಕೊಂಡು ತಿನ್ನುತ್ತೀನಿ. ನೀನೀಗ ಹೋಗು. ನಿಮ್ಮ ತಾಯಿ ಕಾಯುತ್ತಿರಬಹುದು" ಎನ್ನುತ್ತಾ ಅವಳನ್ನು ಕಳಿಸಿದ. ಅವಳು ಕಾಣುವವರೆಗೂ ಹೊರಗೇ ನಿಂತಿದ್ದು ನಂತರ ಒಳಗೆ ಬಂದು ಬಾಗಿಲನ್ನು ಹಾಕಿಕೊಂಡು, ಅಡಿಗೆ ಮನೆ ಕಡೆ ನಡೆದ. ರಮಾ ಆಡಿದುದನ್ನೇ ಮೆಲಕು ಹಾಕುತ್ತಾ ತಟ್ಟೆಗೆ ಅನ್ನ ಸಾರು ಪಲ್ಯವನ್ನು ಬಡಿಸಿಕೊಂಡು ಊಟಕ್ಕೆ ಕೂತ.

ಊಟ ಮಾಡಿ ಮಲಗಿದವನಿಗೆ ನಿದ್ದೆ ಹತ್ತಿದಂತಾಗಿತ್ತು. ಕಾಲಿಂಗ್ ಬೆಲ್ ಸದ್ದು ಕೇಳಿ ಎಚ್ಚರವಾಯಿತು. ಬಾಗಿಲು ತೆಗೆದ. ಯಾರನ್ನೂ ಇವನೂ ಏನೂ ಕೇಳಲಿಲ್ಲ. ಅವರೂ ಏನೂ ಹೇಳಲಿಲ್ಲ. ಮತ್ತೆ ಬಂದು ಮಲಗಿದ. ಸೊಗಸಾದ ನಿದ್ದೆ ಬಂದಿತು. ಆದರೆ ಮಾರನೇ ದಿನ ತಾಯಿ ಹೇಳಿದ ಮಾತು ಅವನನ್ನು ಆತಂಕಗೀಡು ಮಾಡಿತ್ತು.

"ಕೇಳಿದ್ಯಾ ಶ್ರೀಕಾಂತ? ರೂಪ ಯಾವನನ್ನೋ ಪ್ರೀತಿಸಿ ಮದುವೆ ಯಾದಳಂತೆ. ನಮಗೆ ತಿಳಿಸಲೇ ಇಲ್ಲ ಆ ಕಿರಾತಕ. ಸಧ್ಯ ಒಳ್ಳೇದೇ ಆಯ್ತು ಬಿಡು. ಹುಡುಗಿಯರಿಗೆ ಒಳ್ಳೆ ಗುಣವಿರಬೇಕು. ಮುಂಚೇನೇ ತಿಳೀತಲ್ಲ. ನಮ್ಮ ರಂಜೀಗೆ ಆದಷ್ಟು ಬೇಗ ಒಬ್ಬ ಹುಡುಗನ್ನ ಹುಡುಕಿ ಮದುವೆ ಮಾಡಿ ಕಳಿಸಬೇಕು.... ಕಾಲೇಜಿಗೆ ಹೋಗ್ತಾಳೆ ಭಯವಾಗುತ್ತೆ."

"ಕಾಲೇಜಿಗೆ ಹೋಗೋರೆಲ್ಲ ಅವಳ ಹಾಗೇ ಇರೊಲ್ಲ. ನಮ್ಮ ರಂಜಿ ಅಂತಹವಳಲ್ಲ" ದೃಢವಾಗಿ ನುಡಿದ.

"ನಮ್ಮ ಹುಡುಗಿ, ನಮಗೆ ನಂಬಿಕೆ. ಏನಾದರೂ ಅಪವಾದ ಬರುವ ಮೊದಲು ನಮ್ಮ ಜವಾಬ್ದಾರಿ ಜವಾಬ್ದಾರಿ ಕಳಕೋಬೇಕು. ನಾವು ಹಣವಂತರೇ ಎಲ್ಲಾ ಮುಚ್ಚಿ ಹೋಗೋಕೆ.....?"

"ಮೊದಲು ಅವಳ ಓದು ಮುಗೀಲಿ. ಓದು ಮುಖ್ಯ. ಆಮೇಲೆ ಮದುವೆ ಇದ್ದದ್ದೇ....."

"ನಿನಗೇನೂ ತಿಳಿಯೊಲ್ಲ ಬಿಡು. ಹೆಚ್ಚಗೆ ಓದಿದಷ್ಟೂ ಅವಳ ಓದಿಗೆ ತಕ್ಕಂತಹವನನ್ನು ಹುಡುಕಬೇಕಾಗುತ್ತೆ. ಯಾವುದಾದ್ರೂ ಅವಳಿಗೆ ಸರಿಯಾದ ವರನನ್ನು ಹುಡುಕಿಕೊಡಿ ಅಂತ ನಾನು ಶಾಸ್ತ್ರಿಗಳಿಗೆ ತಿಳಿಸಿಯಾಯ್ತು. ಅವರು ಹುಂ. ಆಗಲಿ ಅಂದಿದಾರೆ."

"ಅಮ್ಮಾ..... ನಿನಗೇಕೆ ತಿಳುವಳಿಕೆ ಸಾಲದು. ಅವಳಿನ್ನು ಚಿಕ್ಕವಳು. ಅವಳಿಗೀಗಲೇ ಸಂಸಾರದ ಜವಾಬ್ದಾರಿ ಬೇಡ. ರಮಾ ಅವಳಿಗಿಂತ

ದೊಡ್ಡವಳು.... ಅವಳ ತಾಯಿ ನಿನ್ನ ಹಾಗೆ ಆಡೋಲ್ಲ"

"ರಮಾ ನಮ್ಮ ಮನೆ ಹುಡುಗಿ ಅಲ್ಲ. ಅದು ಅವರ ಮನೆ ವಿಚಾರ. ಅಲ್ಲದೇ ರಮನ ತಾಯಿ ಅವಳ ಅಕ್ಕಂದಿರ ಮದುವೆ ಮಾಡಿದ ಸಾಲವೇ ಇನ್ನು ತೀರಿಲ್ಲವೇನೋ..... ಅದಕ್ಕೆ ಹಾಯಾಗಿದಾರೆ. ಹಾಗಂತ...... ರಮಂಗೂ ರಂಜಿನಿಯ ಮದುವೆಗೂ ಏನು ಸಂಬಂಧ?"

"ಹಾಗಲ್ಲಮ್ಮ. ರಮಾ ಎಷ್ಟು ವಿಷಯ ತಿಳಿದುಕೊಂಡಿದ್ದಾಳೆ.... ಅವಳೇ ಹೇಳಿದಳು ರಂಜಿನಿ ಮುಗ್ಧೆ ಅಂತ"

"ಆ ವಿಷಯವೆಲ್ಲಾ ಅವಳಿಗೇಕೆ? ಏನೇನೋ ಮಾತನ್ನೆಲ್ಲ ನಿಮ್ಮಗಳ ಎದುರಿಗೆ ಏಕೆ ಆಡ್ತಾಳೆ? ನಾಚಿಕೆ ಬೇಡವಾ ಹೆಣ್ಣು ಹುಡುಗಿಗೆ. ನನಗೆ ಆ ಹುಡುಗಿಯ ನಡತೆ ಸರಿ ಬರುವುದಿಲ್ಲ"

"ಯಾರದೋ ಮೇಲಿನ ಕೋಪವನ್ನು ಅವಳ ಮೇಲೆ ಏಕೆ ತೀರಿಸಿಕೊಳ್ತೀಯ..... ರಮಾ ಒಳ್ಳೇ ಹುಡುಗಿ, ಅವಳನ್ನು ಏನೇನೋ ಅನ್ನಬೇಡ"

"ಚೆನ್ನಾಗಿದೆ. ಅವಳ ಪರವಹಿಸಿಕೊಂಡು ನನ್ನನ್ನು ವಿರೋಧಿಸಿ ಮಾತಾಡ್ತೀಯಾ. ಇನ್ನು ಮೇಲೆ ನಮ್ಮ ಮನೆಗೆ ಬರಬೇಡ ಅಂತ ನಾನೇ ಅವಳಿಗೆ ಹೇಳಿಬಿಡ್ತೀನಿ"

"ಹುಂ ಹೇಳು. ಆಮೇಲೆ ರಂಜನಿಯೇ ದಿನಾ ಅವರ ಮನೆಗೆ ಹೋಗ್ತಾಳೆ. ಆಗೇನು ಮಾಡ್ತೀಯ?"

"ಕಾಲು ಮುರಿದು ಕೈಗೆ ಕೊಡ್ತೀನಿ" ಪಾರ್ವತಿ ಯಾವುದೋ ಆಕ್ರೋಶದಿಂದ ಈ ಮಾತುಗಳನ್ನಾಡಿದ್ದರೂ, ಆ ಮಾತು ಹಾಗೇ ಆಯಿತು.

ಕಾಲೇಜಿಗೆ ನಡೆದುಹೋಗುತ್ತಿದ್ದ ರಂಜಿನಿಯ ಹಿಂದೆ ಬರುತ್ತಿದ್ದ ಸೈಕಲ್ ಸವಾರನೊಬ್ಬ ಅವಳಿಗೆ ಡಿಕ್ಕಿ ಹೊಡೆದು ಬೀಳಿಸಿದ್ದ. ಪಕ್ಕದ ಮೋರಿಗೆ ಬಿದ್ದಿದ್ದ ರಂಜನಿಯ ಬಲಗಾಲು ಕಲ್ಲಿಗೆ ಅಪ್ಪಳಿಸಿತ್ತು. ಕಾಲಿನ ಮೂಳೆ ಮುರಿದಿತ್ತು. ಸ್ನೇಹಿತರ ನೆರವಿನಿಂದ ರಂಜಿನಿ ಆಸ್ಪತ್ರೆಗೆ ಹೋಗಿ ಕಾಲಿಗೆ ಪ್ಲಾಸ್ಟರ್ ಕಟ್ಟಿಸಿಕೊಂಡು ಮನೆಗೆ ಬಂದಿದ್ದಳು. ತಾಯಿ ಪೆಚ್ಚಾಗಿದ್ದಳು.

"ನೋಡಿದ್ಯಾ. ನೆನ್ನೆ ದಿನ ನೀನು ಏನೇನೋ ಆಡಿದೆ.... ರಂಜಿನಿ ಕಾಲಿಗೆ ಪಟ್ಟಿ ಕಟ್ಟಿಸಿಕೊಂಡು ಅಲ್ಲಾಡದೇ ಮಲಗಿರುವಂತಾಯಿತಲ್ಲ."

"ನನಗೇನು ಗೊತ್ತಿತ್ತೋ ಹೀಗೆಲ್ಲಾ ಆಗುತ್ತೆ ಅಂತ. ನಾನು ಅವಳ ಮನೆಗೆ ರಂಜಿ ಹೋಗೋದು ಇಷ್ಟವಿಲ್ಲ ಅಂತ ಅಂದಿದ್ದೆ ಅಷ್ಟೆ....."

"ಈಗ ಒಬ್ಬಳೇ ಮನೇಲಿ ಮಲಗಿರಬೇಕಲ್ಲ. ಅವಳಿಗೆ ಬೇಜಾರಾಗೊಲ್ವಾ...... ಈಗೇನು ಹೇಳ್ತೀಯಾ?"

"ಏನೂ ಬೇಜಾರಾಗೊಲ್ಲ, ನಾವೆಲ್ಲಾ ಇಲ್ವಾ! ಅವಳಿಗೆ ಒಂದಿಷ್ಟು ಪುಸ್ತಕಗಳನ್ನು ತಂದುಕೊಂಡು"

"ಹೋಗಮ್ಮಾ ಹೋಗು. ನನಗೇನು ಬೇರೆ ಕೆಲಸವಿಲ್ವಾ! ಅಪ್ಪನಿಗೆ ಬಿಡುವಿಲ್ಲ. ನಾನು ಮಾರ್ಕೆಟ್ಟಿಗೆ ಹೋಗಬೇಕು. ಏನೇನು ಅಂತ ಮಾಡಲಿ? ನನಗೆ ಓದೋಕೆ ಸಮಯ ಸಿಗುತ್ತಿಲ್ಲ"

"ಸರಿ, ಯಾರೂ ಏನೂ ಮಾಡಬೇಡಿ. ಎಲ್ಲಾ ನಾನು ಮಾಡ್ತೀನಿ" ಎಂದು ತಾಯಿ ಅಲವತ್ತುಕೊಂಡರೂ, ಎರಡು ದಿನ ಕಳೆಯುವಷ್ಟರಲ್ಲಿ ಸಾಕಾಯಿತು. ವಿಷಯ ತಿಳಿದ ರಮಾ ಓಡಿ ಬಂದಿದ್ದಳು. ಪಾರ್ವತಿ ಅವಳನ್ನು ನೋಡಿ ಹುಬ್ಬು ಗಂಟಿಕ್ಕಿದರೂ, ರಂಜನಿ ಖುಷಿಯಿಂದ ಕಣ್ಣರಳಿಸಿದ್ದಳು.

" ಸಧ್ಯ ಬಂದ್ಯಾ! ನನಗಂತೂ ತುಂಬಾ ಬೋರ್ ಆಗುತ್ತಿತ್ತು"

"ಯಾಕೆ ಏನಾಯ್ತೆ! ನಾನು ನಮ್ಮ ಅಕ್ಕನ ಮನೆಗೆ ಹೊರಟುಹೋಗಿದ್ದೆ. ನನಗೆ ವಿಷಯ ತಿಳಿದದ್ದೇ ಈಗ. ಅದೂ ಶ್ರೀಕಾಂತ ಬಂದು ಹೇಳಿದ ಮೇಲೆ"

"ಅವನು ಬಂದು ಹೇಳಿದ್ನಾ?"

"ಹುಂ. ಅವಳಿಗೆ ಒಬ್ಬಳಿಗೇ ಬೇಜಾರಾಗ್ತಿದ್ಲೆ. ಯಾಕೆ ಬರಲೇ ಇಲ್ಲ ಅಂತ ಕೇಳಿದ!"

"ಹೌದಾ? ಒಳ್ಳೇದು ಮಾಡಿದ ಬಿಡು" ಎನ್ನುತ್ತಾ ನಡೆದದ್ದನ್ನೆಲ್ಲಾ ತಿಳಿಸಿದಳು. ಆದರೆ ಪಾರ್ವತಿಯ ಅಸಹನೆ ಮಾತ್ರ ಕಡಿಮೆಯಾಗಲಿಲ್ಲ. ಮಗಳ ಕಾಲಿಗೆ ಪೆಟ್ಟಾದದ್ದೇ ರಮಳಿಂದ ಎನ್ನುವಂತೆ ಸಿಡುಕುತ್ತಿದ್ದಳು. ಇದೆಲ್ಲ ರಮಳಿಗೆ ಅರ್ಥವಾಗದೇ ಏನಿರಲಿಲ್ಲ. ಆದರೆ ಪ್ರಕಾಶನಿಗಾಗಿ ಎಲ್ಲವನ್ನು ಸಹಿಸಿಕೊಂಡಿದ್ದಳು. ಅವನು ಆಗಾಗ್ಗೆ ಬರೆಯುತ್ತಿದ್ದ ಕಾಗದದಲ್ಲಿ, ಮನೆಗೆ ಆಗಾಗ್ಗೆ ಹೋಗುತ್ತಿರು. ಅಲ್ಲಿ ನಿನ್ನ ಸ್ನೇಹದ ಅವಶ್ಯಕತೆ ಎಲ್ಲರಿಗೂ ಇದೆ ಎಂದು ತಿಳಿಸುತ್ತಿದ್ದ. ರಮಾ ಎಲ್ಲರೊಡನೆಯೂ ನಗುನಗುತ್ತಾ ಮಾತನಾಡುತ್ತಿದ್ದಳು.

ಶ್ರೀಕಾಂತ, ಅವಳು ತನಗಾಗಿ ಬರುತ್ತಾಳೆಂದು ಭಾವಿಸುತ್ತಿದ್ದ. ಒಳಗೊಳಗೇ ಅವನಿಗೇ ಅರಿಯದಂತೆ ಅವನು ಅವಳನ್ನು ಮೆಚ್ಚಿದ್ದ.

ನೋಡಲು ಲಕ್ಷಣವಾಗಿದ್ದಳು. ಹಸನ್ಮುಖಿ. ಒಳ್ಳೆಯ ಸ್ನೇಹಿತೆ. ಇನ್ನೇನು

ಬೇಕು, ಆದರೆ ತನ್ನ ಪ್ರೀತಿಯನ್ನು ಪ್ರಕಟಗೊಳಿಸದೇ ತನ್ನಲ್ಲೇ ಬಚ್ಚಿಟ್ಟುಕೊಂಡಿದ್ದ.

ಸಮಯ ಸರಿದು, ದಿನಗಳು ಉರುಳಿದವು. ರಂಜನಿಯ ಮದುವೆಯಾ ಪ್ರಯತ್ನಗಳು ಮುಂದುವರೆದಿದ್ದವು. ಪ್ರಕಾಶ ತನ್ನ ಇಂಜನಿಯರಿಂಗ್ ಕೋರ್ಸ್‌ ಪರೀಕ್ಷೆಗಳನ್ನು ಮುಗಿಸಿ, ಊರಿಗೆ ವಾಪಸ್ಸಾಗಿದ್ದ. ಕೆಲಸಕ್ಕೆ ಸೇರುವ ಹವಣಿಕೆಯಲ್ಲಿದ್ದ. ಅವನು ಬಂದಮೇಲೆ ರಮಳ ಮುಖದ ಗೆಲುವು ಹೆಚ್ಚಿತ್ತು.

ಕನ್ಯಾಪಿತೃಗಳು ಇವರ ಮನೆಯನ್ನು ಹುಡುಕಿಕೊಂಡು ಬರಲಾರಂಭಿಸಿದ್ದರು.

"ಮೊದಲು ನನ್ನ ಮಗಳಿಗೆ ಮದುವೆ ಆಗಬೇಕು. ನಮ್ಮ ಮಗ ಇನ್ನೂ ಚಿಕ್ಕವನು. ಅಲ್ಲದೇ ಕೆಲಸ ಸರಿಯಾದ ಕಡೇ ಸಿಗಬೇಕು. ಅಲ್ಲಿಯವರೆಗೆ ಮದುವೆ ಆಲೋಚನೆ ಇಲ್ಲ" ಎಂದು ಹೇಳಿ ಕಳಿಸುತ್ತಿದ್ದರು. ಪ್ರಕಾಶ ತಮಾಷೆಯಿಂದ ಇದನ್ನೆಲ್ಲ ರಮಳಿಗೆ ತಿಳಿಸುತ್ತಿದ್ದ.

ರಂಜನಿ ಪಿ.ಯು.ಸಿ. ಪರೀಕ್ಷೆಯಲ್ಲಿ ಮತ್ತೆ ಮತ್ತೆ ಫೇಲಾದಾಗ ಅವಳು ಓದನ್ನು ಬಿಟ್ಟಳು. ಮನೆ ಕೆಲಸದಲ್ಲಿ ತಾಯಿಗೆ ಸಹಾಯಕಳಾದಳು. ಪ್ರಕಾಶನಿಗೆ ಒಂದು ಕಡೆ ಟೆಂಪರರಿ ಕೆಲಸ ಸಿಕ್ಕಿತ್ತು. ಶ್ರೀಕಾಂತನ ಕಡೇ ವರ್ಷದ ತರಗತಿಗಳು ಇನ್ನೂ ಪ್ರಾರಂಭವಾಗಿರಲಿಲ್ಲ.

ತಾಯಿ ಪಾರ್ವತಿ ಸತತ ಪ್ರಯತ್ನದಿಂದ ಅಲ್ಲಿ ಇಲ್ಲಿ ವಿಚಾರಿಸಿ, ರಂಜನಿಗೆ ತಕ್ಕನಾದ ವರನನ್ನು ಹುಡುಕುವುದರಲ್ಲಿ ಸಫಲಳಾದಳು. ಹುಡುಗನ ತಂದೆ ಮನೆಯವರು ವ್ಯಾಪಾರಸ್ಥರು. ಅವರದ್ದೇ ಅನೇಕ ಸ್ವಂತ ಅಂಗಡಿಗಳಿದ್ದವು. ತಕ್ಕಷ್ಟು ಹಣವಂತರೂ ಸಹ. ಆದರೆ ವಿದ್ಯೆಯಲ್ಲಿ ಹೆಚ್ಚಿನ ಆಸಕ್ತಿ ಇಲ್ಲದ ಮಗ ತಾನೂ ವ್ಯಾಪಾರಗಳಲ್ಲಿ ಸಮಭಾಗಿಯಾದ. ಈಗ ಅದೇ ಅವನ ಉದ್ಯೋಗ. ರಂಜನಿ ತಾಯಿಯ ಮನಸ್ಸನ್ನು ನೋಯಿಸಲಿಚ್ಛಿಸದೇ ವರನನ್ನು ಒಪ್ಪಿಕೊಂಡಳು.

ಶ್ರೀಕಾಂತ ತಂಗಿಯನ್ನು ತಮಾಷೆ ಮಾಡಿದ್ದ. "ನಿನಗೇನೇ ಆತುರವಿತ್ತು ಮದುವೆಗೆ? ಅತ್ತೆ ಮನೇಲಿ ನಿನ್ನನ್ನ ಹರಿದು ಮುಕ್ಕಿ ತಿಂತಾರೆ. ಆಮೇಲೆ ಎಂದಾದರೂ ನೀನು ನಮ್ಮ ಮನೆಗೆ ಬಂದರೆ, ನಮಗ್ಯಾರಿಗೂ ನಿನ್ನ ಗುರುತೇ ಸಿಗುವುದಿಲ್ಲ ಅಷ್ಟೇ"

"ಹೇಗೋ..... ನಾನೇನು ಆಸೆಪಟ್ಟು ಮದುವೆ ಆಗ್ತಿಲ್ಲ. ಅಮ್ಮ ಬಲವಂತ ಮಾಡಿದಳಲ್ಲ. ಅದಕ್ಕೆ....." ನಾಚಿ ನುಡಿದಳು.

"ಪೆದ್ದೀ..... ಅಮ್ಮನ ಬಲವಂತಕ್ಕೆ ಯಾರಾದ್ರೂ ಮದುವೆಯಾಗ್ತಾರಾ? ನಾನು ಅಮ್ಮಂಗೆ ಹೇಳ್ತೀನಿ. ಈ ಹುಡುಗ ನನಗೆ ಒಪ್ಪಿಗೆ ಇಲ್ಲ ಅಂತ

ಹೇಳಿಬಿಡು”

“ಇಲ್ಲಪ್ಪಾ..... ನಾನು ಹೇಳೊಲ್ಲ”

“ಹಾಗಾದ್ರೇ ನಿನಗೂ ಇಷ್ಟ ಅಂತ ಅನ್ನು. ಅಮ್ಮನ ತಲೆ ಮೇಲೆ ಏಕೆ ಹಾಕ್ತೀಯ....... ನಿನಗೆ ಇಲ್ಲಿ ಏನು ಕಷ್ಟ?”

“ಕಷ್ಟ ಅಂತ ಮದುವೆ ಆಗ್ತಿಲ್ಲ. ನೀನು ಸುಮ್ಮನೇ ರೇಗಿಸಬೇಡ. ಪ್ಲೀಸ್ ಹೋಗು”

ಅವರಿಬ್ಬರ ಹುಸಿ ಜಗಳವನ್ನು ಆಲಿಸುತ್ತಾ ನಿಂತಿದ್ದ ರಮ ಮುಗುಳ್ನಕ್ಕಳು. ಶ್ರೀಕಾಂತ ಅವಳನ್ನೇ ನೋಡಿದ. ಅವಳ ಮುಖದಲ್ಲೂ ಹೊಸ ಆಸೆಗಳು ಮೂಡುತ್ತಿವೆ ಎನ್ನುವುದನ್ನು ಗಮನಿಸಿದ. ಅವಳನ್ನು ಗೇಲಿ ಮಾಡುವ ಮನಸ್ಸಾಯಿತು. ಆದರೆ ಅದಕ್ಕೆ ಇನ್ನು ಸಮಯವಿದೆ ಎಂದುಕೊಂಡು ಸುಮ್ಮನಾದ.

ರಂಜನಿಯ ಮದುವೆಯ ಸಿದ್ಧತೆಗಳು ಭರದಿಂದ ನಡೆಯುತಿದ್ದವು. ಪ್ರಕಾಶ ಹೊಸದಾಗಿ ಒಂದು ಕಡೆ ಕೆಲಸಕ್ಕೆ ಸೇರಿದ್ದ. ಆದ್ದರಿಂದ ಅವನಿಗೆ ಬಿಡುವಿಲ್ಲ. ತಂದೆಯ ಜತೆ ಜತೆಗೆ ಶ್ರೀಕಾಂತನೇ ಓಡಾಡ ಬೇಕಾಗಿತ್ತು. ರಮಳ ಬರವು ಈಗಲೂ ಪಾರ್ವತಿಗೆ ಸಹನೆಯಿಲ್ಲ. ಆದರೆ, ರಂಜನಿಗೋಸ್ಕರ ಸುಮ್ಮನಿದ್ದಳು. ಇವಳು ಮದುವೆಯಾಗಿ ಹೊರಟುಹೋದರೆ, ಅವಳೇಕೆ ಇಲ್ಲಿಗೆ ಬರ್ತಾಳೆ. ಇನ್ನು ಕೆಲವೇ ದಿನಗಳು. ನಾನು ಮುಖ ಕೆಡಿಸಿಕೊಳ್ಳುವುದೇಕೆ ಅಂದುಕೊಂಡಿದ್ದಳು. ಅವಳಿಂದಲೂ ಬೇಕೋ ಬೇಡವೋ, ಕೆಲವು ಕೆಲಸಗಳನ್ನು ಮಾಡಿಸಿಕೊಳ್ಳುತ್ತಿದ್ದಳು. ಸ್ನೇಹಿತೆಯ ಮದುವೆಗೆ ಸಡಗರದಿಂದ ಓಡಾಡುತ್ತಿದ್ದ ರಮಳ ಬಗ್ಗೆ ಯಾವ ಭಾವನೆಯೂ ಇರಲಿಲ್ಲ. ರಮಳಿಗೆ ತಂದೆ ಇಲ್ಲ. ತಾಯಿ ಕೆಲಸದಲ್ಲಿದ್ದುಕೊಂಡು ಮಕ್ಕಳನ್ನು ಸಾಕಿ ಬೆಳೆಸಿ ಮುಂದಕ್ಕೆ ತಂದಿದಾಳೆ ಅನ್ನೋ ವಿಚಾರದಲ್ಲಿ ಯಾವ ಅನುಕಂಪವೂ ಇಲ್ಲ. ಅವಳ ಅಕ್ಕಂದಿರಿಗೆಲ್ಲಾ ಹೇಗೋ ಸುಲಭದಲ್ಲಿ ಮದುವೆಯಾಗಿದೆ. ಹಾಗೇ ಇವಳ ಮದುವೆಯೂ ನೆರವೇರಬಹುದು. ಅದು ನನಗೆ ಸಂಬಂಧಿಸಿದ ವಿಚಾರ ಅಲ್ಲವೆನ್ನುವಂತೆ ಸುಮ್ಮನಿದ್ದಳು. ಆದರೆ ಮದುವೆಗೆ ಬಂದವರಲ್ಲಿ ಕೆಲವರು ರಮಳ ಬಗ್ಗೆ ಆಸಕ್ತಿ ವಹಿಸಿದ್ದರು.

“ಯಾರು ಈ ಹುಡುಗಿ? ರಂಜನಿ ಸ್ನೇಹಿತೇನಾ? ಏನು ಓದುತ್ತಿದ್ದಾಳೆ?” ಇತ್ಯಾದಿ, ಇತ್ಯಾದಿ. ಪಾರ್ವತಿ ತೇಲಿಸಿ ಉತ್ತರ ಕೊಡುತ್ತಿದ್ದಳು. ನಮ್ಮ ರಂಜನಿಯ ಮದುವೆಗೆ ನಾವೆಷ್ಟು ಕಷ್ಟಪಟ್ಟು ವರನನ್ನು ಹುಡುಕಿದ್ದೇವೆ.

ರಮಳಂತಹ ಹುಡುಗಿಗೆ ಅವರಾಗಿಯೇ ಕೇಳುವುದೆಂದರೇ...... ಯಾಕೋ ಸಹನೆಯಾಗಿರಲಿಲ್ಲ ಅವಳಿಗೆ.

ರಂಜಿನಿ ತಾನೇ ರಮಳ ಮನೆಗೆ ಹೋಗಿ ಅವರ ತಾಯಿಯನ್ನು ತಮ್ಮನನ್ನು ಮದುವೆಗೆ ಆಹ್ವಾನಿಸಿ ಬಂದಿದ್ದಳು. ಆಕೆ ಅಭಿಮಾನದಿಂದ ರಂಜಿನಿಗೆ ಉಡುಗೊರೆಯನ್ನಿತ್ತು ಹೇಳಿದ್ದಳು.

"ಅವತ್ತು ಸ್ಕೂಲಿನಲ್ಲಿ ಇನ್‌ಸ್ಪೆಕ್ಷನ್ ಇದೆ. ನನಗೆ ಬರೊಕ್ಕಾಗೊಲ್ಲ ರಂಜಿನಿ..... ರಮಾ ಬರ್ತಾಳಲ್ಲ. ಅವಳ ತಮ್ಮನೂ ಬರ್ತಾನೆ." ನಮಸ್ಕರಿಸಿದ ರಂಜನಿಗೆ ಹೃತ್ಪೂರ್ವಕವಾಗಿ ಆಶೀರ್ವಾದ ಮಾಡಿದ್ದಳು. ಆಕೆಯ ಮನಸ್ಸಿನಲ್ಲಿ ಏನೋ ಒಂದು ಆಸೆ.

ರಂಜಿನಿಯ ಮದುವೆ ಸಾಂಗವಾಗಿ ನೆರವೇರಿತು. ಅವಳು ಗಂಡನ ಮನೆಗೆ ಹೊರಟು ಹೋಗಿದ್ದೂ ಆಗಿತ್ತು. ಮಗಳಿಲ್ಲದ ಮನೆ ಭಣ ಭಣ ಎನ್ನುವಾಗ ಪಾರ್ವತಿಗೆ ಸೊಸೆಯನ್ನು ಮನೆ ತುಂಬಿಸಿಕೊಳ್ಳು ಆಸೆ. ಜಾತಕಗಳನ್ನು ಶೇಖರಿಸಿಟ್ಟು ಕೊಳ್ಳುತ್ತಿದ್ದಳು.

"ಶ್ರೀಕಂತ, ಹೋಗೋ ಈ ಜಾತಕಗಳನ್ನು ಶಾಸ್ತ್ರಿಗಳಿಗೆ ಕೊಟ್ಟು ಪ್ರಕಾಶನ ಜಾತಕಕ್ಕೆ ಯಾವುದು ಸರಿ ಹೊಂದುತ್ತೆ ಅಂತ ಕೇಳಿಕೊಂಡು ಬಾಪ್ಪಾ"

"ನಂಗೆ ಬಿಡುವಿಲ್ಲ..... ನೀನೇ ಹೋಗು..... ಪ್ರಕಾಶನ್ನೇ ಕಳಿಸು"

"ಚೆನ್ನಾಗಿದೆ. ಪ್ರಕಾಶ ಹೋಗಿ ಕೇಳಿದರೆ ಏನು ಚೆನ್ನಾಗಿರುತ್ತೆ?"

"ಅದರಲ್ಲೇನು ತಪ್ಪು? ಅವರವರ ಮದುವೆ ಕೆಲಸ ಅವರವರೇ ಮಾಡಿ ಕೊಳ್ಳುವುದನ್ನು ಕಲಿಯಬೇಕು"

"ನಿನ್ನ ಮಾತು ಕೇಳಿದರೆ ಯಾರಾದ್ರೂ ನಗ್ತಾರೆ ಅಷ್ಟೆ. ನಿನ್ನ ಮದುವೆ ಸಮಯದಲ್ಲಿ ನೀನೇ ಎಲ್ಲಾ ಮಾಡಿಕೊಳ್ಳೋವಂತೆ. ಈಗ ಮಾಡ್ತೀಯೋ ಇಲ್ಲವೋ ಅಷ್ಟು ಹೇಳು"

"ಮಾಡ್ತೀನಿ. ಇದೊಂದು ಸಲ. ನಿನಗೋಸ್ಕರ. ಮತ್ತೆ ಮತ್ತೆ ನನ್ನನ್ನು ಪೀಡಿಸಬೇಡ" ಎನ್ನುತ್ತಾ ಜಾತಕದ ಪ್ರತಿಗಳನ್ನು ತೆಗೆದುಕೊಂಡ. ಅಬ್ಬಬ್ಬಾ ಸಾಕಾ? ಇದರ ಬದಲು ಪ್ರಕಾಶ ಲವ್ ಮ್ಯಾರೇಜ್ ಮಾಡಿಕೊಳ್ಳುವುದು ಒಳ್ಳೇಯದು. ಇದರಲ್ಲಿ ಯಾವುದೂ ಸರಿ ಹೊಂದದಿದ್ದರೇ.....

"ಅಪಶಕುನ ಆಡಬೇಡ. ಹುಡುಗಿಯರಿಗೆ ಬರವಿಲ್ಲ. ಇನ್ನೂ ಜಾತಕ ಗಳನ್ನು ತರಸ್ತೀನಿ. ಯಾವುದು ಸರಿ ಹೋಗುತ್ತೋ ಅದನ್ನೇ ನೋಡಿದ್ರಾಯ್ತು"

"ಹುಡುಗೀನ ಪ್ರಕಾಶ ಒಪ್ಪದಿದ್ದರೇ......"

"ಅದೆಲ್ಲಾ ಮುಂದಿನ ಮಾತು. ಇದಕ್ಕೆಲ್ಲಾ ನೀನ್ಯಾಕೆ ಇಷ್ಟು ಮಾತಾಡ್ತೀಯೋ ನನಗಂತೂ ಗೊತ್ತಿಲ್ಲ. ಈಗಲೇ ಹೀಗೆ..... ಇನ್ನು ನಿನ್ನ ಮದುವೆ ಮಾತು ಬಂದಾಗ ಏನೇನು ಮಾಡ್ತೀಯೋ?"

"ನಾನು ಅದಕ್ಕೆಲ್ಲ ಅವಕಾಶಾನೇ ಕೊಡೊಲ್ಲ. ನಾನು ಲವ್ ಮಾಡಿ ಮದುವೆಯಾಗೋನು"

"ಥೂ! ನಾಚಿಕೆ ಇಲ್ಲದೇ ನನ್ನ ಎದುರಿಗೇ ಹೀಗೆಲ್ಲಾ ಮಾತಾಡ್ತೀಯಲ್ಲ"

"ಅಯ್ಯೋ ನಾಚಿಕೆ ಯಾಕೆ? ಮದುವೆಯಾಗೋನು ನಾನು. ಲವ್ ಮಾಡೋನು ನಾನು. ಆದರೆ ನಿನಗೆ ತಿಳಿಸದೇ ಮದುವೆಯಾಗೋಕೆ ಆಗುತ್ತಾ?" ಎನ್ನುತ್ತಾ ತಿರುಗಿದ. ಬಾಗಿಲಲ್ಲಿ ರಮಾ ನಿಂತಿದ್ದಳು. ಇಬ್ಬರೂ ಮಾತು ನಿಲ್ಲಿಸಿದರು. ಗಲಿಬಿಲಿಗೊಂಡಿದ್ದ ಶ್ರೀಕಾಂತ, ಅವಳನ್ನು ದಾಟಿ ಮುಂದೆ ಹೊೞಗುವುದರಲ್ಲಿದ್ದ.

"ಹೇಗಿದೀರಿ ಆಂಟಿ....." ಎನ್ನುತ್ತಾ ಒಳಗೆ ಬಂದವಳು, ರಂಜನಿಯಿಂದ ಕಾಗದ ಬಂದಿತ್ತಾ ಎಂದು ವಿಚಾರಿಸಿದಳು. ಹೂಂ. ನಿನಗೂ ಒಂದು ಬರೆದಿದಾಳೆ ಎನ್ನುತ್ತಾ ತಾಯಿ ಕಾಗದವನ್ನು ತರಲು ಒಳಗೆ ಹೋದಾಗ ಶ್ರೀಕಾಂತನೊಡನೆ ಕೆಳದನಿಯಲ್ಲಿ ನುಡಿದಿದ್ದಳು.

"ನಾನು ನಿನ್ನ ಹತ್ತಿರ ಸ್ವಲ್ಪ ಮುಖ್ಯವಾದ ವಿಷಯವನ್ನು ಮಾತನಾಡಬೇಕು. ಎಲ್ಲಿಸಿಗ್ತೀಯ?"

"ಏನು ವಿಷಯ?" ಅವನು ಉದ್ವೇಗಗೊಂಡಿದ್ದ.

"ನೀನ್ಯಾಕೆ ಎಕ್ಸೈಟ್ ಆಗ್ತೀಯಾ? ಎಲ್ಲೋ ಹೊರಗೆ ಹೊರಟ ಹಾಗಿದೆ"

"ಹುಂ. ನೀನೂ ಬರೋದಾದ್ರೆ ಬಾ..... " ತಾಯಿ ಒಳಗಿನಿಂದ ಬಂದು ರಮಳ ಕೈಗೆ ಕಾಗದವನ್ನಿತ್ತಳು.

"ಆಂಟೀ, ನಾನು ಬರ್ತೀನಿ" ಎನ್ನುತ್ತಾ ರಮಾ ಮುಂದೆ ನಡೆದಳು. ಶ್ರೀಕಾಂತನೂ ಅವಳ ಹಿಂದೆ ನಡೆದ. ಪಾರ್ವತಿ ಅವರಿಬ್ಬರೂ ಒಟ್ಟಿಗೇ ಮಾತನಾಡುತ್ತಾ ಹೋದುದನ್ನೇ ನೋಡುತ್ತಾ ನಿಂತಳು.

ಪ್ರಕಾಶನ ಮದುವೆ ಆಗುತ್ತಿದ್ದ ಹಾಗೇ, ಆದಷ್ಟು ಬೇಗ ಇವನಿಗೂ ಒಂದು ಹುಡುಗಿಯನ್ನು ಗಂಟು ಹಾಕಿಬಿಡಬೇಕು. ಲವ್ವೂ ಅದೂ ಇದೂ ಅಂತ ಹೆದರಿಸ್ತಾನೆ. ಈ ಹುಡುಗಿ ನೋಡಿದರೆ ಆಗಾಗ್ಗೆ ನಮ್ಮ ಮನೆಗೆ

ಬರುತ್ತೆ. ನಾನು ಎಚ್ಚರದಿಂದಿರಬೇಕು ಎಂದು ತನ್ನಲ್ಲೇ ಹೇಳಿಕೊಂಡಳು.

ರಮಾ ಸಾಧಾರಣ ರೂಪಿನ ಹುಡುಗಿ, ತಂದೆ ಇಲ್ಲದವಳು. ನಾಲ್ಕು ಜನ ಅಕ್ಕಂದಿರ ಜತೆಯಲ್ಲಿ ಬೆಳೆದವಳು, ಅನುಕೂಲಸ್ಥರ ಮನೆಯವಳಲ್ಲ. ಅತಿ ಜಾಣೆಯಲ್ಲ, ಗುಣ ಹೇಗೋ ಗೊತ್ತಿಲ್ಲ. ಅಲ್ಲದೇ ಗುಣ ಒಂದೇ ಮುಖ್ಯವಲ್ಲ. ಜತೆಗೆ ಪ್ರೀತಿ ಗೀತಿ ಎನ್ನುವುದಕ್ಕೆ ಖಂಡಿತಾ ಪ್ರೋತ್ಸಾಹ ಕೊಡಬಾರದು ಎನ್ನುವ ಅಭಿಮತ ಪಾರ್ವತಿಯದು.

"ಶಾಸ್ತ್ರಿಗಳ ಮನೆಗೆ ಹೋಗ್ತಾ ಇದೀನಿ. ನೀನು ಬಾ. ಹಾಗೇ ಮಾತನಾಡುತ್ತಾ ಹೋಗೋಣ" ಶ್ರೀಕಾಂತ ರಮಳನ್ನು ಕರೆದ.

"ಶಾಸ್ತ್ರಿಗಳ ಮನೆಗಾ? ನಿಮ್ಮ ಮನೇಲಿ ಏನಾದ್ರೂ ಸಮಾರಂಭಾನಾ?" ಅವನ ಜತೆ ಹೆಜ್ಜೆ ಹಾಕುತ್ತಾ ಪ್ರಶ್ನಿಸಿದಳು.

"ಇಲ್ಲಮ್ಮಾ..... ಒಂದು ಹತ್ತು ಹುಡುಗಿಯರ ಜಾತಕಗಳಿವೆ. ಅದರಲ್ಲಿ ಯಾವುದೋ ಜಾತಕ ಪ್ರಶಸ್ತವಾಗಿದೆ, ಪ್ರಕಾಶನ ಜಾತಕಕ್ಕೆ ಹೊಂದುತ್ತೋ ಇಲ್ಲವೋ ಅಂತ ನೋಡಿಸಬೇಕಾಗಿದೆ"

ರಮಳ ಹೆಜ್ಜೆ ತಟಸ್ಥವಾದವು. ಆತಂಕದ ಗೆರೆಗಳು ಮುಖದಲ್ಲಿ ಮೂಡಿದವು. "ಏನಾಯ್ತು?" ಎನ್ನುತ್ತಾ ಶ್ರೀಕಾಂತನೂ ನಿಂತ.

"ನಾನು ಮನೆಗೆ ಹೋಗ್ತೀನಿ ಶ್ರೀಕಾಂತ. ಯಾಕೋ ಹೆದರಿಕೆಯಾಗ್ತಿದೆ" ಎಂದಳು, ಶ್ರೀಕಾಂತ ನಕ್ಕ.

"ಯಾಕೆ? ಹೆದರಿಕೇನಾ? ಯಾರಾದರೂ ಅಟ್ಟಿಸಿಕೊಂಡು ಬರೋ ರೀತಿ ಮಾತನಾಡ್ತಿಯಲ್ಲ. ನಾನಿಲ್ವಾ ಜತೆಗೇ....." ಏನೋ ಮಾತನಾಡಬೇಕು ಅಂತಂದೆ.

"ಹಾಗಲ್ಲ..... ಈಗ ಯಾವ ಮಾತೂ ಬೇಡ..... ಪರವಾಗಿಲ್ಲ"

"ಅಥವಾ ನನ್ನ ಜತೆಗೇ ಬರೊಕ್ಕೆ ಹೆದರಿಕೇನಾ?"

"ಹಾಗಲ್ಲ ಶ್ರೀಕಾಂತ. ಏನೂಂತ ನಂಗೇ ಗೊತ್ತಿಲ್ಲ."

"ಚೆನ್ನಾಗಿದೆ. ನೀನು ಹೇಳದಿದ್ದರೆ ನನಗೆ ಗೊತ್ತಾಗೋದು ಹೇಗೆ?"

"ನೀನು ಸಹಾಯ ಮಾಡ್ತೀನಿ ಅಂತ ಪ್ರಾಮಿಸ್ ಮಾಡಿದರೆ ನಾನು ಹೇಳ್ತೀನಿ"

"ಅದೆಂತಹಾ ವಿಷಯನಪ್ಪಾ..... ಆಗಲಿ ಪ್ರಾಮಿಸ್ ಮಾಡ್ತೀನಿ. ಮೊದಲು ಈ ಕಟ್ಟನ್ನು ಶಾಸ್ತ್ರಿಗಳಿಗೆ ಕೊಟ್ಟು ಬಂದುಬಿಡ್ತೀನಿ. ಆಮೇಲೆ ಈ ಗುಲಾಮ ನಿನಗಾಗಿ ಏನು ಮಾಡೋಕು ರೆಡಿ" ಎಂದ

ಮತ್ತೆ ಮುಗುಳ್ನಗುತ್ತಾ ರಮಾ ಅವನ ಕೈ ಹಿಡಿದಳು.

"ಪ್ಲೀಸ್ ಶ್ರೀಕಾಂತ..... ನೀನು ಈಗ ಶಾಸ್ತ್ರಿಗಳ ಮನೆಗೆ ಹೋಗಬೇಡ"

"ಯಾಕೆ? ನಿನ್ನ ಜತೆ ಎಲ್ಲಿಗಾದ್ರೂ ಬರಬೇಕಾ? ಅಲ್ಲಿ ನಾನು ತುಂಬಾ ಹೊತ್ತು ಇರೊಲ್ಲ. ತಕ್ಷಣ ಬಂದುಬಿಡ್ತೀನಿ"

"ಅದು ಹಾಗಲ್ಲ. ನೀನು ಶಾಸ್ತ್ರಿಗಳಿಗೆ ಈ ಜಾತಕಗಳನ್ನು ಕೊಡಬೇಡ.... ಅಂತ"

"ಓ...... ಯಾಕೆ? ಇದರಲ್ಲಿ ನಿನ್ನ ಜಾತಕದ ಪ್ರತಿ ಇಲ್ಲ. ನಿನಗೇಕೆ ಹೆದರಿಕೆ?" ಮತ್ತೆ ತಮಾಷೆ ಮಾಡಿದ.

"ನಂಗೊತ್ತು. ಅದಕ್ಕೇ ನಾನು ಬೇಡ ಎಂದೆ"

"ನನಗೆ ಅರ್ಥವಾಗ್ತಿಲ್ಲ. ಏಕೆ ಅಂತ ಸರಿಯಾಗಿ ಹೇಳು..... "

"ನಾನೂ ಪ್ರಕಾಶ ಮದುವೆಯಾಗಬೇಕು ಅಂತ ಅಂದುಕೊಂಡಿದೀವಿ....."
ಶ್ರೀಕಾಂತ ಬೆಪ್ಪನಂತೆ ಅವಳನ್ನೇ ನೋಡಿದ. ಕತ್ತಲಿನಲ್ಲಿ ಒಬ್ಬರ ಮುಖ ಒಬ್ಬರಿಗೆ ಸರಿಯಾಗಿ ಕಾಣುತ್ತಿರಲಿಲ್ಲ. ಅವಳಿಂದ ದೂರ ಸರಿದು ನಿಂತ.

"ಯಾಕೆ ನಿನಗೆ ನಾನು ಅತ್ತಿಗೆಯಾಗಿ ಬರುವುದು ಇಷ್ಟವಿಲ್ಲವಾ? ಸುಮ್ಮನಾಗಿ ಬಿಟ್ಟೆಯಲ್ಲಾ!" ಅವನ ಮೈ ಮುಟ್ಟಿ ಎಚ್ಚರಿಸಿದಳು.

"ಆಂ..... ಎನ್ನುತ್ತಾ ಬೆಚ್ಚಿ ಹಿಂದಕ್ಕೆ ಸರಿದ"

"ನಿನಗೇ ಇಷ್ಟು ಆಘಾತವೆನಿಸಿದರೆ, ಇನ್ನು ನಿನ್ನ ತಂದೆ ತಾಯಿಯರಿಗೆ ಹೇಗನ್ನಿಸಬಹುದು? ಅದಕ್ಕೇ ನಾನು ನಿನ್ನ ಸಹಾಯ ಕೇಳಿದ್ದು"

ಅವಳ ಯಾವ ಮಾತು ಅವನ ಕಿವಿಯನ್ನು ಸರಿಯಾಗಿ ತಲುಪಲಿಲ್ಲ. ತಾನೆಂತಹ ಮೂರ್ಖ. ಇದುವರೆಗೂ ತನಗೆ ತಿಳಿಯದೇ ಹೋಯಿತಲ್ಲ..... ಸಧ್ಯ ತನ್ನ ಮನದ ಆಸೆಯನ್ನು ತಿಳಿಸಿ, ಮತ್ತಷ್ಟು ಮೂರ್ಖನಾಗಲಿಲ್ಲವಲ್ಲ ಅಂತನ್ನಿಸಿದರೂ, ನಿರಾಸೆಯ ಮೋಡ ಗಾಢವಾಗಿತ್ತು.

"ಏಯ್..... ಶ್ರೀಕಾಂತ, ಏನು ಯೋಚಿಸ್ತಿದೀಯ..... ನನ್ನ ಮಾತಿಗೆ ಉತ್ತರವನ್ನೇ ಕೊಡಲಿಲ್ಲವಲ್ಲ ನೀನು"

"ಏನಂತ ಕೊಡಲಿ?"

"ಚೆನ್ನಾಗಿದೆ. ಸಲಹೆ ಕೇಳಿದ್ದು ನಾನು..... ಪ್ರಕಾಶ ನಿನ್ನಷ್ಟು ಧೈರ್ಯವಂತನಲ್ಲ. ಇಷ್ಟು ದಿನಗಳಾದರೂ, ಅವನು ನಿಮ್ಮ ತಂದೆ ತಾಯಿಯರಿಗೆ ವಿಷಯವನ್ನೇ ತಿಳಿಸಿಲ್ಲ. ನಮ್ಮ ತಾಯಿ ಆತುರದಲ್ಲಿದಾರೆ..... ಯಾವಾಗ ಬರೋಣ ಅಂತ ಕೇಳಿದರು. ಅವತ್ತಿನಿಂದ ಪ್ರಕಾಶ್ ನನಗೆ ಸಿಕ್ಕೇ ಇಲ್ಲ. ಅದಕ್ಕೇ

ನಾನು ನಿನ್ನನ್ನು ಹುಡುಕಿಕೊಂಡು ಬಂದೆ"

"ಇದಕ್ಕೆ ನಾನೇನು ಮಾಡಲಿ ರಮಾ.... ಪ್ರೀತಿಸ್ತಾ ಇರೋರು ನೀವಿಬ್ಬರು....."

"ಅಂದ್ರೇ..... ಅಷ್ಟು ಸುಲಭವಾಗಿ ತಪ್ಪಿಸ್ಕೋಳ್ಳೋಕೆ ನೋಡ್ತಿಯಾ? ನಾನು ಪ್ರಕಾಶನ್ನ ಮದುವೆಯಾಗುವುದು ನಿನಗೆ ಇಷ್ಟವಿಲ್ಲವಾ? ಹಾಗಿದ್ರೆ ಹೇಳಿಬಿಡು. ನಾನು ನಿನ್ನನ್ನು ಮತ್ತೆ ಏನನ್ನು ಕೇಳೊಲ್ಲ"

"ಹಾಗಲ್ಲ ರಮಾ..... ನಂಗೇನೂ ಗೊತ್ತಾಗ್ತಾ ಇಲ್ಲ"

"ನೀನು ಪ್ರಕಾಶಂಗಿಂತ ಧೈರ್ಯವಂತ. ನಾನು ಅವನನ್ನು ಪ್ರೀತಿಸಿ ತಪ್ಪು ಮಾಡ್ತಿದೀನೀಂತ ಈಗ ಅನ್ನಿಸ್ತಿದೆ. ಆದರೆ ನಾನು ಮದುವೆಯಾದರೆ, ಅವನೂ ಧೈರ್ಯವಂತನಾಗ್ತಾನೆ"

"ಧೈರ್ಯವೇ ಇಲ್ಲದಿದ್ದ ಮೇಲೆ ಅವನು ಪ್ರೀತಿ ಮಾಡಿದ್ದು ತಪ್ಪು"

"ಹಾಗಾದ್ರೆ ಅವನಿಗೆ ಹಾಗಂತ ಹೇಳಿಬಿಡು. ಆಗ್ಲಾದ್ರೂ ಅವನಿಗೆ ಧೈರ್ಯ ಬರುತ್ತೆ"

"ಪ್ಲೀಸ್ ರಮಾ..... ಈ ವಿಷಯಕ್ಕೆ ನನ್ನನ್ನು ಎಳೆಯಬೇಡ"

"ನಾನು ನಿನ್ನನ್ನು ಒಬ್ಬ ಒಳ್ಳೆಯ ಸ್ನೇಹಿತ ಅಂತ ಅಂದ್ಕೊಂಡಿದ್ದೆ. ರೂಪ ನಿನಗೆ ನಿರಾಸೆ ಮಾಡಿದಾಗ ನಿನಗೆಷ್ಟು ಬೇಸರವಾಗಿತ್ತು ನೆನೆಸ್ಕೋ. ಈಗ ನನಗೆ ಅದಕ್ಕಿಂತ ಹೆಚ್ಚಿನ ನಿರಾಶೆಯಾಗಿದೆ. ನಂಗೊತ್ತು, ನಿನಗೆ ನಾನು, ಅತ್ತಿಗೆಯಾಗಿ ಬರುವುದು ಇಷ್ಟವಿಲ್ಲ. ಅದಕ್ಕೇ ಹೀಗೆ ಮಾತನಾಡ್ತಿದೀಯ.....ನಾನು ಬೇರೆ ಯಾರನ್ನಾದರೂ ಪ್ರೀತಿಸಿದ್ದರೆ ನಾನು ನಿನ್ನನ್ನು ಹೀಗೆ ಕೇಳಿಕೊಳ್ಳುವ ಪ್ರಸಂಗವೇ ಬರುತ್ತಿರಲಿಲ್ಲ. ನಾನು ದಡ್ಡಿ.... ನಾನು ದಡ್ಡಿ........" ರಮಾ ರಸ್ತೆ ಅನ್ನುವುದನ್ನು ಮರೆತು ಅಳತೊಡಗಿದಳು. ಶ್ರೀಕಾಂತ ಬೆಪ್ಪನಂತೆ ಹಾಗೇ ನಿಂತಿದ್ದ.

ಕಣ್ಣನ್ನು ಒರೆಸಿಕೊಳ್ಳುತ್ತಾ ರಮಾ ತನ್ನ ಮನೆಯ ಕಡೆಗೆ ತಿರುಗಿದಳು. ಶ್ರೀಕಾಂತ ತನ್ನ ಮನಸ್ಸನ್ನು ಕಲ್ಲು ಮಾಡಿಕೊಂಡು ಅವಳ ಹಿಂದೆ ವೇಗವಾಗಿ ಹೋಗಿ ಅವಳನ್ನು ನಿಲ್ಲಿಸಿದ.

"ನೀನು ದಡ್ಡಿಯಲ್ಲ ರಮಾ.... ನಾನೇ ದಡ್ಡ. ಒಬ್ಬ ಒಳ್ಳೆಯ ಸ್ನೇಹಿತನಾದ ಮೇಲೆ, ಸ್ನೇಹಕ್ಕೆ ಬೆಲೆ ಕೊಟ್ಟು ನಿನಗೆ ಸಹಾಯ ಮಾಡುವುದು ನನ್ನ ಕರ್ತವ್ಯ. ನಾನು ನಿನಗೆ ಹೆಲ್ಪ್ ಮಾಡ್ತೀನಿ. ಸಮಯ ಬಂದರೆ ನಿಮ್ಮಿಬ್ಬರ ಪರವಾಗಿ ನನ್ನ ತಂದೆ ತಾಯಿಯನ್ನು ಎದುರಿಸಿ ಮಾತನಾಡ್ತೀನಿ. ಆದರೆ

ಮೊದಲು ಪ್ರಕಾಶನೇ ಮಾತನಾಡ ಬೇಕು. ಅಮ್ಮ ಅಪ್ಪ ಒಪ್ಪೊಲ್ಲ ಅಂತ ಅವನಿಗ್ಯಾಕೆ ಹೆದರಿಕೆ?"

"ನಿಜ ಹೇಳು ಶ್ರೀಕಾಂತ, ನಿನ್ನ ತಾಯಿ ನನ್ನನ್ನು ತಮ್ಮ ಸೊಸೆಯನ್ನಾಗಿ ಮಾಡಿಕೊಳ್ಳಲು ಒಪ್ತಾರೆ ಅಂತ ಅನ್ನಿಸುತ್ತಾ? ಹಾಗಿದ್ದಿದ್ದರೆ ಇಷ್ಟೊಂದು ಜಾತಕಗಳನ್ನು ನೋಡಿಸ್ತಿದ್ರಾ?"

"ಅಮ್ಮ ಅಪ್ಪ ಹಳೇ ಸಂಪ್ರದಾಯಸ್ಥರು. ಜಾತಕ, ಶಕುನ ಇತ್ಯಾದಿಗಳಲ್ಲಿ ನಂಬಿಕೆ ಇರುವವರು. ಅದನ್ನು ಸರಿಯಿಲ್ಲ ಅಂತ ಹೇಗೆ ಹೇಳೋದು? ನಿನ್ನದು ಒಂದು ಜಾತಕದ ಪ್ರತಿ ಇದ್ದರೆ ಕೊಡು. ಅದನ್ನು ನಾನು ಶಾಸ್ತ್ರಿಗಳಿಗೆ ಕೊಡ್ತೀನಿ"

"ಬೇಡ ಶ್ರೀಕಾಂತ. ಒಂದು ವೇಳೆ ಜಾತಕ ಸರಿಹೊಂದದಿದ್ದರೆ ಆಗ ನಿಮ್ಮ ತಾಯೀನ ಒಪ್ಪಿಸುವುದು ಇನ್ನೂ ಕಷ್ಟವಾಗುತ್ತೆ"

"ನಿನಗೆ ನಮ್ಮ ಅಮ್ಮನ ಮೇಲೆ ನಂಬಿಕೇನೇ ಇಲ್ಲ. ಮತ್ತೆ ಅವಳ ಸೊಸೆಯಾಗಿ ಹೇಗೆ ಇರ್ತೀಯ?"

"ಒಂದು ಸಲ ಸೊಸೆಯಾಗಿ ಬಂದ ಮೇಲೆ, ನಾನೂ ಆ ಮನೆಯವಳಾಗಿ ಬಿಡ್ತೀನಿ. ಅಲ್ಲದೇ ನೀನು, ಪ್ರಕಾಶ ಎಲ್ಲಾ ನನ್ನ ಸಪೋರ್ಟ್‌ಗೆ ಇರ್ತೀರಲ್ಲ"

"ರಮಾ..... ನೀನು ಅತಿ ಜಾಣೆ" ಅಂತ ಅಂದುಕೊಂಡ ತನ್ನ ಮನದಲ್ಲೇ......

"ಓ.ಕೆ. ನನ್ನ ಮೇಲಿನ ವಿಶ್ವಾಸಕ್ಕೆ ತುಂಬಾ ಥ್ಯಾಂಕ್ಸ್. ನಾನು ಮತ್ತೆ ಈ ಜಾತಕಗಳನ್ನು ವಾಪಸ್ಸು ಮನೆಗೆ ತಗೊಂಡು ಹೋದರೆ ಅಮ್ಮನಿಗೆ ಅನುಮಾನ ಬರುತ್ತೆ. ಅದಕ್ಕೆ ಇವೆಲ್ಲಾ ನಿನ್ನ ಹತ್ತಿರ ಇರಲಿ. ಆದಷ್ಟು ಬೇಗ ನಿಮ್ಮ ತಾಯಿಗೆ ನಮ್ಮ ಮನೆಗೆ ಬಂದು ಮಾತಾಡುವಂತೆ ಹೇಳು. ಮುಂಚಿತವಾಗಿ ತಿಳಿದರೆ ನಾನೂ ಇರ್ತೀನಿ"

"ನಿನ್ನ ಪರೀಕ್ಷೆ ಯಾವಾಗ? ಪರೀಕ್ಷೆಗಳು ಮುಗಿದು ಹೋಗಲಿ ಇಲ್ಲದಿದ್ದರೆ ಪಾಸಾಗುವುದು ಸಹ ಕಷ್ಟವಾಗುತ್ತೆ" ಎಂದಳು.

"ಪರೀಕ್ಷೆಗೆ ಮುಂಚೆಯೇ ನನ್ನನ್ನು ಫೇಲ್ ಮಾಡಿಸಿ ಬಿಟ್ಟೆಯಲ್ಲಾ" ಅಂತಂದು ಕೊಂಡರೂ, ನಗುವಿನ ಮುಖವಾಡ ಧರಿಸಿ ನುಡಿದ.

"ಈ ಸಾರಿ ಪರೀಕ್ಷೆಗಳು ಮುಂದಕ್ಕೆ ಹೋದರೂ ಹೋಗಬಹುದು ನನ್ನ ಪರೀಕ್ಷೆಗೂ ನಿಮ್ಮ ಮದುವೆಗೂ ಯಾವ ಸಂಬಂಧ? ಈ ವಿಷಯಗಳಲ್ಲಿ ಒಬ್ಬರಿಗೊಬ್ಬರು ಕಾಯುವುದು ಮೂರ್ಖತನ" ಎಂದ.

"ಥ್ಯಾಂಕ್ಸ್ ಶ್ರೀಕಾಂತ, ಒಂದು ಗಳಿಗೆ ನೀನು ನನ್ನನ್ನು ಹೆದರಿಸಿಬಿಟ್ಟಿದ್ದೆ ಈಗ ಧೈರ್ಯ ಬಂತು"

"ಇಬ್ಬರಿಗೂ ಹೆದರಿಕೆ. ಮತ್ತೇಕೆ ಈ ಪ್ರೀತಿಯ ಸಹವಾಸ ಮಾಡಿದ್ರಿ? ಒಂದು ವೇಳೆ ನಮ್ಮ ಮನೆಯಲ್ಲಿ ಒಪ್ಪದಿದ್ದರೆ, ಹೀಗೇ ಇದ್ದು ಬಿಡ್ತೀರಾ? ಜೀವಮಾನ ಪರ್ಯಂತವೆಲ್ಲಾ ವಿರಹಿಗಳಾಗಿ? ನಗಲು ಯತ್ನಿಸಿದ್ದ."

"ನೀನು ಮಧ್ಯಸ್ಥಿಕೆ ವಹಿಸ್ತೀನಿ ಅಂತ ಅಂದಮೇಲೆ ಇನ್ನೇಕೆ ಚಿಂತೆ? ನೀನು ಯಾರನ್ನಾದರೂ ಲವ್ ಮಾಡ್ತಿದ್ದರೆ ಹೇಳು. ನಾನು ನಿನಗೆ ಸಹಾಯ ಮಾಡ್ತೀನಿ"

ಶ್ರೀಕಾಂತ ಜೋರಾಗಿ ನಕ್ಕುಬಿಟ್ಟ. ಆ ನಗುವಿನಲ್ಲಿ ನಾನಾ ಭಾವನೆಗಳು ಅಡಗಿದ್ದವು. ಮತ್ತೊಮ್ಮೆ ಥ್ಯಾಂಕ್ಸ್ ಹೇಳಿ ರಮಾ ತನ್ನ ಮನೆಯ ದಾರಿ ಹಿಡಿದಳು. ಶ್ರೀಕಾಂತ ಬರಿಗೈಯಲ್ಲಿ ಖಾಲಿಯಾದ ಹೃದಯದೊಡನೆ ಮನೆಗೆ ಹಿಂತಿರುಗಿದ. ಆ ರಾತ್ರಿ ಊಟ ಸೇರಲಿಲ್ಲ. ನಿದ್ದೆ ಬರಲಿಲ್ಲ.

"ರಾತ್ರಿ ಏಕೋ ಸರಿಯಾಗಿ ನಿದ್ದೆ ಬಂದಿರಲಿಲ್ಲ. ಮಧ್ಯೆ ಮಧ್ಯೆ ಸುಧಾಕರರಾಯರ ನೆನಪು ಬೇರೆ. ಬೆಳಿಗ್ಗೆ ಎದ್ದವನೇ ಮೊದಲು ಮಹೇಶನಿಗೆ ಫೋನು ಮಾಡಿದ್ದ"

"ಇವತ್ತು ಬ್ಯಾಂಕಿಗೆ, ನೀನು ನನ್ನ ಜತೆಗೆ ಬರಬೇಕು" ಅಂತ ಹೇಳಿದ್ದ. ಶ್ರೀಕಾಂತನ ಸ್ವಭಾವದ ಅರಿವಿದ್ದ ಮಹೇಶ ಒಪ್ಪಿಕೊಂಡ.

ಸುಧಾಕರ ರಾಯರ ಅಕೌಂಟ್ ಇದ್ದ ಬ್ಯಾಂಕನ್ನು ಹುಡುಕಿಕೊಂಡು ಹೋಗಿ, ಮೊದಲು ಚೆಕ್ ಕೊಟ್ಟು ಹಣವನ್ನು ತೆಗೆದುಕೊಂಡ. ನಂತರ ಇಬ್ಬರೂ ಬ್ಯಾಂಕ್ ಮ್ಯಾನೇಜರನ ಛೇಂಬರನ್ನು ಹೊಕ್ಕರು. ತಮ್ಮಿಬ್ಬರ ಪರಿಚಯವನ್ನು ಹೇಳಿಕೊಂಡು, ತಾವು ಬಂದ ಕಾರಣವನ್ನು ತಿಳಿಸಿದರು. ಅತೀ ಗಂಭೀರವನ್ನು ಪ್ರಕಟಿಸಿದ ಮ್ಯಾನೇಜರ್ ಅನುಮಾನ ವ್ಯಕ್ತಪಡಿಸಿದಾಗ, ಶ್ರೀಕಾಂತನಿಗೆ ಕೋಪಬಂದಿತ್ತು.

"ನಾವೂ ಗೌರವಾನ್ವಿತ ವ್ಯಕ್ತಿಗಳೇ. ನನ್ನ ಮೆಡಿಕಲ್ ಸ್ಟೋರ್ಸ್ ಬಗ್ಗೆ. ಇವನ ಸ್ಟುಡಿಯೋ ಬಗ್ಗೆ ವಿಚಾರಿಸಿದರೆ ಯಾರಾದರೂ ಮಾಹಿತಿ ಕೊಡ್ತಾರೆ. ಹಾಗೇ ನೀವು ಸುಧಾಕರರಾಯರನ್ನು ಸೇರಿಸಿದ್ದ ಆಸ್ಪತ್ರೆಯಲ್ಲೂ ಅವರ ಆರೋಗ್ಯದ ಬಗ್ಗೆ ವಿಚಾರಿಸಬಹುದು. ಅವರೇ ಕೇಳಿದ್ದರಿಂದ ನಾವು ಆ ಹುಡುಗಿಯ ಬಗ್ಗೆ ವಿಚಾರಿಸುತ್ತಿದ್ದೇವೆ. ಇಲ್ಲದಿದ್ದರೆ, ನಮ್ಮ ತಾಪತ್ರಯವೇ ನಮಗೆ ಸಾಕಷ್ಟಿದೆ"

"ನಮ್ಮ ಮಾತಿನಿಂದ ನಿಮಗೆ ಕೋಪ ಬಂದಿರುವುದು ಸಹಜವೇ. ಆದರೆ ನಮ್ಮ ಜವಾಬ್ದಾರಿಗಳೇ ಬೇರೆ. ನಿಮ್ಮ ಪರಿಚಯ ನಮಗಿಲ್ಲ. ಸುಧಾಕರರಾಯರೂ ಫೋನು ಮಾಡಿಲ್ಲ"

"ನಾವು ಪೇಪರ್‌ನಲ್ಲಿ ಹಾಕಿಸಿದರೆ, ಆ ಹುಡುಗಿ ಎಲ್ಲಿದಾಳೆ ಅಂತ ತಿಳಿದೇ ತಿಳಿಯಿತ್ತೆ. ಆದರೆ ರಾಯರಿಗೆ ಇಷ್ಟವಾಗಲಾರದು. ಆದಕ್ಕೇ ನಾವೇ ಖುದ್ದಾಗಿ ಮಾತನಾಡಿ, ಆ ಹುಡುಗಿಯನ್ನು ಒಪ್ಪಿಸುವ ಆಸೆ"

"ಸರಿ, ನೀವು ಹೇಳುತ್ತಿರುವುದರಲ್ಲಿ ತಪ್ಪಿಲ್ಲ ಆದರೆ......"

"ನಿಮಗೆ ಇನ್ನು ಅನುಮಾನವಿದ್ದರೆ, ನೀವೇ ಆ ಹುಡುಗಿಗೆ ವಿಷಯ ತಿಳಿಸ ಬಹುದು"

"ಪರವಾಗಿಲ್ಲ, ನೀವೇ ಸ್ನೇಹಿತರಂತೆ ಹೋಗಬಹುದು. ನಾನು ವಿಳಾಸ ಹುಡುಕಿಸಿ ನಿಮಗೆ ತಿಳಿಸ್ತೀನಿ. ನಿಮ್ಮ ನಿಮ್ಮ ಫೋನು ನಂಬರನ್ನು ಕೊಡಿ"

ಮಹೇಶ ಶ್ರೀಕಾಂತ ಮುಖ ಮುಖ ನೋಡಿಕೊಂಡರು. ಇಬ್ಬರೂ ತಮ್ಮ ತಮ್ಮ ವಿಸಿಟಂಗ್ ಕಾರ್ಡ್‌ಗಳನ್ನು ತೆಗೆದು ಕೊಟ್ಟರು. ಥ್ಯಾಂಕ್ಸ್ ಹೇಳಿ ಹೊರಬಂದರು. ಅದೇ ದಿನ ಮಧ್ಯಾಹ್ನ ಶ್ರೀಕಾಂತ ಮನೆಗೆ ಊಟಕ್ಕೆ ಹೋಗಿದ್ದಾಗ ಮ್ಯಾನೇಜರ್‌ನಿಂದ ಫೋನ್ ಬಂದಿತ್ತು. ವಸುಧಾಳು ಇರುವ ಹಾಸ್ಟೆಲಿನ ವಿಳಾಸ ಸಿಕ್ಕಿತ್ತು. ಅದೇ ಊರಿನಲ್ಲಿ ತಂದೆಯ ಜತೆ ಇರಲು ಬಯಸದೇ ಯಾವುದೋ ಹಾಸ್ಟೆಲ್ಲಿನಲ್ಲಿರುವ ಹುಡುಗಿ, ಸ್ವಲ್ಪ ವಿಚಿತ್ರದವಳೇ ಇರಬೇಕು ಅಂತನ್ನಿಸಿತ್ತು. ಮೊದಲು ಹಾಸ್ಟೆಲ್ಲಿಗೆ ಫೋನು ಮಾಡಿ, ಲೇಡಿವಾರ್ಡನ್ ಜತೆ ಮಾತಾಡಿದ. ಮಧ್ಯಾಹ್ನ ಮೂರು ಗಂಟೆಯ ನಂತರ ಬರಬೇಕೆಂದು ತಿಳಿಸಿದಳು.

ಇವನು ಮಹೇಶನನ್ನು ಕರೆದು ಕೊಂಡು, ಹಾಸ್ಟೆಲ್ಲನ್ನು ಪತ್ತೆ ಮಾಡಿದ. ವಾರ್ಡನ್‌ಗೆ ತಮ್ಮಿಬ್ಬರ ಪರಿಚಯವನ್ನು ಹೇಳಿಕೊಂಡು, ವಸುಧಾಳೊಡನೆ ಮಾತನಾಡಬೇಕೆಂದು ಹೇಳಿದ. ಆಕೆ ಗಂಭೀರವಾದಳು.

"ನೀವು ಅವಳ ತಂದೆಯ ಪರಿಚಯದವರು ಅಂತ ಹೇಳ್ತಿದೀರಿ ಆದ್ದರಿಂದ ತಿಳಿಸ್ತಿದೀನಿ... ... ... ಅವಳೀಗ ನಮ್ಮ ಹಾಸ್ಟೆಲ್ಲಿನಲ್ಲಿ ಇಲ್ಲ. ನಾಲ್ಕೈದು ತಿಂಗಳ ಹಿಂದೆ ಬೇರೆ ಹಾಸ್ಟೆಲ್ಲಿಗೆ ಹೋಗಿ ಸೇರಿಕೊಂಡಿದಾಳೆ"

"ಯಾಕೆ? ನೀವು ಕಳಿಸಬಾದಾಗಿತ್ತು"

"ಹೊಸದಾಗಿ ಬಂದು ಸೇರಿಕೊಳ್ಳುವವರೂ, ಹಳಬರು ಬಿಡುವುದೂ ಮಾಮೂಲು. ಅಲ್ಲದೇ ಅವಳು ಇಲ್ಲಿಯ ಇತರ ಹುಡುಗಿಯರ ಹತ್ತಿರ

ವಿಪರೀತ ಜಗಳವಾಡಿ ಗಲಾಟೆ ಮಾಡುತ್ತಿದ್ದಳು. ನಾವು ಅವಳ ತಂದೆಗೆ ಈ ವಿಷಯ ತಿಳಿಸಿದೆವು. ಆದರೆ ಆತನೂ ಬರಲಿಲ್ಲ. ಇವಳೂ ಹೋಗಲಿಲ್ಲ"

"ಹಾಗಾದ್ರೆ ಈಗ ಅವಳು ಎಲ್ಲಿದಾಳೆ ಅಂತ ತಿಳಿಯುವುದು ಹೇಗೆ? ಯಾರಾದರೂ ಸ್ನೇಹಿತೆಯರಿಗೆ ಅವಳ ವಿಳಾಸ ತಿಳಿದಿರಬಹುದೇ?"

"ಅವಳಿಗೆ ಯಾರೂ ಸ್ನೇಹಿತೆಯರಿರಲಿಲ್ಲ. ತಾನಾಯಿತು ತನ್ನ ಕಾಲೇಜು, ಓದು ಅಷ್ಟೆ. ಉಳಿದ ಸಮಯದಲ್ಲಿ ರೂಮಿನಲ್ಲಿ ಒಬ್ಬಳೇ ಇರುತ್ತಿದ್ದಳು. ಹೊರಗಿನಿಂದ ಒಬ್ಬ ಹುಡುಗಿ ಆಗಾಗ್ಗೆ ಬರುತ್ತಿದ್ದಳು. ಅವಳು ಇವಳ ಕಾಲೇಜಿನ ಸ್ನೇಹಿತೆ ಇರಬಹುದು. ಉಳಿದಂತೆ ಅವಳು ಯಾರ ಜತೆಯೂ ಬೆರೆಯುತ್ತಿರಲಿಲ್ಲ"

"ಈಗ ತಂದೆಗೆ ಮಗಳ ಅವಶ್ಯಕತೆ ಇದೆ. ಒಬ್ಬಳೇ ಮಗಳು. ಜತೆಯಲ್ಲಿರುವುದು ಯಾವುದಕ್ಕೂ ಒಳ್ಳೆಯದು. ನೀವು ಹೇಗಾದರೂ ಅವಳ ಹೊಸ ವಿಳಾಸವನ್ನು ಪತ್ತೆ ಮಾಡಿ ನಮಗೆ ತಿಳಿಸಿದರೆ ಅನುಕೂಲವಾಗುತ್ತೆ"

"ಆಗಲಿ" ಎಂದಳು. ಇವರು ಕೈ ಮುಗಿದು ಹೊರ ಬಂದರು. ಒಂದೆರಡು ದಿನಗಳಾದರೂ ಆಕೆ ಫೋನು ಮಾಡಿರಲಿಲ್ಲ. ಇವನಿಗೆ ಏನೋ ಅನುಮಾನ ಬಂತು. ಮಹೇಶನೊಡನೆ ನುಡಿದ.

"ಆ ವಾರ್ಡನ್ ಹೇಳುತ್ತಿರುವುದು ಸುಳ್ಳು ಅಂತ ನನಗನ್ನಿಸುತ್ತೆ. ಆ ಹುಡುಗಿ ಅದೇ ಹಾಸ್ಟೆಲ್ಲಿನಲ್ಲಿರಬಹುದು ಅಂತ ನನಗೆ ಅನುಮಾನ"

"ಅವಳ್ಯಾಕೆ ಸುಳ್ಳು ಹೇಳ್ತಾಳೆ? ಅವಳಿಗೇನು ಲಾಭ?"

"ಅಡ್ರೆಸ್ ಬದಲಾದರೆ ಸಾಮಾನ್ಯವಾಗಿ ಹಳೇ ವಿಳಾಸದವರಿಗೆ ತಿಳಿಸುತ್ತಾರೆ..... ಏಕಾಏಕೀ ಯಾರೂ ಬಿಟ್ಟು ಹೋಗುವುದಿಲ್ಲ"

"ಈಗಿನ ಕಾಲದ ಹುಡುಗಿಯರ ವಿಷಯ ಹೇಳೋಕ್ಕಾಗೊಲ್ಲ. ಗಲಾಟೆ, ಜಗಳ ಮಾಡಿಕೊಂಡು ಬಿಟ್ಟು ಹೋಗಿದ್ದರೇ...... "

"ಹಾಗಿದ್ದರೂ, ಆಕೆ ಮನೆಯವರಿಗೆ ತಿಳಿಸಲೇಬೇಕು. ಇಲ್ಲದಿದ್ದರೆ ಆಕೆಯದು ತಪ್ಪಾಗುತ್ತೆ"

"ಮತ್ತೆ ಹೋಗಿ ವಿಚಾರಿಸೋಣ"

"ಬೇಡ. ಈ ಸಾರಿ ಬೇರೆ ಯಾರನ್ನಾದರೂ ಕಳಿಸೋಣ"

"ಅದ್ಯಾಕೆ ನಿನಗೆ ಇದ್ದಕ್ಕಿದ್ದ ಹಾಗೆ ಅನುಮಾನ ಬಂತು?"

ಆಕೆ ಮಾತನಾಡುತ್ತಿದ್ದಾಗ ಏನೋ ಮುಚ್ಚಿಡ್ತಾ ಇದಾಳೆ ಅಂತ ಅನುಮಾನ ಬಂದಿತ್ತು. ಎರಡು ದಿನಗಳಾದರೂ ನಮಗೆ ವಿಳಾಸ ತಿಳಿಸಿಲ್ಲ. ಅವಳ

ತಂದೆಗೆ ಖಾಯಿಲೆ ಅಂತ ತಿಳಿದರೂ.... ಹೀಗೆ ಉದಾಸೀನವಾಗಿದ್ದರೆ..... ಒಂದು ಹಾಸ್ಟೆಲ್ಲಿನ ವಾರ್ಡನ್‌ಗೆ ಜವಾಬ್ದಾರಿ ಇರಬೇಡವೇ......

"ಹಾಗಾದ್ರೆ ಈಗ ಏನು ಮಾಡೋಣ?"

"ಪೊಲೀಸ್ ಕಂಪ್ಲೇಂಟ್ ಕೊಡೋಣ"

"ಏನಂತ ಕೊಡ್ತೀಯಾ? ಆ ಹುಡುಗಿ ನಾಪತ್ತೆಯಾಗಿದ್ದಾಳೆ ಅಂತಾನಾ? ಅವಳು ಹೇಗಿದಾಳೆ ಅಂತ ಸಹ ನಮಗೆ ಗೊತ್ತಿಲ್ಲ"

"ಹೀಗಂತ ರಾಯರಿಗೆ ತಿಳಿಸಿದರೇ...... "

"ಅವರೀಗ ಮೊದಲೇ ಹಾರ್ಟ್‌ಪೇಶೆಂಟ್. ಅವರಿಗೆ ಸಹಾಯ ಮಾಡ್ತೀವಿಂತ ಹೋಗಿ ಅವರಿಗೆ ಅಪಾಯವಾಗಬಾರದು ಅಲ್ವಾ?"

"ನಿನ್ನ ಅತ್ತಿಗೆ ಈ ವಿಷಯದಲ್ಲಿ ನಮಗೆ ಸಹಾಯ ಮಾಡ್ತಾರಾ? ತಾನು ವಸುಧಾಳ ಸ್ನೇಹಿತೆ ಅಂತ ಹೋಗಿ ವಿಚಾರಿಸಿದರೆ....."

"ನೋಡೋಣ ಕೇಳ್ತಿನಿ. ಆದರೆ ರಮನಿಗೆ ಆಸಕ್ತಿ ಇಲ್ಲದಿದ್ದರೆ ನಾನು ಬಲವಂತ ಮಾಡೋಲ್ಲ" ಮಹೇಶ ತಲೆಯಾಡಿಸಿದ.

ರಮಳೊಡನೆ ಈ ವಿಷಯವನ್ನು ವಿವರವಾಗಿ ಹೇಳಿ, ಅವಳ ಸಲಹೆಯನ್ನು ಕೇಳಿದಾಗ ಅವಳು ತಲೆಯಾಡಿಸಿದಳು.

"ಯಾರೋ ಮೂರನೇ ಮನೆಯವರ ವಿಚಾರಕ್ಕೆ ನಾವೇಕೆ ತಲೆ ಕೆಡಿಸಿಕೊಳ್ಳೋಣ. ನಮ್ಮ ಸಮಸ್ಯೆಗಳೇ ನಮಗೆ ಬೇಕಾದಷ್ಟಿವೆ"

"ಹೌದು ರಮಾ.... ಆದರೆ ಯಾಕೋ ಏನೋ ಆ ಹುಡುಗಿ ಅಪಾಯದಲ್ಲಿರ ಬಹುದು ಅಂತ ನನಗನ್ನಿಸುತ್ತಿದೆ"

"ಅವಳೇ ತನ್ನ ಸ್ವಂತ ಇಷ್ಟದಿಂದ ಮನೆಬಿಟ್ಟು ಬಂದಿದಾಳೆ ಅಂತೀಯ. ಅವಳು ಅಪಾಯದಲ್ಲಿದ್ದರೂ ನಾವೇನು ಮಾಡೋಕ್ಕೆ ಆಗುತ್ತೆ?"

"ಅವಳಿಗೆ ಸಹಾಯ ಮಾಡಿ, ಅಪಾಯದಿಂದ ಪಾರು ಮಾಡಿದರೆ, ತಂದೆ ಮಗಳು ಒಂದಾಗುತ್ತಾರೆ. ಒಂದು ಸಂಸಾರವನ್ನು ಸರಿ ಮಾಡಿದ ಪುಣ್ಯ ನಮಗೆ ಬರುತ್ತೆ"

"ನಾವೀಗ ಸಾಕಷ್ಟು ಪುಣ್ಯವಂತರಾಗಿದೀವಿ ಶ್ರೀಕಾಂತ. ನಮಗೆ ಅಷ್ಟೇ ಸಾಕು"

"ನೀನೂ ಹೀಗೆ ಮಾತನಾಡ್ತೀಯ ಅಂತ ನಾನು ಅಂದುಕೊಂಡಿರಲಿಲ್ಲ"

"ನಾನು ಏನು ಮಾತಾಡ್ತೀನಿ ಅಂತ ನನಗೇ ಗೊತ್ತಿಲ್ಲಪ್ಪಾ. ಯಾಕೋ ಮನಸ್ಸಿಗೆ ತುಂಬಾ ಬೇಜಾರಾಗ್ತಿದೆ"

"ಅಮ್ಮ ಏನಾದ್ರೂ ಅಂದಳಾ?"

"ಇಲ್ಲ, ಅವರಿಗೇನು ದುಃಖ ಕಡಿಮೇನಾ? ನಾನು ಹೀಗೆ ಇನ್ನು ಎಷ್ಟು ದಿನ ಜೀವನ ಸಾಗಿಸಬೇಕೋ ಅಂತ ಯೋಚಿಸಿದರೆ ಆತಂಕವಾಗುತ್ತೆ. ಏನೋ ಹಿಂಸೆಯಾಗುತ್ತೆ"

"ನಿನಗೆ ಇಲ್ಲಿ ಅಷ್ಟು ಬೇಸರವಾದರೆ, ನಿಮ್ಮ ತಾಯಿಯ ಮನೆಯಲ್ಲಿ ಹೋಗಿ ಇರು. ನಾನು ಅಮ್ಮನಿಗೆ ಹೇಳ್ತೀನಿ"

"ಬೇಡ ಶ್ರೀಕಾಂತ. ಒಂದು ಸಾರಿ ಇಲ್ಲಿಂದ ಹೊರಟುಹೋದರೆ ಈ ಮನೆಯ ಋಣವೇ ತೀರಿ ಹೋಗುತ್ತೇನೋ ಅಂತನ್ನಿಸುತ್ತೆ. ನಾನು ಬದುಕಿರುವವರೆಗೂ ಈ ಮನೆಯಲ್ಲೇ ಇರಬೇಕೆಂಬ ಆಸೆ"

"ಈ ಮನೆಯಿಂದ ನೀನು ಹೊರಗೆ ಹೋಗಲಿ ಅಂತ ನಾವುಗಳ್ಯಾರೂ ಮನಸ್ನಲ್ಲಿ ಸಹ ಯೋಚಿಸಿಲ್ಲ. ನೀನ್ಯಾಕೆ ಹಾಗೆ ಯೋಚಿಸ್ತೀಯಾ. ಅಮ್ಮ ಹಾಗೇನಾದ್ರೂ ಮಾತಾಡಿದ್ರೆ ಹೇಳು. ನಾನು ಅವಳಿಗೆ ಬುದ್ಧಿ ಹೇಳ್ತೀನಿ"

"ಇಲ್ಲ ಶ್ರೀಕಾಂತ ಅಮ್ಮ ಏನೂ ಅಂದಿಲ್ಲ"

"ಹಾಗಾದ್ರೆ ಈ ಮನೇಲಿ ನಿನಗೇನು ತೊಂದರೆ ಹೇಳು. ನಾನು ಪರಿಹಾರ ಹುಡುಕ್ತೀನಿ" ಅಷ್ಟರಲ್ಲಿ ತಾಯಿ ಹೊರಗಿನಿಂದ ಕೂಗಿದ್ದಳು.

"ಶ್ರೀಕಾಂತ..... ಶ್ರೀಕಾಂತ" ಅವನು ರಮಳ ರೂಮಿನಿಂದ ಹೊರಗೆ ಬಂದಾಗ ಆಕೆ ಬೆರಗಾಗಿದ್ದಳು. ವಿಶೂ ಇಲ್ಲಿ ಹೊರಗೆ ಆಟ ಆಡ್ತಾ ಮಲಗಿದಾನೆ. ರಮಾ ರೂಮಿನಲ್ಲಿರಬಹುದು ಇವನು ಅವಳ ರೂಮಿನಲ್ಲೇನು ಮಾಡ್ತಿದ್ದ? ತಾಯಿಯ ಸಂಶಯದ ದೃಷ್ಟಿ ನಾನಾ ದಿಕ್ಕಿಗೆ ಓಡಿದವು.

"ಏನಮ್ಮಾ.... ಏನು ಬೇಕಾಗಿತ್ತು?" ಸಿಡುಕಿದ.

"ಅಲ್ಲಿ ಏನು ಮಾಡ್ತಿದ್ದೆ? ನಾನು ಎಷ್ಟು ಹೊತ್ನಿಂದ ಕೂಗ್ತಾ ಇದೀನಿ..... " ಅಸಹನೆಯಿಂದ ಒರಲಿದಳು.

"ರಮಳ ಹತ್ತಿರ ಮಾತನಾಡ್ತಿದ್ದೆ. ಏನೋ ವಿಷಯ ಇತ್ತು"

ಅವನ ಉತ್ತರದಿಂದ ಸಮಾಧಾನ ವಾಗದಿದ್ದರೂ, ಏನು ಮಾತನಾಡುತ್ತಿದ್ದೆ ಎಂದು ಕೇಳಲಿಲ್ಲ. ರಮಾ ಒಳಗಿನಿಂದ ಹೊರಗೆ ಬಂದಿರಲಿಲ್ಲ. "ಕರೀ, ಅವಳನ್ನ, ಮಗೂ ಇಲ್ಲಿ ಉಚ್ಚೆ ಹುಯ್ಕೊಂಡು ರಂಪ ಮಾಡಿ ಅಳ್ತಿದೆ.... ಒಳಗೇನು ಮಾಡ್ತಿದಾಳೆ ಅವಳು?"

"ಅಮ್ಮಾ..... ಸ್ವಲ್ಪ ಮೆಲ್ಲಗೆ ಮಾತಾಡು. ವಿಶೂ ಎಲ್ಲಿ ಅಳ್ತಾ ಇದಾನೆ. ಆಟ ಆಡ್ತಾ ಇದಾನಲ್ಲ?"

"ಅವನು ಆಟ ಆಡ್ತಾ ಇದಾನೋ...... ಅಳ್ತಾ ಇದಾನೋ..... ನನಗೆ ಗೊತ್ತು. ನೀನು ನನ್ನನ್ನೇ ಪ್ರಶ್ನಿಸಬೇಡ" ಎಂದು ಸಿಡುಕುತ್ತಾ ನುಡಿದಾಗ ಈ ತಾಯಿಗೂ ಏನೋ ಆಗಿದೆ ಅಂತನ್ನಿಸಿತ್ತು.

"ಏನೋ ವಿಶೂ.... ಏನಾಟ ಆಡ್ತಾ ಇದೀಯೋ" ಎನ್ನುತ್ತಾ ಮಗುವಿನ ಬಳಿ ಕುಳಿತ. ಪಾರ್ವತಿ ಅವನನ್ನೇ ದುರು ದುರು ನೋಡುತ್ತಾ ಒಳಗೆ ನಡೆದಳು. ಅಮ್ಮ ಹೀಗೆ ಕಾರಣವಿಲ್ಲದೇ ಸಿಡುಕ್ತಾಳೆ. ರಮಾ ಬೇಸರ ಅಂತ ಕೊರಗ್ತಾಳೆ. ಅದ್ಯಾರೋ ಮುಖ ಕಾಣದ ಹುಡುಗಿ ಮನೆ ಬಿಟ್ಟು ಪರದೇಶಿಯಂತೆ ವಾಸಿಸುತ್ತಿದ್ದಾಳೆ. ಈ ವಿಷಯ ಅಮ್ಮನಿಗೆ ತಿಳಿದರೆ ಆ ಹುಡುಗಿ ಬಗ್ಗೆ ಏನನ್ನಿಸಬಹುದು ಅಂತಂದುಕೊಂಡಾಗ ನಗು ಬಂತು. ಈ ವಿಷಯದಲ್ಲಿ ಅಮ್ಮನಿಂದ ತನಗೆ ಖಂಡಿತಾ ಸಹಾಯ ದೊರೆಯುವುದಿಲ್ಲ. ರಮಳೂ ತನಗೆ ಸಹಾಯ ಮಾಡುವಂತೆ ಕಾಣಲಿಲ್ಲ ಅಂತ ಅಂದುಕೊಂಡಾಗ ಬೇಸರವೆನಿಸಿತ್ತು. ಆದರೆ ತಾನು ಅವಳನ್ನು ಒತ್ತಾಯ ಮಾಡಲಾರ. ಮೊದಲೇ ಜೀವನದಲ್ಲಿ ಅತಿ ನೊಂದಿರುವವಳು. ಪ್ರಕಾಶನ್ನ ಪ್ರೀತಿಸಿದ್ದರಿಂದ ಈ ಮನೆಗೆ ಸೊಸೆಯಾಗಿ ಬಂದು ಸೇರಿದಳು. ಅಮ್ಮನ ಕಣ್ಣಲ್ಲಿ ಅದೇ ಒಂದು ಘೋರ ತಪ್ಪು. ಬಹುಶಃ ಅವಳು ರಮನ್ನ ಎಂದಿಗೂ ಕ್ಷಮಿಸುವುದಿಲ್ಲ ಅಂತ ಕಾಣಿಸುತ್ತೆ ಅಂತ ಅಂದುಕೊಂಡಾಗ ರಮಳ ಮೇಲೆ ಅನುಕಂಪ ಮೂಡಿತು.

"ಪಾಪ.... ಅವಳು ಅದೆಷ್ಟು ಆಸೆ ಇಟ್ಟುಕೊಂಡು ಈ ಮನೆಯ ಸೊಸೆಯಾಗಿ ಬಂದಳೋ..... ಆದರೆ ಬರುವ ಮೊದಲಿನಿಂದಲೂ ಅಮ್ಮನಿಗೆ ಅವಳ ಮೇಲೆ ಅಕ್ಕರೆ ಇಲ್ಲ. ರಂಜಿನಿಯ ಸ್ನೇಹಿತೆ. ರಂಜಿನಿಗಾಗಿ ಬರುತ್ತಾಳೆ ಅಂತ ಭಾವಿಸಿದ್ದಳಂತೆ"

ಆದರೆ ಆ ದಿನ ರಮಳ ತಾಯಿ ಮಗಳ ಮದುವೆ ವಿಷಯವನ್ನು ಪ್ರಸ್ತಾಪ ಮಾಡಿದಾಗ, ಅಮ್ಮನ ಮುಖ ಕೆಟ್ಟು ಹೋಗಿತ್ತು. ಆಕೆ ಆ ಕಡೆ ಹೋದ ಮೇಲೆ ಕೂಗಾಡಿದ್ದಳು.

"ನನಗೆ ಗೊತ್ತಿತ್ತು. ಹೀಗೇನಾದ್ರೂ ಸಂಚು ಇರಬಹುದು ಅಂತ. ರಮಾ ಪ್ರಕಾಶನ್ನ ಪ್ರೀತಿಸ್ತಾಳೆ. ನೀವು ಒಪ್ಪಿಗೆ ಕೊಡಬೇಕು ಮದುವೆಗೆ ಅಂತ ಆಕೆ ಅದೇನು ಮಣಿ ಮಣಿಯಾಗಿ ಮಾತಾಡ್ತಾಳೆ. ಹೀಗೆ ಅವರಿವರ ಮನೆಗೆ ಮಕ್ಕಳನ್ನು ಕಳಿಸಿ, ತನ್ನ ಗಾಳದಲ್ಲಿ ಗಂಡುಗಳನ್ನು ಎಳೆದುಕೊಳ್ಳುವ ಚತುರ ಹೆಂಗಸು. ಇಲ್ಲದಿದ್ದರೆ ಗಂಡ ಇಲ್ಲ.... ಸಂಪಾದನೆ ನೋಡಿದರೆ,

ಎರಡು ಹೊತ್ತಿನ ಊಟಕ್ಕೂ ಕಷ್ಟ. ಅಂಥಾದ್ದರಲ್ಲಿ ಎಷ್ಟು ಸುಲಭವಾಗಿ ಹೆಣ್ಣುಮಕ್ಕಳ ಮದುವೆ ಮಾಡಿ ಮುಗಿಸಿದಳಲ್ಲ. ಈಗ ಎಲ್ಲಾ ಅರ್ಥವಾಗ್ತಿದೆ"

ಹೊರಗಿನಿಂದ ಬಂದ ಶ್ರೀಕಾಂತನಿಗೆ ತಕ್ಷಣ, ಏನು ನಡೆದಿರಬಹುದು ಎಂದು ಅರ್ಥವಾಗಲಿಲ್ಲ. ಪ್ರಕಾಶ ಬೆಪ್ಪನಂತೆ ಸುಮ್ಮನೆ ಕೂತಿದ್ದ. ಏನಾಯ್ತೋ ಎಂದು ಸಂಜ್ಞೆಯಿಂದ ಕೇಳಿದಾಗ ಏನೂ ಇಲ್ಲವೆನ್ನುವಂತೆ ತಲೆಯಾಡಿಸಿದ್ದ. ಊಟ ಮುಗಿದ ಮೇಲೆ ತಾಯಿ ಕೇಳಿದ್ದಳು.

"ಅವತ್ತು ಶಾಸ್ತ್ರಿಗಳ ಮನೆಗೆ ಜಾತಕ ಕೊಟ್ಟು ಬಾ ಅಂತ ಹೇಳಿದ್ನಲ್ಲ ಕೊಟ್ಯೋ ಇಲ್ಲವೋ?"

"ಇಲ್ಲಮ್ಮ ನಾನು ಕೊಡಲಿಲ್ಲ" ನಿಜವನ್ನೇ ಹೇಳಿದ್ದ.

"ಯಾಕೆ ಕೊಡಲಿಲ್ಲ? ಅವರು ಊರಿನಲ್ಲಿರಲಿಲ್ವಾ? ಅಥವಾ ನೀನು ಅವರ ಮನೆ ತನಕ ಹೋಗಲಿಲ್ವೋ....."

"ಇಲ್ಲಮ್ಮ ನನಗೆ ಹೋಗೋಕ್ಕಾಗಲಿಲ್ಲ"

"ನಂಗೆಲ್ಲಾ ಗೊತ್ತು. ನೀನು ಬೇಕೂಂತ ಹೋಗಲಿಲ್ಲ. ನೀನೂ ಅವನ ಜತೆಗೆ ಸೇರಿಕೊಂಡಿದೀಯ. ನನಗೆ ಗೊತ್ತು"

"ಹೂಂನಮ್ಮ. ಅದರಲ್ಲೇನು ತಪ್ಪು?"

"ತಪ್ಪು ನಂದು ಕಣೋ. ಅವತ್ತು ನಾನೇ ಶಾಸ್ತ್ರಿಗಳ ಮನೆಗೆ ಹೋಗಿದ್ದರೆ ಇಷ್ಟು ಹೊತ್ತಿಗೆ ಯಾವುದಾದರೂ ಹುಡುಗೀನ ನೋಡಿ ಮದುವೆ ಗೊತ್ತು ಮಾಡಿಬಿಡಬಹುದಾಗಿತ್ತು"

"ಪ್ರಕಾಶ ಬೇರೆ ಯಾರನ್ನೂ ಮದುವೆಯಾಗೊಲ್ಲಮ್ಮಾ"

"ಯಾಕೆ ಆಗೊಲ್ಲ? ಅವಳೇನು ಮಂತ್ರ ಮಾಟ ಮಾಡಿದಾಳೆ? ನನ್ನ ಮಗಳು ನಿಮ್ಮ ಮಗನ್ನ ಇಷ್ಟಪಟ್ಟಿದಾಳೆ ಅಂತ ಹೇಳೊಕ್ಕೆ ಆ ಹೆಂಗಸಿಗೆಷ್ಟು ಧೈರ್ಯ. ಚೆನ್ನಾಗಿ ನಾಲ್ಕು ಏಟು ಕೊಟ್ಟು ಬುದ್ಧಿ ಕಲಿಸುವುದನ್ನು ಬಿಟ್ಟು ಮಗಳು ಹೇಳಿದಳೂಂತ ನಮ್ಮ ಮನೆ ಬಾಗಿಲಿನ ತನಕ ಬಂದಿದಾಳಲ್ಲ ನಾಚಿಕೆಯಾಗೊಲ್ವಾ ಅವಳಿಗೆ?"

"ಇದರಲ್ಲಿ ನಾಚಿಕೊಳ್ಳುವಂಥಾದ್ದು ಏನಿದೆ ಅವರು ಮಗಳ ಪ್ರೀತಿಗೆ ಬೆಲೆ ಕೊಟ್ಟಿದ್ದಾರೆ. ನೀನು ನಿನ್ನ ಮಗನ ಭಾವನೆಗಳಿಗೆ ಬೆಲೆ ಕೊಡುತ್ತಿಲ್ಲ ಅಷ್ಟೇ"

"ನೀನೂ ಹೀಗೆಲ್ಲಾ ಮಾತನಾಡ್ತೀಯಾಂತ ನಾನು ಅಂದುಕೊಂಡಿರಲಿಲ್ಲ ಕಣೋ. ಅವನಿಗೆ ತಿಳುವಳಿಕೆ ಹೇಳು"

“ಇಲ್ಲಮ್ಮ ನನ್ನಿಂದ ಸಾಧ್ಯವಿಲ್ಲ. ಪ್ರಕಾಶ ರಮಳನ್ನು ಮದುವೆಯಾಗುವುದರಲ್ಲಿ ನನಗೆ ಯಾವ ಅಭ್ಯಂತರವೂ ಇಲ್ಲ”

“ನಿನಗೇನು? ನೀನೂ ಯಾರನ್ನೋ ಹೀಗೆ ಪ್ರೀತಿಸ್ತಿರಬಹುದು. ಅದಕ್ಕೇ ಹೀಗೆ ಮಾತನಾಡ್ತಿದೀಯ. ಏನೇ ಆದರೂ ನಾನು ಈ ಮನೆಗೆ ನನ್ನ ಇಷ್ಟದ, ನಾನು ಒಪ್ಪಿದ ಹುಡುಗಿಯನ್ನೇ ಸೊಸೆಯಾಗಿ ತರುವುದು”

“ನೀನು ಹೀಗೇ ಹಠ ಮಾಡಿದರೆ ಪ್ರಕಾಶ ಮನೆ ಬಿಟ್ಟು ಹೋಗ್ತಾನೆ ಅಷ್ಟೇ”

“ಹೋಗಲಿ...... ನನಗಿಂತ ಅವಳೇ ಹೆಚ್ಚಾದರೆ ಅವಳ ಹಿಂದೆ ಹೋಗಿ ಹಾಳಾಗಲಿ.......”

ಶ್ರೀಕಾಂತ ಬೆಚ್ಚಿದ. ಪ್ರಕಾಶ ತಿರಸ್ಕಾರದಿಂದ ತಾಯಿಯ ಕಡೆ ನೋಡಿದ.

“ಅಮ್ಮಾ ಏನಮ್ಮಾ ಹೀಗೆಲ್ಲಾ ಮಾತಾಡ್ತೀಯಾ?”

“ಮತ್ತಿನ್ನೇನು? ನನ್ನ ಹೊಟ್ಟೆ ಉರಿಸೋಕೆ ಅಂತ ಹುಟ್ಟಿದೀರಿ. ನನ್ನ ಆಸೆಗಳಿಗೆ ಬೆಲೆ ಇಲ್ವಾ?”

“ನಿನ್ನ ಆಸೆಗಳಿಗೆ ಬೆಲೆ ಬರೋದು, ನೀನು ನಿನ್ನ ಮಕ್ಕಳ ಮನಸ್ಸನ್ನು ಅರಿತಾಗ” ಅಂತ ಅಂದುಕೊಂಡ. ರಮನ ಮೇಲೇಕೆ ಅಮ್ಮನಿಗೆ ದ್ವೇಷ......? ಅವಳೂ ಇವಳಂತೆ ಹೆಣ್ಣಲ್ಲವೇ? ಪ್ರೀತಿಸಿ ಮದುವೆಯಾಗುವುದು ಯಾವ ಮಹಾ ಅಪರಾಧ ಅಂತ ಅಮ್ಮ ಹೀಗೆ ಆಡ್ತಿದಾಳೆ ಅಂತ ಅರ್ಥವಾಗಿರಲಿಲ್ಲ.

ಆ ನಂತರ ಪ್ರಕಾಶ ಆ ಕಂಪೆನಿಯ ಕೆಲಸಕ್ಕೆ ರಾಜೀನಾಮೆ ಇತ್ತು ಬೇರೆ ಕೆಲಸಕ್ಕೆ ಸೇರಿಕೊಂಡು ಆ ಊರು ಬಿಟ್ಟು ಬೇರೆ ಊರಿಗೆ ಹೊರಟು ಹೋದ. ಈಗ ಪಾರ್ವತಿಗೆ ಇನ್ನೊಂದು ರೀತಿಯ ಆತಂಕ. ತಮಗೆ ತಿಳಿಸದೇ ಪ್ರಕಾಶ ರಮಾ ಮದುವೆಯಾಗಿ ಆ ಊರಿನಲ್ಲಿ ಸಂಸಾರ ಹೂಡಿಬಿಟ್ಟರೇ ಅಂತ. ಹಾಗಾಗಬಾರದು. ಆದಷ್ಟು ಬೇಗ ತಾನೇ ಒಂದು ಹುಡುಗಿಯನ್ನು ಆರಿಸಿ, ಮದುವೆಯ ಮಂಗಳ ಕಾರ್ಯ ಮುಗಿಸಿ ಬಿಟ್ಟರೆ ಎಲ್ಲಾ ಸರಿಹೋಗುತ್ತದೆ ಎಂದು ಅವಳ ನಂಬಿಕೆ. ತಾನೇ ಶಾಸ್ತ್ರಿಗಳ ಮನೆಗೆ ಹೋದಳು. ಅವರಿಗೆ ವಿಷಯವನ್ನು ತಿಳಿಸಿ, “ಆದಷ್ಟು ಬೇಗ ಪ್ರಕಾಶನ ಜಾತಕಕ್ಕೆ ಹೊಂದುವಂತಹ, ಎಲ್ಲಾ ರೀತಿಯಿಂದಲೂ ಸರಿಹೊಂದುವ ಹುಡುಗಿಯಿದ್ದರೆ ತಿಳಿಸಿ. ಬೇಗ ಮದುವೆ ಮಾಡಿ ಬಿಡಬೇಕು.......” ಎಂದಳು.

ಶಾಸ್ತ್ರಿಗಳು ಪ್ರಕಾಶನ ಜಾತಕವನ್ನು ಪರಿಶೀಲಿಸಿದರು.

“ಈಗ ನಿಮ್ಮ ಪ್ರಕಾಶನ ವಿವಾಹಕ್ಕೆ ಸಮಯ ಪ್ರಶಸ್ತವಾಗಿಲ್ಲ. ಒಂದೆರಡು

ವರ್ಷ ಮದುವೆ ಮುಂದೂಡುವುದೇ ಸರಿ" ಎಂದರು. ಆಕೆಗೆ ನಿರಾಸೆಯಾಗಿತ್ತು. ಸಮಯ ಚೆನ್ನಾಗಿಲ್ಲ, ಆದರೆ ಪ್ರಕಾಶನ್ನ ಕರೆಸಿ ಅವನಿಗೆ ತಿಳುವಳಿಕೆ ಹೇಳುವುದು ಹೇಗೆ..... ಇದೇ ನೆವದಲ್ಲಿ ದಿನಗಳು ಕಳೆದರೆ ಮುಂದೆ ಅವನ ಮನಸ್ಸು ಬದಲಾಯಿಸಿದರೂ ಬದಲಾಗಬಹುದು.

ಮನೆಯಲ್ಲಿ ನಡೆದ ಹಗರಣದಿಂದಾಗಿ, ಶ್ರೀಕಾಂತ ತನ್ನ ತಾಯಿಯೊಡನೆ ಮಾತು ಕಡಿಮೆ ಮಾಡಿದ್ದ. ತಂದೆ ಟೂರ್ ಹೋಗುವುದು ಜಾಸ್ತಿ ಆಗಿತ್ತು. ರಂಜಿನಿ ಚೊಚ್ಚಲ ಬಾಣಂತನಕ್ಕೆ ಬಂದಿದ್ದಳು. ಮಗಳೊಡನೆ ಗಂಡು ಮಕ್ಕಳಿಬ್ಬರ ಮೇಲೆ ಚಾಡಿ ಹೇಳಿದಾಗ, ಅವಳು ತಾಯಿಗೇ ಬುದ್ಧಿ ಹೇಳಿದ್ದಳು.

"ರಮನ್ನ ನೀನ್ಯಾಕೆ ಬೇಡಾಂತಿಯೋ ನನಗೆ ಅರ್ಥವಾಗೊಲ್ಲ. ನಮ್ಮ ಜನವೇ..... ನಮಗೆ ಚಿರಪರಿಚಿತ. ಪ್ರಕಾಶ ಇಷ್ಟಪಟ್ಟಿದ್ದಾನೆ. ಇನ್ನು ನಿನಗೇನು ಕಷ್ಟ?"

"ಹೆಣ್ಣು ಹುಡುಗಿ ನಿನಗೆ ನನ್ನ ಕಷ್ಟ ಅರ್ಥವಾಗುತ್ತೆ ಅಂತ ನಿನ್ನ ಕೈಲಿ ಹೇಳಿದೆ. ನೀವೇ ಎಲ್ಲಾ ಒಂದು. ನಾನೇ ಬೇರೆ"

"ಒಂದು ವೇಳೆ ನಾನೇ ಯಾರನ್ನೋ ಲವ್ ಮಾಡಿ, ಅವನನ್ನೇ ಮದುವೆ ಯಾಗ್ತೀನಿ ಅಂತ ಹೇಳಿದ್ರೆ ನೀನೇನು ಮಾಡ್ತಿದ್ದೆ?"

"ಚೆನ್ನಾಗಿ ತಿಳುವಳಿಕೆ ಹೇಳಿ, ಸೊಗಸಾದ ಗಂಡು ನೋಡಿ ಮದುವೆ ಮಾಡಿ ಕಳಿಸ್ತಿದ್ದೆ."

"ನೀನೇನೋ ಕಳಿಸ್ತಿದ್ದೆ. ಆದರೆ ನಮ್ಮಿಬ್ಬರಲ್ಲಿ ಹೊಂದಾಣಿಕೆ ಇಲ್ಲದೇ ನಾನು ಗಂಡನ್ನ ಬಿಟ್ಟು ಬಂದಿದ್ದರೆ ಏನು ಮಾಡ್ತಿದ್ದೆ..... ಮತ್ತೆ ತಿಳುವಳಿಕೆ ಹೇಳಿ ಸರಿ ಮಾಡಿ ಕಳಿಸ್ತಿದ್ದೆ ಅಂತ ಹೇಳ್ತೀಯಾ ಅಲ್ವಾ...... ಅಲ್ಲಮ್ಮ ನಮ್ಮಿಬ್ಬರ ಮನಸ್ಸು ಒಂದಾಗೊಕ್ಕೆ ಸಾಧ್ಯವೇನಮ್ಮಾ? ಎಷ್ಟು ತೇಪೆ ಹಾಕ್ತೀವೋ ಅಷ್ಟೂ ಅಸಹ್ಯವಾಗಿ ಕಾಣುತ್ತೆ"

"ಏನೇ ರಂಜಿ..... ನೀನೂ ಶ್ರೀಕಾಂತನ ತರಹ ಮಾತನಾಡ್ತೀಯಲ್ಲೇ...... ಅವನಂತೂ ಹುಡುಗ...... "

"ಹುಡುಗ, ಹುಡುಗೀರ ಭಾವನೆ ಒಂದೇ ತರಹ ಇರಬಾರದು ಅಂತೇನಿಲ್ಲ. ಪ್ರಕಾಶನಿಗೆ ಬೇಜಾರಾಗಿಯೇ ಈ ಕೆಲಸ ಬಿಟ್ಟು ಬೇರೆ ಊರಿನ ಕೆಲಸಕ್ಕೆ ಸೇರಿಸೋದು. ನೀನೂ ಹೀಗೆ ಹಠ ಮಾಡಿದರೆ ಅವನು ಹೀಗೇ ಒಂಟಿಯಾಗಿ ನಿನ್ನಿಂದ ದೂರಾನೇ ಇದ್ದು ಬಿಡ್ತಾನೆ. ಅದು ನಿನಗೆ ಇಷ್ಟವೇನಮ್ಮಾ?"

"ಇರಲಿ ಬಿಡು. ಒಂಟಿಯಾಗಿ..... ಅವಳನ್ನು ಮದುವೆಯಾಗದಿದ್ರೆ ಸಾಕು"

"ಅಂತೂ ಪ್ರಕಾಶ ಖುಷಿಯಾಗಿರುವುದು ಬೇಡ ನಿನಗೆ"

"ಹಾಗೆಲ್ಲಿ ಹೇಳಿದೆ? ಮದುವೆಯಾದರೆ ಖುಷಿ ತಾನೇತಾನಾಗೇ ಬರುತ್ತೆ. ಎಲ್ಲಾ ಮರೆತು ಹೋಗುತ್ತೆ. ನನಗೇನು ಗೊತ್ತಿಲ್ವೆ?" ರಂಜಿನಿ ತಾಯಿಯ ಮುಖವನ್ನೇ ನೋಡಿದಳು. ಇವಳೂ ಇವಳ ಯೌವನದಲ್ಲಿ ಯಾರನ್ನಾದರೂ ಪ್ರೀತಿಸಿದ್ದು, ನಿರಾಸೆಯಿಂದ ಹೀಗೆ ಮಾತನಾಡುತ್ತಿರಬಹುದೇ ಅಂತನ್ನಿಸದೇ ಇರಲಿಲ್ಲ.

ಇಷ್ಟೆಲ್ಲಾ ಹಗರಣವಾಗಿದ್ದುದರಿಂದ ರಮಾ ಜಂಜಿನಿಯನ್ನು ಮಾತನಾಡಿಸಲು ಬಂದಿರಲಿಲ್ಲ. ರಂಜಿನಿ ತಾನೇ ಅವಳ ಮನೆಗೆ ಹೊರಟಾಗ, ತಾಯಿ ಬೇಡವೆಂದಿದ್ದಳು.

"ಅವಳ ದೆಸೆಯಿಂದ ಮನೆಯಲ್ಲಿ ಎಷ್ಟು ಗಲಾಟೆಯಾಗಿದೆ. ನೀನೇಕೆ ಅವಳ ಮನೆಗೆ ಹೋಗಬೇಕು?"

"ಮೊದಲು ಅವಳು ನನ್ನ ಸ್ನೇಹಿತೆ. ಅವಳು ನನ್ನ ಅತ್ತಿಗೆಯಾಗಲಿ ಬಿಡಲಿ ಅದು ಬೇರೆ ವಿಷಯ. ಪ್ರಕಾಶನಿಂದಲೂ, ಶ್ರೀಕಾಂತನಿಂದಲೂ ನಿನಗೆ ಸಾಕಷ್ಟು ಬೇಸರವಾಗಿದೆ. ಹಾಗಂತ ಅವರುಗಳ ಸಂಬಂಧ ತೊರೆದು ಹೋಗುತ್ತಾ?"

'ನೀವೆಲ್ಲಾ ನನಗೆ ಉಪದೇಶ ಮಾಡೋರೆ.' ಏನಾದ್ರೂ ಮಾಡ್ಕೋ, ಅವಳು ಕೊಟ್ಟದ್ದನ್ನು ತಿನ್ನಬೇಡ. ಕುಡಿಯಬೇಡ. ಸುಮ್ಮನೇ ಮಾತಾಡಿಕೊಂಡು ಬಾ.

"ರಮಾ ಅಷ್ಟು ಕೆಟ್ಟವಳಲ್ಲ. ನನಗೇನಾದರೂ ಕೇಡು ಮಾಡೊಕ್ಕೆ"

"ಯಾರ ಮನಸ್ಸಿನಲ್ಲಿ ಏನಿರುತ್ತೋ ನಮಗೆ ಹೇಗೆ ತಿಳಿಯುತ್ತೆ?"

ತಾಯಿಯ ಸಣ್ಣ ಬುದ್ದಿಗೆ ಅವಳಿಗೆ ವ್ಯಥೆಯಾಗಿತ್ತು. ತನಗೆ ಕಾಲಿನ ಮೂಳೆ ಮುರಿದಾಗ ಬಂದು ಎಷ್ಟು ಸಹಾಯ ಮಾಡಿದ್ದಾಳೆ. ಈ ಮನೆಯ ಸೊಸೆಯಾಗುವ ಆಸೆ ಪಟ್ಟ ಮಾತ್ರಕ್ಕೆ, ಅಮ್ಮ ಹೀಗೆಲ್ಲಾ ಆಡುವುದು ಸರಿಯಲ್ಲ. ಇಂಥಾ ಅತ್ತೆಯ ಸೊಸೆಯಾಗುವುದಕ್ಕಿಂತ, ಅವಳು ಹಾಗೇ ಇದ್ದರೂ ವಾಸಿ ಅಂತ ಅನ್ನಿಸದೇ ಇರಲಿಲ್ಲ.

ರಮಾ ಸ್ನೇಹಿತೆಯನ್ನು ಸಂತಸದಿಂದ ಸ್ವಾಗತಿಸಿ ಆದರಿಸಿದಳು. ರಂಜಿನಿ ಅವಳ ಓದು, ಪರೀಕ್ಷೆ ಕೆಲಸ ಇತ್ಯಾದಿಗಳ ಬಗ್ಗೆ ವಿಚಾರಿಸಿದಳು. ಎಂಳು.

ನಮ್ಮಮ್ಮ ಕೆಲಸಕ್ಕೆ ಹೋಗುವವರೆಗೆ ನನಗೆ ಯಾವ ಚಿಂತೆ ಇಲ್ಲ. ಆಮೇಲೆ ನೋಡೋಣ ಎಂದಳು.

"ಪ್ರಕಾಶನಿಂದ ಲೆಟರ್ ಏನಾದ್ರೂ ಬಂದಿತಾ?" ರಂಜನಿಯೇ ವಿಚಾರಿಸಿದಳು.

"ಇಲ್ಲ, ರಂಜನಿ, ಅವನೇಕೋ ಈಚೆಗೆ ಕಾಗದ ಬರೆಯುವುದನ್ನೇ ಬಿಟ್ಟು ಬಿಟ್ಟಿದಾನೆ"

"ಅಮ್ಮ ಹೇಳ್ತಾ ಇದ್ದಳು. ಮನೆಗೂ ಕಾಗದ ಬಂದಿಲ್ಲವಂತೆ. ನಿನಗೆ ಬಂದಿದೆಯೇನೋ ಅಂತ ಅಂದ್ಕೊಂಡೆ"

"ಯಾಕೋ ಏನೋ ಯಾವುದೂ ಸರಿ ಹೋಗಲಿಲ್ಲ. ನನ್ನಿಂದ ಎಲ್ಲರಿಗೂ ಬೇಸರ ಹೆಚ್ಚಾಯಿತು ಅಷ್ಟೇ"

"ಹಾಗ್ಯಾಕೇ ಅಂದ್ಕೋತೀಯಾ?" ಎಲ್ಲ ಸರಿ ಹೋಗಬಹುದು.

"ಏನು ಸರಿ ಹೋಗುತ್ತೋ..... ಶ್ರೀಕಾಂತ ಸಹಾಯ ಮಾಡ್ತೀನೀಂತ ಅಂದಿದ್ದಲೂ ಅವನೂ ಯಾಕೋ ಸುಮ್ಮನಾಗಿ ಬಿಟ್ಟದಾನೆ. ಯಾರಿಗೂ ಇಷ್ಟವಿಲ್ಲದೇ ನಾನು ಪ್ರಕಾಶನ್ನ ಹೇಗೆ ಮದುವೆಯಾಗಲಿ?"

"ನಿಮ್ಮ ತಾಯಿ ಏನಂತಾರೆ?"

"ಅವರುಗಳಿಗೆ ಇಷ್ಟವಿಲ್ಲದಿದ್ದ ಮೇಲೆ, ಬಲವಂತವಾಗಿ ಏನೂ ಮಾಡೊಕ್ಕೆ ಆಗೋಲ್ಲ. ಕೆಲಸಕ್ಕೆ ಸೇರಿಕೋ,. ನಿನ್ನ ಮದುವೆಯಾಗುವುದು ಕಷ್ಟವೇನಲ್ಲ ಅಂತಾರೆ. ಆದರೆ ಅದು ಸಾಧ್ಯಾನಾ? ಪ್ರಕಾಶ ಅಂತೂ ಬೇರೆ ಯಾರನ್ನೂ ಮದುವೆಯಾಗೋಲ್ಲವಂತೆ ನೋಡೋಣ. ನಾನೂ ಅವನಿಗೋಸ್ಕರ ಕಾಯ್ತೀನಿ. ನಾವು ಮುದುಕರಾದರೂ ಸರಿ" ವಿಷಾದದಿಂದ ರಮಾ ನಕ್ಕಾಗ ರಂಜನಿಗೆ ನಗಬೇಕೆನಿಸಲಿಲ್ಲ.

"ನೀನು ಮುಂಚಿನ ರಮಾನೇ ಅಲ್ಲ ಅಂತ ಅನ್ನಿಸ್ತಿದೆ. ನಾನು ಪ್ರಕಾಶಂಗೆ ಊರಿಗೆ ಬರೋಕೆ ಹೇಳಿದೀನಿ. ಅವನು ಬಂದಾಗ, ಹೇಗೂ ಅವನ ಮದುವೆ ಮಾತುಕತೆ ಬರುತ್ತೆ. ಆಗ ಅಮ್ಮನ್ನ ಒಪ್ಪಿಸೋಕೆ ಪ್ರಯತ್ನಪಡ್ತೀನಿ"

"ನನ್ನ ದೆಸೆಯಿಂದಾಗಿ ನೀವೆಲ್ಲಾ ನಿಮ್ಮ ತಾಯಿಯ ಮನಸ್ಸಿಗೆ ಬೇಸರವನ್ನುಂಟು ಮಾಡ್ತೀರಿ. ನನಗೆ ಅದೇ ಬೇಜಾರು"

"ಇಲ್ಲದಿದ್ದರೂ ಬೇಜಾರು ಏನೂ ಕಡಿಮೆ ಆಗೋಲ್ಲ"

"ರಂಜನಿ, ಮದುವೆಯಾದ ಮೇಲೆ ನೀನು ಎಷ್ಟು ಮಾತಾಡುವುದನ್ನು ಕಲಿತುಬಿಟ್ಟಿದೀಯ. ಹೋಗಲಿ ನಿನ್ನ ವಿಷಯ ಹೇಳು. ನೀನು ಸುಖವಾಗಿದೀಯ?

ನಿನಗೆ ಕಾಫಿ ಕೊಡಲೋ ಹಾಲು ಕೊಡಲೋ?"

ತಾಯಿ ಕೊಟ್ಟ ಎಚ್ಚರಿಕೆಯ ಮಾತುಗಳು ಅವಳಿಗೆ ನೆನಪಾದವು. ತಾನೇ ನಕ್ಕಳು.

"ಯಾಕೆ ನಗ್ತಿದೀಯಾ? ನಾನೇನು ತಪ್ಪು ಕೇಳಿದೆ?"

"ಏನಿಲ್ಲ, ನಿನಗೆ ಹೇಳೋ ಅಂಥಾದ್ದಲ್ಲ. ಕಾಫಿ ಹಾಲು ಯಾವುದಾದ್ರೂ ಸರಿ. ಜತೆಗೆ ತಿನ್ನೋಕೆ ಏನಾದ್ರೂ ಇದ್ದರೆ ಕೊಡು"

"ಬೆಳಿಗ್ಗೆ ಅಮ್ಮ ಅಕ್ಕಿ ರೊಟ್ಟಿ ಮಾಡಿದ್ದಳು. ಆರಿ ಹೋಗಿರುತ್ತೆ. ಬಿಸಿ ಮಾಡಿಕೊಡ್ತೀನಿ" ಎನ್ನುತ್ತಾ ಅಡಿಗೆ ಮನೆಗೇ ಸ್ನೇಹಿತೆಯನ್ನು ಕರೆದುಕೊಂಡು ಹೋದಳು.

ತಿಂಡಿ ತಿಂದು ಕಾಫಿ ಕುಡಿದು, ಅದೂ ಇದೂ ಮಾತನ್ನಾಡುವಷ್ಟರಲ್ಲಿ ರಮಳ ತಾಯಿಯೂ ಬಂದರು. "ಏನಮ್ಮಾ ಹೇಗಿದೀಯ" ಎಂದು ಆಕೆ ವಿಶ್ವಾಸದಿಂದ ಮಾತನಾಡಿಸಿದಾಗ, ತನ್ನ ತಾಯಿಗೂ ಈಕೆಗೂ ಎಷ್ಟು ಅಂತರ ಅಂತನ್ನಿಸದೇ ಇರಲಿಲ್ಲ. ಆಕೆ ರಂಜಿನಿಯೊಡನೆ ರಮಳ ಮದುವೆ ವಿಷಯವನ್ನು ಎತ್ತಲೆ ಇಲ್ಲ. ರಂಜಿನಿ ಹೊರಟಾಗ, ಅರಿಶಿನ ಕುಂಕುಮ ಹೂವು ಹಣ್ಣುಗಳೊಂದಿಗೆ ಹಸಿರು ಬಣ್ಣದ ರವಿಕೆ ಖಣವನ್ನಿತ್ತು ಆಶೀರ್ವದಿಸಿದಳು. ರಂಜಿನಿ ಭಾವುಕಳಾಗಿದ್ದಳು. ಸ್ನೇಹಿತೆ ಹೊರಟಾಗ, ಅವಳೊಂದಿಗೆ ಅಷ್ಟು ದೂರ ರಮಾಳೂ ಬಂದಳು.

"ನಾನು ಇಲ್ಲಿಂದ ಬಾಣಂತನ ಮುಗಿಸ್ಕೊಂಡು ಹೊರಡುವ ಮೊದಲು ನೀನು ನನ್ನ ಅತ್ತಿಗೆಯಾಗಿ ಬರುವಂತೆ ನಾನು ಮಾಡ್ತೀನಿ" ಎಂದು ಸ್ನೇಹಿತೆಗೆ ಆಶ್ವಾಸನೆಯಿತ್ತಾಗ ರಮಾ ನಿರಾಸೆಯಿಂದ ನುಡಿದಳು.

"ರಂಜಿನಿ, ನನಗೋಸ್ಕರ ನೀವ್ಯಾರೂ ಮನೇಲಿ ಪರಸ್ಪರ ಮನಸ್ತಾಪ ಮಾಡಿಕೋ ಬೇಡಿ. ನನ್ನ ಹಣೇ ಬರಹ ಹೇಗಿದೆಯೋ ಹಾಗಾಗುತ್ತೆ" ಅಂತ ಅಂದಿದ್ದಳು.

"ರಂಜಿನಿ, ತಾಯಿಗೆ ತಿಳಿಯದಂತೆ ಶ್ರೀಕಾಂತನೊಡನೆ ಮಾತನಾಡಿದಳು. ರಮಾ ಒಳ್ಳೇ ವಿರಾಗಿನಿ ತರಹ ಮಾತನಾಡ್ತಾಳೆ. ಅಲ್ಲಿ ಪ್ರಕಾಶ ಹೇಗಿದಾನೋ..... ಹೀಗೇ ಮುಂದುವರೆಯಬೇಕಾ? ಒಂದು ಕೊನೆ ಬೇಡ್ವಾ?"

"ನಾನೇನು ಮಾಡಲೇ? ಅಮ್ಮ ಒಪ್ಪಲಿಲ್ಲ. ಅಂತ ಪ್ರಕಾಶ ಈ ಊರನ್ನೇ ಬಿಟ್ಟುಹೋದ. ಅವನು ಇಲ್ಲೇ ಇದ್ದಿದ್ದರೆ ಏನಾದರೂ ಮಾಡಬಹುದಾಗಿತ್ತು"

"ನಾನು ಕಾಗದ ಬರಿದಿದೀನಿ ಅವನಿಗೆ.... ಮುಂದಿನ ವಾರದಲ್ಲಿ ಒಂದೆರಡು ದಿನ ರಜ ಹಾಕಿ ಬರ್ತಾನಂತೆ. ಆಗ ಮತ್ತೆ ಮಾತನ್ನಾಡಿ, ಒಂದು ನಿರ್ಧಾರ ಮಾಡಲೇಬೇಕು" 'ಹುಂ' ಹೌದು ಎನ್ನುವಂತೆ ಶ್ರೀಕಾಂತನೂ ತಲೆಯಾಡಿಸಿದ್ದ.

ಸೀಮಂತ ಸಮಾರಂಭಕ್ಕೆ ಒಂದೆರಡು ದಿನ ಮುಂಚಿತವಾಗಿ ಪ್ರಕಾಶ ಬಂದ. ತಾಯಿಗೆ ಅವನನ್ನು ನೋಡಿ ಸಂಕಟ ಹೆಚ್ಚಿತು. ಖಾಯಿಲೆಯಿಂದ ಎದ್ದವನಂತೆ ಬಳಲಿ ಹೋಗಿದ್ದ. ಆದರೂ ಏನೋ ಬಿಗುಮಾನ. ಅವನೇ, "ಏನಮ್ಮಾ ಚೆನ್ನಾಗಿದೀಯಾ?" ಎಂದು ಕೇಳಿದಾಗ ಅವಳ ದುಗುಡದ ಕಟ್ಟೆ ಒಡೆದಿತ್ತು.

"ಹೇಗಾಗಿದೀಯ ನೋಡು! ಸರಿಯಾಗಿ ಊಟ ತಿಂಡಿ ಸಹ ಮಾಡ್ತಿಯೋ ಇಲ್ಲವೋ. ಏನೋ ಸಾಧಿಸ್ತೀನೀಂತ ಈ ಊರನ್ನೇ ಬಿಟ್ಟು ಹೋದೆಯಲ್ಲಾ..... ನಮ್ಮಿಂದ ದೂರವಿದ್ದೂ ನೀನು ಖುಷಿಯಾಗಿಲ್ಲ"

"ಏನೋ ಸ್ವಲ್ಪ ಹುಶಾರಿರಲಿಲ್ಲ. ಒಂದೆರಡು ದಿನ ಮಲಗಿದ್ದೆ"

"ನೋಡಿದ್ಯಾ..... ಬೇರೆ ಊರು, ನೋಡೋರಿರೊಲ್ಲ ಮಾಡೋರಿರೊಲ್ಲ. ಸಾಕು ಆ ಊರಿನ ಸಹವಾಸ. ಈ ಊರಿನಲ್ಲೇ ಯಾವುದಾದ್ರೂ ಕೆಲಸಕ್ಕೆ ಸೇರಿಕೋ......"

ಅಷ್ಟರಲ್ಲಿ ತಂದೆ ಮಧ್ಯೆ ಪ್ರವೇಶಿಸಿದರು. "ಅವನಿನ್ನು ಈಗ ಊರಿಂದ ಬರ್ತಾ ಇದಾನೆ. ಶುರು ಮಾಡಿಬಿಟ್ಯಾ ನಿನ್ನ ವರಸೇನಾ? ಮೊದಲು ಕೈ ಕಾಲು ಮುಖ ತೊಳೀಲಿ. ಕಾಫಿ ಕುಡಿಯಲು ಕೊಡು. ನಿಧಾನವಾಗಿ ಮಾತಾಡಿದರಾಯ್ತು"

"ನನ್ನ ಮಕ್ಕಳ ಹತ್ತಿರ ಮಾತಾಡೋಕೂ ನಿಮ್ಮ ಅಡ್ಡಿ" ಎಂದು ಪಾರ್ವತಿ ಗೊಣಗುತ್ತಾ ಒಳಗೆ ನಡೆದಾಗ ಉಳಿದವರು ಮುಸಿ ಮುಸಿ ನಕ್ಕರು.

ಪ್ರಕಾಶ ಯಾರಿಗೂ ತಿಳಿಯದಂತೆ ರಮಾಳನ್ನು ಕಂಡು ಮಾತನಾಡಿಸಿಕೊಂಡು ಬಂದಿದ್ದ. ಅವಳಿಗೂ ಅವನಿಗೆ ಹುಶಾರಿರಲಿಲ್ಲವೆಂದು ತಿಳಿದಾಗ ವ್ಯಥೆಯಾಗಿತ್ತು.

"ನಾನು ಒಬ್ಬನೇ ಇರಲಾರೆ ರಮಾ..... ಆ ಊರಿನಿಂದ ಈ ಊರಿಗೆ ವರ್ಗಕ್ಕೆ ಪ್ರಯತ್ನ ಪಡ್ತಿದೀನಿ. ಸಿಕ್ಕಿದರೂ ಸಿಕ್ಕ ಬಹುದು"

"ಹಾಗೇ ಮಾಡು....." ಎಂದಳು. ಇಬ್ಬರೂ ತಮ್ಮಿಬ್ಬರ ಮದುವೆಯ ಪ್ರಸ್ತಾಪವನ್ನು ಎತ್ತಲು ಹೆದರಿದರು. ಆದರೂ ಏನೋ ದೂರದ ಆಸೆ.

ಸ್ವಲ್ಪ ಹೊತ್ತು ಅದೂ ಇದೂ ಮಾತನಾಡಿ, ಮಾರನೇ ದಿನ ಜರುಗಲಿರುವ ಸೀಮಂತ ಸಮಾರಂಭಕ್ಕೆ ಅವಳನ್ನು ಆಹ್ವಾನಿಸಿದ. ಅವಳು ಖುಷಿಯಿಂದ ಒಪ್ಪಿದಳು. ಎದುರಿಗೆ ಬಂದ ಶ್ರೀಕಾಂತನಿಗೆ, ಪ್ರಕಾಶನ ಗೆಲುವಿನ ಮುಖ ಕಂಡು, ಅವನು ರಮಳನ್ನು ಕಂಡು ಮಾತನಾಡಿಸಿ ಬಂದಿರುವನೆಂದು ಊಹಿಸಿದ. ಒಂದು ಗಳಿಗೆ ಸೂಜಿ ಚುಚ್ಚದಂತಾದರೂ, ಸಹಿಸಿಕೊಂಡ.

ಸೀಮಂತ ಸಮಾರಂಭ ಸರಳವಾಗಿ ಜರುಗಿತು. ರಂಜನಿಯ ಗಂಡ, ಅತ್ತೆ ಮಾವ ಬಂದಿದ್ದರು. ಪಾರ್ವತಿಗೆ ಅವರುಗಳನ್ನು ಉಪಚರಿಸುವುದರಲ್ಲೇ ಸಮಯ ಕಳೆಯಿತು. ಸಾಯಂಕಾಲದ ಆರತಕ್ಷತೆಗೆ ಪರಿಚಯದವರನ್ನೆಲ್ಲಾ ಆಹ್ವಾನಿಸಿದ್ದರು. ರಮಳೂ ಸಂಕೋಚದಿಂದ ಬಂದಿದ್ದಳು. ಎಲ್ಲರ ಕುತೂಹಲದ ಕಣ್ಣು ಅವಳ ಕಡೆಗೆ. ತಾಯಿಯ ಕಿಡಿಕಣ್ಣುಗಳು ಅವಳನ್ನು ತಾಗಿದವು. ಪ್ರಕಾಶ ಅವಳೊಡನೆ ನಗು ನಗುತ್ತಾ ಮಾತನಾಡುತ್ತಿರುವುದನ್ನು ಕಂಡು, ಅವಳ ಸಿಟ್ಟು ಅಧಿಕವಾಗಿತ್ತು. ಆದರೂ ಸಹಿಸಿಕೊಂಡಳು.

ಅದೇ ರಾತ್ರಿ ಬೀಗರೂ ಹೊರಟು ಹೋಗಿದ್ದರು. ರಂಜನಿ ಆಯಾಸದಿಂದ ಮಲಗಿದ್ದಳು. ಗಂಡನೂ ಊರಿಗೆ ಹೊರಟು ಹೋದದ್ದು ಅವಳಿಗೆ ಬೇಸರವಾಗಿತ್ತು. ಅಲ್ಲದೇ ರಮಾ ಬಂದದ್ದು ತಾಯಿಗೆ ಸಹನೆಯಾಗಿಲ್ಲವೆನ್ನುವುದನ್ನು ಗಮನಿಸಿದ್ದಳು. ತಾಯಿಯ ಗೊಣಗಾಟ ಮತ್ತೆ ಪ್ರಾರಂಭವಾಗಿತ್ತು.

"ನಾಚಿಕೆ ಇಲ್ಲದ ಹುಡುಗಿ.... ಮತ್ತೆ ಯಾವ ಹೊಸ ಆಸೆ ಇಟ್ಟುಕೊಂಡು ಬಂದಳೋ. ಅವಳು ಬಂದದ್ದೇ ಸಾಕು ಅನ್ನುವಂತೆ ಇವನು ಏನು ನಗುನಗುತ್ತಾ ಮಾತಾಡ್ತಿದ್ದ.....?"

ತಂದೆ ಕೇಳುತ್ತಿದ್ದರು "ಯಾರ ವಿಚಾರ ಮಾತನಾಡ್ತಿದೀಯ?"

"ಇನ್ಯಾರು? ರಮ.... ಅವಳನ್ನು ಯಾರು ಕರೆದಿದ್ದರೋಃ, ಅಥವಾ ಕರೆದೇ ಇರಲಿಲ್ಲವೋ..... ಬರೋಕೆ ಒಂದು ನೆವ ಬೇಕಾಗಿತ್ತು ಅವಳಿಗೆ"

"ಹೀಗೆಲ್ಲಾ ಮಾತನಾಡಬೇಡಮ್ಮಾ. ರಂಜಿನಿ ಕರೆದಿದ್ದರಿಂದಲೇ ರಮಾ ಬಂದಿದ್ದಳು" ಶ್ರೀಕಾಂತ ಅವಳ ಪರ ವಹಿಸಿ ಮಾತನಾಡಿದ.

"ಆದರೂ ಮರ್ಯಾದೆ ಬೇಡವಾ? ನಾನು ಅವತ್ತೇ ಅವರ ತಾಯಿಯ ಹತ್ತಿರ ಮಾತನಾಡಿದ ಮೇಲೇ ತಿಳಿದು ಕೊಳ್ಳ ಬೇಕಾಗಿತ್ತು"

"ಆ ಮಾತಿಗೂ, ರಂಜನಿಯ ಸ್ನೇಹಕ್ಕೂ ಎಲ್ಲಿಗೆಲ್ಲಿಗೆ ಸಂಬಂಧ? ಏನೇನೋ ಮಾತನಾಡ್ತೀಯ...... ಅತಿಯಾಯ್ತು ನಿಂದು" ಶ್ರೀಕಾಂತ ರೇಗಿದ್ದ.

"ರಂಜಿನಿಯ ಸ್ನೇಹಿತೆ ಅಂತ. ಅದೇ ಸ್ನೇಹದಿಂದ ಮತ್ತೆ ಪದೇ ಪದೇ

ಬರಲಿ...... ಆಮೇಲೆ ಏನೇನಾಗುತ್ತೋ......?"

"ಏನಾಗುತ್ತೆ? ನಾನೇ ಈ ಊರಿನಲ್ಲಿಲ್ಲವಲ್ಲ" ಪ್ರಕಾಶನೂ ರೇಗಿದ್ದ.

"ಚೆನ್ನಾಗಿದೆ. ಎಲ್ಲರೂ ನನ್ನ ಮೇಲೆ ರೇಗೋರೆ. ನನಗೇನಂತೆ ನೀವು ಮೂರು ಜನವೂ ಅವಳನ್ನು ನಮ್ಮ ಮನೆಗೆ ಕರೆದುಕೊಂಡು ಬಂದು ಇಟ್ಟುಕೊಳ್ಳಿ" ಪಾರ್ವತಿ ನುಡಿದಾಗ ಪ್ರಕಾಶ ಮತ್ತೆ ನುಡಿದ.

"ಇದೆಲ್ಲಾ ನಡೆಯದ ಮಾತು. ಒಂದು ಹತ್ತು ನಿಮಿಷ ಅವಳು ಬಂದದ್ದಕ್ಕೇ ನಿನಗೆ ಸಹಿಸಲಿಲ್ಲ. ಇನ್ನು ಅವಳು ಇಲ್ಲಿ ಬಂದಿದ್ದರೆ ಖಂಡಿತಾ ನಿನಗೆ ಸರಿ ಹೋಗೋಲ್ಲ. ಅದಕ್ಕೇ ನಾನೊಂದು ತೀರ್ಮಾನಕ್ಕೆ ಬಂದಿದೀನಿ"

'ಆಂ' ಎಂದು ಎಲ್ಲರೂ ಅವನ ಕಡೆ ನೋಡಿದರು.

"ನನಗೆ ಇದೇ ಊರಿಗೆ ವರ್ಗವಾಗುತ್ತೆ. ಆದರೆ ನಾನು ಬೇರೆ ಮನೆ ಮಾಡಿಕೊಂಡು ಇರ್ತೀನಿ. ಅಲ್ಲಿಗೆ ಆಗ ಈಗ ರಮಾ ಸ್ನೇಹಿತೆಯಂತೆ ಬರ್ತಾಳೆ. ಆಗ ನೀನು ಆಕ್ಷೇಪಣೆ ಮಾಡುವಂತೆಯೇ ಇಲ್ಲ"

ಇದ್ದಕ್ಕಿದ್ದಂತೆ ತಾಯಿ ಮೌನವಾದಾಗ, ಎಲ್ಲರಿಗೂ ಗಾಬರಿ ಯಾದಂತಾಯ್ತು. ಪ್ರಕಾಶ, ಶ್ರೀಕಾಂತನ ಕಡೆ ನೋಡಿದ. ಶ್ರೀಕಾಂತನಿಗೆ ಸಮಾಧಾನವಾಗಿತ್ತು. ಅಂತೂ ತಾನೇ ಒಂದು ನಿರ್ಧಾರ ತೆಗೆದುಕೊಂಡನಲ್ಲ. ಶ್ರೀಕಾಂತನ ಮುಖದ ಮೇಲಿನ ಮುಗುಳ್ನಗೆ ಪ್ರಕಾಶನಿಗೆ ಉತ್ತೇಜನ ನೀಡಿತ್ತು. ರಂಜಿನಿಯೂ ಹೊರಗೆ ಬಂದು ಸೇರಿಕೊಂಡಿದ್ದಳು. ಅವಳೂ ಖುಷಿಗೊಂಡಿದ್ದಳು.

ಮಾರನೇ ದಿನವೇ ಪ್ರಕಾಶ ಊರಿಗೆ ಹೊರಟುನಿಂತ. "ಮಗು ಹುಟ್ಟಿದ ಮೇಲೆ ಮತ್ತೆ ಬರ್ತೀನಿ" ಎಂದು ತಂಗಿಗೆ ವಿಶ್ ಮಾಡಿದ. ತಾಯಿ ಮುಖ ಊದಿಸಿಕೊಂಡಿದ್ದರೂ, ತಾನೇ ಮಾತನಾಡಿ, ಬರ್ತೀನಿ ಎಂದು ಎಲ್ಲರಿಗೂ ತಿಳಿಸಿ, ಹೊರಟ.

ಶ್ರೀಕಾಂತ ಅವನನ್ನು ಬಸ್ ಸ್ಟ್ಯಾಂಡಿಗೆ ಬಿಟ್ಟು ಬರಲು ಹೊರಟ. ದಾರಿಯಲ್ಲಿ ಇಬ್ಬರೂ, ರಮಳ ಮನೆಯ ಮುಂದೆ ಎರಡು ನಿಮಿಷ ನಿಂತಿದ್ದು, ಅವಳೊಡನೆ ಮಾತನಾಡಿ ಮುಂದೆ ನಡೆದರು.

ಪ್ರಕಾಶನ ಮಾತಿನಿಂದ ಪಾರ್ವತಿಯ ಆತಂಕ ಹೆಚ್ಚಾಗಿತ್ತು. ಒಂದೆರಡು ದಿನಗಳು ಕಳೆದ ನಂತರ ಶಾಸ್ತ್ರಿಗಳ ಮನೆಗೆ ಮತ್ತೆ ಹೋಗಿದ್ದಳು. ಅವರೊಡನೆ ಮಾತನಾಡಿ ಬಂದ ನಂತರ ಅವಳ ಮುಖದ ಗೆಲವು ಹೊರಟುಹೋಗಿತ್ತು.

ಶಾಸ್ತ್ರಿಗಳೊಡನೆ ಪ್ರಕಾಶನ ನಿರ್ಣಯವನ್ನು ತಿಳಿಸಿ, ಹೇಗಾದರೂ ಈ ಮದುವೆ ತಪ್ಪುವಂತೆ ಮಾಡಿ, ಅದಕ್ಕೋಸ್ಕರ ಯಾವುದೇ ತಂತ್ರ ಮಂತ್ರಗಳಾದರೂ

ಸರಿ ಹೇಳಿ ಅಂತ ಕೇಳಿದಾಗ, ಆತ ನಕ್ಕು ನುಡಿದಿದ್ದರು..

"ಮಕ್ಕಳ ಮದುವೆ ಮಾಡುವುದು, ಮಕ್ಕಳು ಸುಖವಾಗಿ ಸಂಸಾರ ಮಾಡಿಕೊಂಡಿರಲಿ ಅಂತ. ನೀವೀಗ ಈ ಮದುವೆ ತಪ್ಪಿಸೋಕೆ ನೋಡ್ತಿದೀರಿ. ಅದು ಯಾವ ನ್ಯಾಯ? ಒಂದು ವೇಳೆ ನಿಮ್ಮ ಬಲವಂತಕ್ಕೆ ನಿಮ್ಮ ಮಗ ಬೇರೆ ಮದುವೆಗೆ ಒಪ್ಪಿಕೊಂಡರೂ, ಅವನು ಸುಖವಾಗಿರುವುದಿಲ್ಲ. ತನ್ನ ಹೆಂಡತಿಯನ್ನು ಅಸುಖಿಯನ್ನಾಗಿ ಮಾಡ್ತಾನೆ. ಪರರ ಮನೆಯ ಹುಡುಗಿಯನ್ನು ಕರೆತಂದು, ಆ ಹುಡುಗಿಯ ಜೀವಮಾನವನ್ನು ಹಾಳು ಮಾಡುವ ಬದಲು ಈ ಮದುವೆಗೆ ನೀವು ಒಪ್ಪಿದರೆ ಇಬ್ಬರೂ ಸುಖವಾಗಿರ್ತಾರೆ."

"ನಿಮ್ಮ ಮಕ್ಕಳು ಸದ್ಗುಣವಂತರು. ಇಲ್ಲದಿದ್ದರೆ, ನಿಮಗೆ ತಿಳಿಯದಂತೆ ರಿಜಿಸ್ಟರ್ಡ್ ಮದುವೆಯಾಗಿದ್ದರೆ ಏನು ಮಾಡ್ತಿದ್ರಿ?"

"ಏನು ಶಾಸ್ತ್ರಿಗಳೇ, ನೀವೂ ಹೀಗೆ ಮಾತನಾಡಿ ಹೆದರಿಸ್ತೀದೀರಲ್ಲ"

"ಕಾಲ ಬದಲಾಗಿದೆ. ಜನಸಂಖ್ಯೆ ಹೆಚ್ಚಾಗಿದೆ. ಹುಡುಗ ಹುಡುಗಿಯರು ಒಟ್ಟಿಗೆ ಸ್ಕೂಲು ಕಾಲೇಜುಗಳಿಗೆ ಹೋಗ್ತಾರೆ. ಮನಬಿಚ್ಚಿ ಮಾತನಾಡ್ತಾರೆ. ಅದಕ್ಕೆಲ್ಲಾ ಅವಕಾಶ ಮಾಡಿಕೊಟ್ಟವರು ನಾವು. ಹಿರಿಯರೇ ತಾನೇ..... ಮಕ್ಕಳಿಗೆ ಪೂರ್ಣ ಸ್ವಾತಂತ್ರ್ಯವಿದೆ. ಕಾನೂನೂ ಅದನ್ನು ಅಂಗೀಕರಿಸುತ್ತದೆ. ನೀವು ಈಗ ಇದನ್ನು ಒಪ್ಪುವುದರಿಂದ ನಿಮ್ಮ ಹಿರಿಮೆ ಹೆಚ್ಚುತ್ತದೆ"

"ಹಿರಿಮೆಯ ಮಾತಿರಲಿ, ನನಗಿಷ್ಟವಿಲ್ಲದ ಹುಡುಗಿ ನನ್ನ ಸೊಸೆಯಾಗಿ ಬಂದರೆ..... ನಾವು ಒಟ್ಟಿಗೇ ಇರುವುದೇ ಕಷ್ಟವಾಗುತ್ತಲ್ಲ ಶಾಸ್ತ್ರಿಗಳೇ......"

"ಯಾವುದೇ ಸೊಸೆ ಬಂದರೂ ಅತ್ತೆ ತನ್ನ ಸ್ಥಾನದಿಂದ ಕೆಳಗಿಳಿಯುವುದಿಲ್ಲ. ಅತ್ತೆ ಅತ್ತೇನೇ, ಸೊಸೆ ಸೊಸೇನೇ. ಹೌದೋ ಅಲ್ಲವೋ" ಆತ ನಗುತ್ತಾ ನುಡಿದಾಗ ಅವಳಿಗೆ ಮುಜುಗರವಾಗಿತ್ತು.

"ನಿಮಗೆ ವರದಕ್ಷಿಣೆ ಆಸೆ ಇಲ್ಲ ಅಂತೀರಿ. ಶ್ರೀಮಂತ ನೆಂಟಸ್ಥಿಕೆ ಬೇಕಿಲ್ಲ ಅಂತೀರಿ. ಹುಡುಗಿ ಗುಣವಂತೆಯಾಗಿದ್ದರೆ ಸಾಕು ಅಂತೀರಿ. ಹಾಗಿರುವಾಗ ಯಾರೋ ಪರಿಚಯವಿಲ್ಲದವರ ನೆಂಟಸ್ಥಿಕೆ ಮಾಡುವ ಬದಲು ಮೊದಲಿನಿಂದ ಕಂಡು ಕೇಳಿದ ಹುಡುಗಿ ನಿಮಗೆ ತಕ್ಕ ಸೊಸೆಯಾಗುತ್ತಾಳೆ. ಯಾವ ಸಂಶಯವೂ ಇಲ್ಲದೇ ಮದುವೆ ಮಾಡಿ. ನಿಮ್ಮ ಮಗ ಖಂಡಿತಾ ಸುಖವಾಗಿರುತ್ತಾನೆ. ಶುಭಸ್ಯ ಶೀಘ್ರಂ"

"ಅಂತೂ ಕಡೆಗೂ ನೀವೂ ಹೀಗೇ ಅಪ್ಪಣೆ ಕೊಡಿಸಿ ಬಿಟ್ರಾ?"

"ಒಂದು ಹುಡುಗಿಯ ಮದುವೆಯಾಗುವುದನ್ನು ತಪ್ಪಿಸುವ ಮೂರ್ಖ

ಕೆಲಸ ಮಾಡಲಾರೆ. ಹುಡುಗಿ ಬೇರೆ ಜಾತಿಯವಳಾಗಿದ್ದಿದ್ದರೆ, ನಿಮ್ಮ ಮಗನನ್ನು ಕರೆಸಿ ಬುದ್ಧಿ ಹೇಳುತ್ತಿದ್ದೆನೇನೋ...... ಈಗ ಆ ಸಮಸ್ಯೆಯೂ ಇಲ್ಲ. ಹುಡುಗಿ ನಿಮ್ಮ ಜಾತಿಯವಳೇ ಅಂತ ಹೇಳ್ತೀರಿ. ಇನ್ನು ಯಾವ ದೋಷವೂ ನನಗೆ ಕಾಣುವುದಿಲ್ಲ. ಆದುದರಿಂದ ಆದಷ್ಟು ಬೇಗ ಮಂಗಳ ಕಾರ್ಯವನ್ನು ಮುಗಿಸಿಬಿಡಿ. ಇಲ್ಲದಿದ್ದರೆ ಏನಾದರೂ ಅನಾಹುತವಾದೀತು"

ಶಾಸ್ತ್ರಿಗಳ ಮಾತು ಆಕೆಗೆ ಹಿತವೆನಿಸದಿದ್ದರೂ, ಅಂಜಿಕೆಯೂ ಉಂಟಾಗಿತ್ತು. ತಾಯಿಯ ಅನ್ಯಮನಸ್ಕತೆಯನ್ನು ಗಮನಿಸಿದ ರಂಜಿನಿ ಕೇಳಿದ್ದಳು.

"ಯಾಕಮ್ಮಾ ಹೀಗಿದೀಯ? ಶಾಸ್ತ್ರಿಗಳು ಏನಂದರು?"

"ನಾನು ಸೋತೆ ಕಣೇ ರಂಜಿನಿ......."

"ಯಾವ ವಿಷಯ ಹೇಳ್ತಾ ಇದೀಯ?"

"ಅಂತೂ ಇಷ್ಟವಿಲ್ಲದಿದ್ದರೂ, ರಮನ್ನ ನನ್ನ ಸೊಸೆಯಾಗಿ ಮಾಡಿಕೊಳ್ಳುವ ಸ್ಥಿತಿ ನನಗೆ ಬಂತು. ನನ್ನ ಸೋಲಲ್ಲದೇ ಮತ್ತೇನು?"

"ಅಂದ್ರೇ..... ನೀನು ರಮಾ–ಪ್ರಕಾಶರ ಮದುವೆಗೆ ಒಪ್ಪಿದೆಯಾ" ರಂಜಿನಿ ಸಂತಸದಿಂದ ಕೇಳಿದಾಗ ಪಾರ್ವತಿ ಉತ್ತರಿಸಲಿಲ್ಲ. ಅವಳ ಮೌನವೇ ಸಮ್ಮತಿ ಎಂದುಕೊಂಡು, ರಂಜಿನಿ ತಾನೇ ಪ್ರಕಾಶನಿಗೆ ಕಾಗದ ಬರೆದಳು. ವಿಷಯ ತಿಳಿದ ಶ್ರೀಕಾಂತ ರಮಳಿಗೆ ಸಂತಸದ ವಿಷಯವನ್ನು ತಿಳಿಸಿದ. ಮುಕು ಕವಿದಂತಿದ್ದ ಮನೆಯಲ್ಲಿ, ಮತ್ತೆ ಲವಲವಿಕೆಯ ಕಳೆ ಕಂಡು ಬಂತು. ತಕ್ಷಣವೇ ಪ್ರಕಾಶ ಊರಿಗೆ ಬಂದಿದ್ದ. ರಮ ತನ್ನ ತಾಯಿಯೊಡನೆ ಬದಿದ್ದಳು. ಆಕೆ ಸಂದೇಹದಿಂದಲೇ ಮಾತನ್ನು ಪ್ರಾರಂಭಿಸಿದಾಗ ಪಾರ್ವತಿ ವೇದಾಂತ ಆಡಿದಳು.

"ಋಣಾನುಬಂಧ ಇದ್ದರೆ ನೋಡಿ, ಹೀಗೇ ಬೇಡ ಬೇಡ ಅಂತ ಅದ್ರೂ ನಡೆಯೋದು ನಡೆಯುತ್ತೆ" ಅವಳು ಈ ಮಾತನ್ನು ಆಡದಿದ್ದರೆ ಚನ್ನಾಗಿತ್ತು ಅಂತ ಎಲ್ಲರಿಗೂ ಅನ್ನಿಸಿತ್ತು. ಕಡೆಗೂ ರಮಾ ಪ್ರಕಾಶರ ಮದುವೆ ನಿಶ್ಚಯವಾಗಿತ್ತು.

ರಮಾ ನಿಜಕ್ಕೂ ಒಳ್ಳೆಯ ಹುಡುಗಿ. ಮನದ ದುಗುಡಗಳನ್ನೆಲ್ಲ ಮರೆತು ರಮಾ ಪಾರ್ವತಿಗೆ ನಮಸ್ಕರಿಸಿದಳು. ಶ್ರೀಕಾಂತ ಕಣ್ಣಲ್ಲೇ ಅವಳನ್ನು ಅಭಿನಂದಿಸಿದ. ಅವಳ ಕಣ್ಣುಗಳು ಹನಿಗೂಡಿದ್ದವು. ಆ ದಿನ ಖುಷಿಯಿಂದ, ಕೃತಜ್ಞತೆಯಿಂದ ಕಣ್ಣುಗಳು ನೀರಾಡಿದ್ದವು. ಈ ದಿನ ವಿರಾಗಿಯಂತೆ ಜೀವಿಸುತ್ತಿದ್ದಾಳೆ. ವಿಶೂಗಾಗಿ ಬದುಕುತ್ತಿದ್ದಾಳೆ. ಪಾಪ ಅವಳ ಅಂತರಂಗದಲ್ಲಿ

ಎಷ್ಟು ನೋವು ಇರಬಹುದು ಅಂತ ಅಂದುಕೊಂಡಾಗ ಶ್ರೀಕಾಂತನ ಕಣ್ಣುಗಳು ಮಂಜಾಗಿದ್ದವು.

* * * *

ಫೋನು ರಿಂಗಾಯಿತು. ಎದ್ದು ಬಂದು ರಿಸೀವರ್ ಎತ್ತಿ 'ಹಲೋ' ಎಂದ. ಆ ಕಡೆಯಿಂದ ಮಹೇಶ ಫೋನ್ ಮಾಡಿದ್ದ.

"ವಿಷಯ ತಿಳೀತಾ ಶ್ರೀಕಾಂತ? ಪೊಲಿಸ್ನೋರು ಒಂದೆರಡು ಲೇಡೀಸ್ ಹಾಸ್ಟೆಲ್ಲುಗಳನ್ನು ರೈಡ್ ಮಾಡಿದ್ರಂತೆ. ಅದರಲ್ಲಿ ಅದೇ ಅವತ್ತು ನಾವು ಹೋಗಿದ್ದೆವಲ್ಲ ಆ ಹಾಸ್ಟೆಲ್ಲಿನ ಹೆಸರೂ ಇದೆಯಂತೆ"

"ನಿನಗ್ಯಾರು ಹೇಳಿದರು?"

"ಯಾರೋ ಒಂದಿಬ್ಬರು ಹುಡುಗರು, ಹುಡುಗಿಯರು, ಅರ್ಜೆಂಟಾಗಿ ಫೋಟೋ ತೆಗೆಸಬೇಕು ಅಂತ ಸ್ಟೂಡಿಯೋಗೆ ಬಂದಿದ್ರು. ಈ ವಿಷಯಾನ ಮಾತಾಡಿಕೊಳ್ಳುತ್ತಿದ್ದರು"

"ಯಾವ ಪೊಲೀಸ್ ಸ್ಟೇಷನ್‌ನವರು ಅಂತ ತಿಳೀತಾ?"

"ಅಲ್ಲೇ ಆ ಹಾಸ್ಟೆಲ್ಲು ಇರುವ ಏರಿಯಾದ್ದೇ ಇರಬೇಕು..... ಯಾಕೆ ರೈಡ್ ಮಾಡಿರಬಹುದು ಅಂತ?"

"ಇನ್ಯಾಕೆ? ಹುಡುಗೀರ ಹಾಸ್ಟೆಲ್ಲು ಬಾಯ್‌ಫ್ರೆಂಡ್ಸ್ ಅದೂ ಇದು ಅಂತ ಗಲಾಟೆ ಇರಬಹುದು ಅಥವಾ ಡ್ರಗ್ಸ್ ಬಿಸಿನೆಸ್ ಇರಬಹುದು. ನನಗೆ ಅವತ್ತೇ ಅನ್ನಿಸಿತು ಕಚಡಾ ಹಾಸ್ಟೆಲ್ಲು ಅಂತ"

"ಅಂಥಾ ಹಾಸ್ಟೆಲ್ಲಿನಲ್ಲಿ ಆ ಹುಡುಗಿ ಇದಾಳೆ ಅಂತ ಅವರ ತಂದೆ ತಿಳಿದರೆ ಇವತ್ತೇ ಗೊಟಕ್"

"ಬರ್ತೀಯಾ ಹೋಗಿ ವಿಚಾರಿಸೋಣ" ಶ್ರೀಕಾಂತ ಕೇಳಿದ.

"ನಾವೂ ಸಿಕ್ಕಿಬಿದ್ದರೇ...... ಪೊಲೀಸ್ನೋರ ಸಹವಾಸ ಕಷ್ಟ"

"ಹಾಗಂತ, ಆ ಹುಡುಗಿ ಕಷ್ಟದಲ್ಲಿ ಸಿಕ್ಕಿಬಿದ್ದಿದಾಳೆ ಅಂತ ತಿಳಿದರೂ ಸಹಾಯ ಮಾಡದಿರುವುದು ತಪ್ಪಾಗುತ್ತೆ. ಸುಮ್ಮನೇ ಹೋಗಿ ನೋಡೋಣ. ಸುಳ್ಳೋ, ನಿಜವೋ, ಮೊದಲು ಗೊತ್ತಾಗಲಿ"

ಆ ಹಾಸ್ಟೆಲ್ಲಿನ ಸಮೀಪದ ಪೊಲೀಸ್ ಸ್ಟೇಷನ್‌ಗೆ ಇಬ್ಬರೂ ಬಂದರು. ಯಾರೂ ಹುಡುಗಿಯರು ಇದ್ದಂತೆ ಕಾಣಿಸಲಿಲ್ಲ. ಶ್ರೀಕಾಂತನಿಗೆ ಆಶ್ಚರ್ಯವಾಯಿತು. ಇಬ್ಬರೂ ಪೊಲೀಸ್ ಇನ್‌ಸ್ಪೆಕ್ಟರನ್ನು ಕಂಡು ಮಾತಾಡಿದರು.

ಇಬ್ಬರೂ ತಮ್ಮ ಪರಿಚಯವನ್ನು ಹೇಳಿಕೊಂಡು, ತಾವು ಕೇಳಿದ

ವಿಷಯವನ್ನು ಕುರಿತು ಪ್ರಶ್ನಿಸಿದರು. ಆ ಪೊಲೀಸ್ ಇನ್‌ಸ್ಪೆಕ್ಟರ್ ನಕ್ಕ.

"ಅದೆಲ್ಲಾ ನಡೆದು ವಾರದ ಮೇಲಾಯಿತು. ಈಗ ಬಂದು ವಿಚಾರಿಸುತ್ತಿದೀರಲ್ಲ. ನೀವು ಯಾರು? ನಿಮ್ಮ ಪೈಕಿ ಯಾರಾದ್ರೂ ಹುಡುಗಿಯರು ಇದ್ರಾ?"

ಶ್ರೀಕಾಂತ ಎಲ್ಲಾ ವಿಷಯವನ್ನು ತಿಳಿಸಿದ. "ವಸುಧಾ ಅಂತ ಆ ಹುಡುಗಿ ಹೆಸರು. ಅವಳ ತಂದೆಗೆ ಹುಷಾರಿಲ್ಲ ಅಂತ ತಿಳಿಸಲು ಹೋಗಿದ್ದೆವು. ವಾರ್ಡನ್ ಸರಿಯಾದ ಮಾಹಿತಿ ಕೊಡಲಿಲ್ಲ. ಅನುಮಾನ ಬಂತು. ಈಗ ನೋಡಿದ್ರೆ ಹೀಗೆ ಅಂತ ತಿಳೀತು. ನಿಜವಾಗಿ ನಡೆದದ್ದೇನು?"

"ಓದೋಕೆ ಅಂತ ಬೇರೆ ಬೇರೆ ಊರಿನಿಂದ ಬರುವ ಕೆಲವು ಹುಡುಗಿಯರು, ಮಜಾ ಮಾಡೋಕೆ ಶುರು ಮಾಡಿ ಬಿಡ್ತಾರೆ. ತಂದೆ, ತಾಯಿ ಮಕ್ಕಳು ಓದಿ ವಿದ್ಯಾವಂತರಾಗಲಿ ಅಂತ ಕಷ್ಟಪಟ್ಟು ದುಡಿದು ಹಣವನ್ನು ಕಳಿಸ್ತಾರೆ. ಇಲ್ಲಿ ನೋಡಿದರೆ ಓದು, ಕಾಲೇಜೂ ಯಾವುದೂ ಬೇಡ. ಅಂತಹ ಹುಡುಗಿಯರು, ಮೊದಲು ಬಾಯ್ ಫ್ರೆಂಡ್ಸ್‌ಗಳನ್ನು ಆರಿಸಿಕೊಂಡು, ಹೋಟೆಲ್ಲು, ಸಿನಿಮಾ ಅಂತ ತಿರುಗ್ತಾರೆ. ಕ್ರಮೇಣ ಕೆಟ್ಟ ಚಟಗಳಿಗೆ ಬಲಿಯಾಗ್ತಾರೆ. ಈಚೆಗಂತೂ ಮಾದಕ ದ್ರವ್ಯ ಸೇವನೆಯ ಚಟ ಎಷ್ಟೋ ಜನ ಯುವಕ ಯುವತಿಯರ ಬಾಳನ್ನೇ ಹಾಳು ಮಾಡುತ್ತಿದೆ. ಅಂತ ದುರ್ವ್ಯವಹಾರ ಈ ಹಾಸ್ಟೆಲ್ಲಿನಲ್ಲಿ ನಡೀತಿದೆ ಅಂತ ನಮಗೆ ಫೋನ್‌ಕಾಲ್ ಬಂತು. ಹೋಗಿ ರೈಡ್ ಮಾಡಿದೆವು ಅಷ್ಟೆ."

ಪೊಲೀಸ್ ಭಾಷೆಯಲ್ಲಿ ಎಷ್ಟು ಸುಲಭವಾಗಿ ಹೇಳುತ್ತಿದಾನೆ ಈ ಇನ್‌ಸ್ಪೆಕ್ಟರ್ ಅಂತ ಅಂದುಕೊಂಡರು ಗೆಳೆಯರು.

"ನಾವು ಅಲ್ಲೇ ಎಲ್ಲಾ ಹುಡುಗಿಯರನ್ನು ಎನ್‌ಕ್ವೈರಿ ಮಾಡಿದೆವು. ನಮಗೆ ಅನುಮಾನ ಬಂದ ಹುಡುಗಿಯರ ವಿಳಾಸವನ್ನು ತೆಗೆದುಕೊಂಡು ಅವರ ಪೇರೆಂಟ್ಸ್‌ಗೆ ತಿಳಿಸಿದೆವು. ಒಂದಿಬ್ಬರು ಹುಡುಗಿಯರು ಮಾತನಾಡಲು ಇಷ್ಟಪಡಲಿಲ್ಲ. ಅಂತಹವರನ್ನು ತಕ್ಷಣವೇ ಸರ್ಕಾರಿ ಆಸ್ಪತ್ರೆಗೆ ಸೇರಿಸಿದೆವು. ಈಗ ಆ ಹಾಸ್ಟೆಲ್ಲಿನಲ್ಲಿ ಯಾವ ಹುಡುಗಿಯರೂ ಇಲ್ಲ. ಅಲ್ಲಿಯ ಸ್ಟಾಫ್‌ನವರನ್ನೆಲ್ಲಾ ಅರೆಸ್ಟ್ ಮಾಡಿದೆವು. ಕೇಸ್ ನಡೆಯುತ್ತಿದೆ"

"ಆಸ್ಪತ್ರೆಗೆ ಸೇರಿಸಿರುವ ಹುಡುಗಿಯರ ಹೆಸರನ್ನು ತಿಳಿಸ್ತೀರಾ?"

"ತಿಳಿಸಬಹುದು. ಆದರೆ ನೀವ್ಯಾರು ಅಂತ ನಮಗೆ ಸರಿಯಾಗಿ ಗೊತ್ತಿಲ್ಲವಲ್ಲ"

"ನಾವಿಬ್ಬರೂ ಯಾವುದಾದರೂ ಏಜೆಂಟ್ ಇರಬಹುದು ಎನ್ನುವ

ನಿಮ್ಮ ಅನುಮಾನ ಸಹಜ. ಆದರೆ ಇದುವರೆಗೂ ನಾವು ಹೇಳಿದ್ದೆಲ್ಲಾ ನಿಜ" ನಿಮಗೆ ನಂಬಿಕೆ ಆಗದಿದ್ದರೆ ನಮ್ಮ ಜತೆಗೆ ಪೊಲಿಸ್ನೋರನ್ನು ಕಳಿಸಬಹುದು.

ಈ ಕೆಲಸವಲ್ಲಾ ಅಷ್ಟು ಸುಲಭವಲ್ಲ. ಆದರೂ ಆ ಹುಡುಗಿಯರ ಭವಿಷ್ಯ ಹಾಳಾಗಬಾರದು. ಎನ್ನೋ ದೃಷ್ಟಿಯಿಂದ ಹೇಳ್ತೀದೀನಿ. ನೀವು ಸರ್ಕಾರಿ ಆಸ್ಪತ್ರೆಗೆ ಹೋಗಿ ಮುಖ್ಯಸ್ಥರಿಗೆ ನಾನು ಕಳಿಸಿದೆ ಅಂತ ಹೇಳಿ, ನಾನು ಅವರಿಗೆ ಫೋನ್ ಮಾಡ್ತೀನಿ. ಇಷ್ಟರ ಮೇಲೆ ಏನಾದ್ರೂ ಎಡವಟ್ಟಾದರೆ ಅದಕ್ಕೆ ನೀವೇ ಜವಾಬ್ದಾರರು. ಆಗ ನಿಮ್ಮನ್ನು ಒಳಗೆ ಹಾಕಿಸಬೇಕಾಗುತ್ತದೆ ಇನ್‌ಸ್ಪೆಕ್ಟರನ ವಾರ್ನಿಂಗ್ ಕರ್ಕಶವಾಗಿತ್ತೆನಿಸಿತು. ಇಬ್ಬರೂ ಮತ್ತೆ ಕೈ ಮುಗಿದು ಅಲ್ಲಿಂದ ಹೊರಬಂದರು. ಮಹೇಶ ಬೆವತು ಹೋಗಿದ್ದ. ಶ್ರೀಕಾಂತ ಗಂಭೀರನಾಗಿದ್ದ.

"ಇದೇನೋ ಎಲ್ಲಿಂದ ಎಲ್ಲಿಗೋ ಹೋಗ್ತಿದೆಯಲ್ಲಾ, ಆಮೇಲೆ ನಮ್ಮ ತಲೆಗೇ ಬಂದರೇ?"

"ಇನ್‌ಸ್ಪೆಕ್ಟರ್ ಒಳ್ಳೆಯವನ ತರಹ ಕಾಣ್ತಾನೆ. ಇಲ್ಲದಿದ್ದರೆ ನಮ್ಮನ್ನು ಕಸ್ಟಡಿಗೆ ತಗೋತ್ತಿದ್ದ"

"ಸರ್ಕಾರಿ ಆಸ್ಪತ್ರೇಲಿ ನಿನಗೆ ಯಾರಾದ್ರೂ ಪರಿಚಯದವರಿದಾರಾ?"

"ನನಗಾ? ಯಾಕೆ?"

ಪರಿಚಯದವರಿದ್ದರೆ ವಾಸಿ, ಇಲ್ಲದಿದ್ದರೆ, ಪೇಶೆಂಟ್ ತೋರಿಸೋಕೆ ದುಡ್ಡು ಕೇಳಿದರೆ..... ಮೊದಲೇ ಸಾಕಷ್ಟು ಖರ್ಚಾಗಿದೆ.

"ದುಡ್ಡು ಕಾಸು ಕೇಳಿದರೆ, ಮೇಲಿನ ತನಕ ಹೋಗೋಣ. ಪೊಲೀಸ್ ಇನ್‌ಸ್ಪೆಕ್ಟರಿಗೆ ಹೇಳಿದ್ರಾಯ್ತು. ನೀನ್ಯಾಕೆ ಇಷ್ಟು ಹೆದರ್ತೀಯಾ?"

"ನನ್ನ ಹೆಂಡತಿ ತವರಿಗೆ ಹೋಗಿದ್ದಾಳೆ. ಸಧ್ಯದಲ್ಲೇ ತಂದೆಯಾಗಲಿದೀನಿ. ನನಗೆ ಜೈಲು ಅಂದ್ರೆ ಹೆದರಿಕೆ"

"ಏನು ನಿನ್ನ ಮಾತಿನ ಅರ್ಥ? ನನಗಾಗಿ ಕಾದು ನಿಂತಿರುವ ಹೆಂಡತಿ ಇಲ್ಲದಿರಬಹುದು. ಆದರೆ ನನಗೂ ಮನೆಯಲ್ಲಿ ಕಾಯುವವರಿದಾರೆ. ನನಗೂ ಜೈಲು ಅಂದರೆ ಹೆದರಿಕೆ. ಆಸ್ಪತ್ರೆ ಅಂದರೆ ಇನ್ನೂ ಹೆದರಿಕೆ"

"ಹಾಗಾದ್ರೆ ಈ ತಂಟೇನೇ ಬೇಡ. ಸುಮ್ಮನಾಗಿಬಿಡೋಣ"

"ಈಗ ಸುಮ್ಮನಾದ್ರೆ ಆ ಇನ್‌ಸ್ಪೆಕ್ಟರ್ ಖಂಡಿತಾ ನಮ್ಮನ್ನು ಹುಡುಕಿಕೊಂಡು ಬರ್ತಾನೆ....." ಇಬ್ಬರೂ ಆಸ್ಪತ್ರೆಯ ಕಡೆ ತಿರುಗಿದರು.

ಆಸ್ಪತ್ರೆಯ ಆವರಣದಲ್ಲಿ ಅನೇಕರು ಅಲ್ಲಲ್ಲಿ ನಿಂತು, ಕೂತು ಮಾತನಾಡುತ್ತಿದ್ದರು. ಬಹುಶಃ ಒಳಗೆ ಅಡ್ಮಿಟ್ ಆಗಿರುವ ರೋಗಿಗಳ ಕಡೆಯವರಿರಬೇಕು. ಶ್ರೀಕಾಂತನಲ್ಲಿ ಒಂದು ರೀತಿಯ ಗಂಭೀರತೆ ಆವರಿಸಿಕೊಂಡಿತು. ರೋಗಿಗಳು ಒಳಗೆ ನರಳುತ್ತಿದ್ದರೆ, ಹೊರಗೆ ಆತಂಕದಿಂದ ಒದ್ದಾಡುತ್ತಿರುವವರ ನೋವು ಇನ್ನೂ ಹೆಚ್ಚು ಅದರಲ್ಲೂ ಸರಕಾರಿ ಆಸ್ಪತ್ರೆಗಳಲ್ಲಿ ಎಂತೆಂತಹ ಕೇಸುಗಳೋ ಬಂದಿರುತ್ತವೆ.

"ವಿಚಾರಣೆ" ಎಂದು ಬರೆದಿದ್ದ ಫಲಕದಡಿಯಲ್ಲಿ ಕೂತಿದ್ದ ಆಸಾಮಿಯನ್ನು ವಿಚಾರಿಸಿದ. ಮೊದಲಿಗೆ ಅವನು ಸರಿಯಾಗಿ ಹೇಳಲಿಲ್ಲ. ಅಲ್ಲಿ ಕಾರಿಡಾರಿನಲ್ಲಿ ಓಡಾಡುತ್ತಿದ್ದ ಜೂನಿಯರ್ ಡಾಕ್ಟರ್ಸನ್ನು ಕಂಡು ಅವರುಗಳ ಹಿಂದೆ ಓಡಿದ. ಅವರಿನ್ನು ಆ ವೃತ್ತಿಗೆ ಹೊಸಬರು. ಶ್ರೀಕಾಂತನ ಮಾತನ್ನು ಆಸಕ್ತಿಯಿಂದ ಆಲಿಸಿ, ಯಾರನ್ನು ಎಲ್ಲಿ ವಿಚಾರಿಸಬೇಕೆಂದು ತಿಳಿಸಿದರು. ಇಬ್ಬರೂ ಅವರುಗಳಿಗೆ ಥ್ಯಾಂಕ್ಸ್ ಹೇಳಿ ಹುಡುಕುತ್ತಾ ಅಲ್ಲಿ ಇಲ್ಲಿ ಅಲೆದಾಡಿದರು. ಕಡೆಗೂ ಅವರು ಕೇಳಿದ ಡಾಕ್ಟರ್ಸ್ ಸಿಕ್ಕಿದರು. ಇವರಿಬ್ಬರ ಮಾತನ್ನು ನಿರ್ಲಿಪ್ತತೆಯಿಂದ ಕೇಳಿಸಿಕೊಂಡು, ಜನರಲ್ ವಾರ್ಡ್ ಕಡೆ ಕೈ ಮಾಡಿ ತೋರಿದರು.

ಜನರಲ್ ವಾರ್ಡ್‌ನಲ್ಲಿ ಎಷ್ಟೋ ರೋಗಿಗಳಿರುತ್ತಾರೆ. ಅವರುಗಳ ಮಧ್ಯೆ ಆ ಹುಡುಗಿಯರು ಯಾರು ಎಂದು ತಿಳಿಯುವುದು ಹೇಗೆ? ಅವರ ಪರಿಚಯವಿಲ್ಲ. ಹೆಸರು ಸಹ ಗೊತ್ತಿಲ್ಲ. ಶ್ರೀಕಾಂತನಿನ್ನು ಅನುಮಾನಿಸುತ್ತಿರುವಾಗ, ಮಹೇಶ ಅಲ್ಲಿದ್ದ ನರ್ಸನ್ನು ವಿಚಾರಿಸಿದ. ಅವಳು ಮೇಲಿನಿಂದ ಕೆಳಗೆ ಅವನನ್ನೇ ನೋಡಿ, "ಯಾರ್ರೀ ನೀವು?" ಎಂದು ಗದರಿದಾಗ ಅವನು ಹೆದರಿದ. ಶ್ರೀಕಾಂತ ಅವನ ನೆರವಿಗೆ ಬಂದ.

ಪೊಲೀಸ್ ಇನ್‌ಸ್ಪೆಕ್ಟರನ ಹೆಸರನ್ನು ತಿಳಿಸಿ, ಅವರೇ ಕಳಿಸಿದ್ದಾರೆಂದು ಹೇಳಿದ ಮೇಲೆ ಅವಳು ಸುಮ್ಮನಾದಳು.

"ವಸುಧಾ ಅಂತ ನಮ್ಮ ಕಡೆಯ ಹುಡುಗಿ. ನಾವು ಅವಳನ್ನು ನೋಡಬೇಕಲ್ಲಾ ಯಾವ ಬೆಡ್‌ನಲ್ಲಿದಾಳೆ?"

"ಬನ್ನಿ...... ಎನ್ನುತ್ತಾ" ಅವಳು ಮುಂದೆ ಮುಂದೆ ನಡೆದು, ಒಂದು ಮಂಚದ ಬಳಿ ನಿಂತಳು.

"ನೋಡಿ. ಇದೇ ಆ ಹುಡುಗಿ...... " ಎಂದು ಕೈ ಮಾಡಿ ತೋರಿಸಿದಳು. ಇಬ್ಬರೂ ಆ ಕಡೆ ನೋಡಿದರು. ಇದೆ ಮೊದಲ ಸಲ ಅವಳನ್ನು ನೋಡುತ್ತಿರುವುದು. ಅವಳನ್ನು ವಸುಧಾ ಅಂತ ಗುರುತಿಸುವುದಾದರೂ

ಹೇಗೆ?

"ಈಗ ಹೇಗಿದಾಳೆ?" ಸುಮ್ಮನೇ ಎಂಬಂತೆ ಕೇಳಿದ ಶ್ರೀಕಾಂತ.

"ಅಯ್ಯೋ..... ಇಂಥಾ ಹುಡುಗೀರೆಲ್ಲಾ ಬೇಗ ವಾಸಿಯಾಗ್ತಾರಾ? ಕಲಿತ ಕೆಟ್ಟ ಚಾಳೀನ ಸುಲಭವಾಗಿ ಬಿಟ್ಟು ಬಿಡ್ತಾರಾ?" ಮಹೇಶ ಅವಳ ಮಾತಿಗೆ ಹೆದರಿ ಅತ್ತಿತ್ತ ನೋಡಿದ. ಎಲ್ಲರೂ ಅವರಿಬ್ಬರನ್ನೇ ನೋಡುತ್ತಿರುವಂತೆ ಅನ್ನಿಸಿತು. ಶ್ರೀಕಾಂತನ ತೋಳನ್ನು ಹಿಡಿದ.

"ಮೊದಲು ಇಲ್ಲಿಂದ ಹೊರಗೆ ಹೋಗೋಣ ನಡೀ"

"ಯಾಕೆ?"

"ಹೊರಗೆ ಮಾತನಾಡೋಣ. ಇಲ್ಲಿ ಮಾತಾಡುವುದು ಬೇಡ" ಶ್ರೀಕಾಂತ ಮತ್ತೊಮ್ಮೆ ಮಲಗಿ ನಿದ್ರಿಸುತ್ತಿದ್ದ ವಸುಧಾಳ ಮುಖವನ್ನು ನೋಡಿದ. ಏನೋ ಒಂದು ರೀತಿಯ ಜಿಗುಪ್ಸೆ ಅವನನ್ನು ಆವರಿಸಿಕೊಂಡಿತು. ಅತ್ತ ಇತ್ತ ನೋಡದೇ ಇಬ್ಬರೂ ವಾರ್ಡಿನಿಂದ ಹೊರಬಂದರು.

ಇದ್ದಕ್ಕಿದ್ದಂತೆ ಏನನ್ನೋ ನಿರ್ಧರಿಸಿದವನಂತೆ, ಶ್ರೀಕಾಂತ ಅಲ್ಲಿಯ ಮುಖ್ಯಸ್ಥರೊಡನೆ ಮಾತನಾಡಿ, ವಸುಧಾಳನ್ನು ಡಿಸ್‌ಚಾರ್ಜ್ ಮಾಡುವಂತೆ ಕೇಳಿದ. ಅವರು ತಕ್ಷಣಕ್ಕೆ ಒಪ್ಪಲಿಲ್ಲ. ಪೊಲೀಸ್ ಇನ್‌ಸ್ಪೆಕ್ಟರರ ಪರ್ಮಿಷನ್ ಬೇಕು ಅಂತ ತಿಳಿಸಿದರು.

ಒಂದೆರಡು ಗಂಟೆಗಳ ಕಾಲ ಓಡಾಡಿ, ಮೇಲಧಿಕಾರಿಗಳನ್ನು ನೋಡಿ, ಪೊಲೀಸ್ ಇನ್‌ಸ್ಪೆಕ್ಟರನ್ನು ಕರೆಸಿ, ಅವರುಗಳ ಎದುರಿಗೆ ಬಿಲ್ ಇತ್ಯಾದಿಗಳನ್ನು ಸೆಟಲ್ ಮಾಡಿ, ಅಂತೂ ಕಡೆಗೆ ವಸುಧಾಳನ್ನು ಡಸ್‌ಚಾರ್ಜ್ ಮಾಡಿಸಿ, ಅವಳನ್ನು ಬೇರೆ ಒಂದು ನರ್ಸಿಂಗ್ ಹೋಂಗೆ ಸೇರಿಸಿದ. ತಾನು ಏನೋ ಮಹತ್ಸಾಧನೆ ಮಾಡಿದ ಅನುಭವವಾಗಿತ್ತು. ಸುಧಾಕರರಾಯರಿಗೆ ತಿಳಿಸದೇ ಅವರ ಆದೇಶವಿಲ್ಲದೇ ಇದನ್ನೆಲ್ಲ ಮಾಡಲು ತನಗೇನೂ ಅಧಿಕಾರವಿರಲಿಲ್ಲ ಅಂತನ್ನಿಸಿದರೂ, ಒಂದು ಹುಡುಗಿಯನ್ನು ರಕ್ಷಿಸುತ್ತಿದ್ದೇನೆ ಎಂಬ ಸಮಾಧಾನವುಂಟಾಗಿತ್ತು. ಮಹೇಶನ ಕೈ ಕುಲುಕಿ ಥ್ಯಾಂಕ್ಸ್ ಹೇಳಿದ.

"ಇಷ್ಟಾಯಿತು. ಇನ್ನು ಮುಂದೆ ನರ್ಸಿಂಗ್ ಹೋಂನ ಖರ್ಚಿಗೆಲ್ಲ ಏನು ಮಾಡ್ತೀಯಾ?" ಮಹೇಶ ಕೇಳಿದಾಗ ಅವನಿಗೂ ಚಿಂತೆಯಾಗಿತ್ತು. ಆದರೂ ನುಡಿದ.

"ಇನ್ನು ನಾನು ಎಲ್ಲಾ ವಿಷಯವನ್ನು ಸುಧಾಕರರಾಯರಿಗೆ ತಿಳಿಸಲೇಬೇಕು. ನರ್ಸಿಂಗ್ ಹೋಂನಿಂದ ಅವಳು ತನ್ನ ಮನೆಗೆ ಹೋಗಲೇಬೇಕು. ಮಗಳ

ಶುಶ್ರೂಷೆಯ ಖರ್ಚನ್ನು ತಂದೆಯಾಗಿ ಅವರೇ ಕೊಡಬೇಕು. ಅವರಿಗೆ ಅಷ್ಟು ತಿಳಿಯದಿದ್ದರೆ ಹೇಗೆ?"

ಆ ನರ್ಸಿಂಗ್ ಹೋಂನ ಡಾಕ್ಟರು ಅವನಿಗೆ ಪರಿಚಿತರು. ಅವರೊಡನೆ ಅಷ್ಟು ವಿಷಯವನ್ನು ಹೇಳಿ, ಅವಳಿಗೆ ಸರಿಯಾಗಿ ಚಿಕಿತ್ಸೆ ಕೊಡಬೇಕೆಂದು ಕೇಳಿಕೊಂಡ.

ಆತ ನಕ್ಕರು. "ಈ ಕಾಲದಲ್ಲಿ ಒಂದೇ ಮನೆಯವರು, ಒಬ್ಬರಿಗೊಬ್ಬರು ನೆರವಾಗುವುದೇ ಅಪರೂಪ. ಅಂಥಾದ್ದರಲ್ಲಿ ಆತ ಯಾರೋ, ಆತನನ್ನು ಬದುಕಿಸಿದಿರಿ. ಇನ್ನು ಈ ಹುಡುಗಿ, ಮಾದಕ ದ್ರವ್ಯ ವ್ಯಸನಿಯೋ, ಮಾನಸಿಕ ಸ್ಥಿತಿ ಸರಿ ಇಲ್ಲದವಳೋ, ಅವಳನ್ನು ಉದ್ಧಾರ ಮಾಡಲು ಹೊರಟಿದ್ದೀರಿ. ನಿಮ್ಮ ಬಗ್ಗೆ ಮರುಕಪಡಬೇಕೋ, ಶಾಭಾಸ್‌ಗಿರಿ ಹೇಳಬೇಕೋ ನನಗೆ ತಿಳಿಯುತ್ತಿಲ್ಲ" ಅಂತಂದರು.

"ನಾನು ತಂದೆ, ತಾಯಿ, ಅಣ್ಣ ತಂಗಿ ಕಸಿನ್ಸ್, ಅಜ್ಜಿ, ತಾತ ಇವರುಗಳ ಜತೆ ಬೆಳೆದವನು. ಎಷ್ಟೋ ತರಹದ ಅನುಭವಗಳು ನನಗಾಗಿದೆ. ಈ ಹುಡುಗಿ ತಾಯಿ ಇಲ್ಲದವಳು. ತಂದೆ ಇದ್ದೂ ಅನಾಥಳಂತೆ, ಯಾವುದೋ ಹಾಸ್ಟೆಲ್ಲಿನಲ್ಲಿದ್ದವಳು. ತಂದೆಯಂತೆಯೇ ಮಗಳೂ ಹಠಮಾರಿ. ತಂದೆಗೆ ಅನಾರೋಗ್ಯ ಅಂತ ಮಗಳಿಗೆ ಗೊತ್ತಿಲ್ಲ. ಮಗಳು ಇಂತಹ ಸ್ಥಿತಿಯಲ್ಲಿ ಆಸ್ಪತ್ರೇಲಿದಾಳೆ ಅಂತ ಆ ತಂದೆಗೆ ಗೊತ್ತಿಲ್ಲ. ಈ ವಿಚಿತ್ರ ಸನ್ನಿವೇಶಕ್ಕೆ ಏನನ್ನಬೇಕೋ ತಿಳಿಯದು. ಆ ಅಡುಗೆಯ ಹೆಂಗಸು, ಅವರ ಮಗಳೊಬ್ಬಳಿರುವ ವಿಷಯ ತಿಳಿಸದೇ ಇದ್ದಿದ್ದರೆ ಈ ಹುಡುಗಿಯ ಗತಿ ಏನಾಗುತ್ತಿತ್ತೋ ನನಗೆ ತಿಳಿಯದು. ಆಕೆ ಸಹಾಯ ಕೇಳಿದಾಗ, ನನ್ನಿಂದ ಇಲ್ಲವೆನ್ನಲಾಗಲಿಲ್ಲ. ಆತ ನನ್ನ ಮೆಡಿಕಲ್ ಸ್ಟೋರ್ಸ್ ಮುಂದೆ ಕುಸಿದು ಬಿದ್ದಿದ್ದಾಗ ಸುಮ್ಮನೇ ಇರಲು ನನ್ನಿಂದಾಗಲಿಲ್ಲ. ಇದಕ್ಕೆ ನೀವು ಯಾವ ಅರ್ಥ ಕಲ್ಪಿಸುತ್ತೀರೋ..... ನನಗೆ ತಿಳಿಯದು. ಜನರ ಜೀವ ಉಳಿಸುವ ಔಷಧಿಗಳನ್ನು ಮಾರುವವ ನಾನು. ಆದ್ದರಿಂದಲೇ, ಎರಡು ಜೀವಿಗಳಿಗೆ ಅವರ ಅಪಾಯದ ಕಾಲದಲ್ಲಿ ಸಹಾಯ ಮಾಡುವ ಪ್ರೇರಣೆ ನನ್ನಲ್ಲಿ ಆಗಿರಬೇಕು. ಇದು ದೇವರ ಕೃಪೆ, ಅಷ್ಟೆ."

"ನೀನು ಹೇಳಿದ್ದು ಸರಿ. ಆದರೆ ನಿನ್ನ ಆದರ್ಶಗಳನ್ನು ವಿರೋಧಿಸುವವರೂ, ಹಂಗಿಸುವವರೂ ಇರುತ್ತಾರೆ. ಹುಶಾರಾಗಿರಬೇಕಪ್ಪ"

"ನನ್ನ ಜತೆಗೆ ನನ್ನ ಸ್ನೇಹಿತ ಮಹೇಶನಿದ್ದಾನೆ. ನನಗೆ ಯಾವ ಭಯವೂ

ಇಲ್ಲ" ಎಂದ ಮಹೇಶನ ಕಡೆ ತಿರುಗಿ ನೋಡಿ ಮುಗುಳ್ನಗುತ್ತಾ.

"ಒಂದು ವಾರದೊಳಗೆ, ಆ ಹುಡುಗಿ ಸ್ವಲ್ಪ ಗೆಲುವಾಗ್ತಾಳೆ. ನೀವು ಆಗಾಗ ಬಂದು ವಿಚಾರಿಸಿಕೊಂಡು ಹೋಗಿ. ಹುಡುಗಿಗೂ ಧೈರ್ಯ ಬರುತ್ತೆ"

ಡಾಕ್ಟರಿಗೆ ಕೈ ಮುಗಿದು, ಥ್ಯಾಂಕ್ಸ್ ಹೇಳಿ ಇಬ್ಬರೂ ಹೊರಬಂದರು. "ಅಬ್ಬಾ! ಅಂತೂ ಒಂದು ಪ್ರಾಬ್ಲಂ ಸಾಲ್ವ್‌ಆಯ್ತು" ಎಂದ ಮಹೇಶ.

"ಇನ್ನೊಂದೆರೆಡು ದಿನಗಳ ನಂತರ ಆ ಹುಡುಗಿಯ ಹತ್ತಿರ ಮಾತನಾಡ್ತೀನಿ. ಆದಷ್ಟು ಬೇಗ ಅವಳನ್ನು ಅವಳ ಮನೆ ತಲುಪಿಸಿಬಿಟ್ಟರೆ ಎಲ್ಲಾ ಪ್ರಾಬ್ಲಂ ಸಾಲ್ವ್ ಅಂತಿಟ್ಕೋ......"

ಆ ದಿನವೆಲ್ಲಾ ಅವರು ಪೊಲಿಸ್ ಸ್ಟೇಷನ್, ಆಸ್ಪತ್ರೆ ನರ್ಸಿಂಗ್‌ಹೊಂ ಅಂತ ಓಡಾಡಿದ್ದರು. ಈಗ ಇಬ್ಬರಿಗೂ ಹಸಿವು ಕಾಣಿಸಿಕೊಂಡಿತು. ಸಮೀಪದಲ್ಲಿದ್ದ ಹೋಟೆಲ್ಲಿಗೆ ಹೊ47ಗಿ ಹೊಟ್ಟೆ ತುಂಬಿಸಿ ಕೊಂಡರು.

ಊಟದ ಹೊತ್ತಾದರೂ ಮಗ ಮನೆಗೆ ಬರದಿದ್ದಾಗ, ಪಾರ್ವತಿ ಗಾಬರಿ, ಆತಂಕಗಳಿಂದ ಕಂಗೆಟ್ಟಿದ್ದಳು. ಎಂದೂ ಹೀಗೆ ಮಾಡಿದವನಲ್ಲ. ಎಲ್ಲಿಗೆ ಹೋಗಿರಬಹುದು? ಅಂಗಡಿಯ ಫೋನು ರಿಂಗಾರುತ್ತಿದ್ದರೂ ಯಾರೂ ಎತ್ತಿರಲಿಲ್ಲ. ಮಹೇಶನೂ ಬಂದಿಲ್ಲವೆಂದು ಸ್ಟುಡಿಯೋದಲ್ಲಿ ಹೇಳಿದರು.

"ದೇವರೇ ಏನಾಯ್ತಪ್ಪಾ ಅವನಿಗೆ....... ಸುರಕ್ಷಿತವಾಗಿ ಮನೆಗೆ ಬಂದು ಸೇರಲಿ" ದೇವರಲ್ಲಿ ಪ್ರಾರ್ಥಿಸಿದಳು.

ಕೆಲಸದಿಂದ ಬಂದ ರಮಾ ಅತ್ತೆಯ ಆತಂಕವನ್ನು ಗಮನಿಸಿದಳು. ಆದರೆ ಏನೆಂದು ಕೇಳುವ ಧೈರ್ಯ ಅವಳಲ್ಲೂ ಇರಲಿಲ್ಲ.

ಅತ್ತೆ, ವಿಶೂನ ಸುತ್ತಾಡಿಸಿಕೊಂಡು ಬರ್ತೀನಿ ಅಂತ ಅವಳು ಹೊರಟಾಗ, "ಬೇಡ ಕಣೇ..... ನನಗ್ಯಾಕೋ ಭಯವಾಗ್ತಿದೆ. ಶ್ರೀಕಾಂತ ಮಧ್ಯಾಹ್ನ ಊಟಕ್ಕೂ ಬರಲಿಲ್ಲ ಫೋನೂ ಮಾಡಲಿಲ್ಲ. ಇವರು ಅಂಗಡಿಯ ಕಡೆ ಹೋಗಿ ನೋಡ್ತಿನಿ ಅಂತ ಹೋದವರು ಇನ್ನೂ ಬಂದಿಲ್ಲ"

ಅವಳ ಎದೆಯೂ ಢವಢವ ಹೊಡೆದುಕೊಂಡಿತು. ಮಗನನ್ನು ಬಿಗಿಯಾಗಿ ತಬ್ಬಿಕೊಂಡಳು. ಅಷ್ಟರಲ್ಲಿ ಫೋನು ರಿಂಗಾಗಿತ್ತು. ಇಬ್ಬರೂ ಮುಖ ಮುಖ ನೋಡಿಕೊಂಡರು. ಅತ್ತೆಯ ಕೈಗೆ ಮಗುವನ್ನು ಕೊಟ್ಟು ಅವಳು ಒಳಗೆ ಓಡಿದಳು, ರಿಸೀವರ್ ಎತ್ತಿದಳು. ಆ ಕಡೆಯಿಂದ ಶ್ರೀಕಾಂತ ಮಾತನಾಡಿದ್ದ.

"ಅಬ್ಬಾ ನೀನಾ?" ಎಂದಳು ಹಣೆಯ ಬೆವರನ್ನು ಒರೆಸಿಕೊಳ್ಳುತ್ತಾ.

"ಎಲ್ಲಿಗೆ ಹೋಗಿದ್ದೆ. ಊಟಕ್ಕೂ ಬರಲಿಲ್ಲವಂತೆ. ಎಲ್ಲರಿಗೂ ಎಷ್ಟು

ಆತಂಕವಾಗಿದೆ ಗೊತ್ತಾ?"

"ಏನಾಯ್ತು ಅಂತ ಮನೇಗೆ ಬಂದು ತಿಳಿಸ್ತೀನಿ"

"ಏನಾಯ್ತು ನಿನಗೆ? ಎಲ್ಲಿದೀಯ ಈಗ?" ಗಾಬರಿಯಿಂದ ಕೇಳಿದಳು.

"ನನಗೇನಾಗಿಲ್ಲ. ಅಂಗಡೀಲಿದೀನಿ. ಸ್ವಲ್ಪ ಲೇಟಾಗಬಹುದು. ಅದಕ್ಕೆ ತಿಳಿಸ್ತಿದೀನಿ. ಅಪ್ಪ ಬಂದು ಹೇಳಿದ ಮೇಲೇ ನನಗೆ ಮನೆಯ ನೆನಪಾದದ್ದು"

"ನಾನ್ಸೆನ್ಸ್..... ಹೀಗೆಲ್ಲಾ ಹೆದರಿಸಬೇಡ ಶ್ರೀಕಾಂತ..... ಎಲ್ಲರಿಗೂ ಎಷ್ಟು ಭಯವಾಗಿತ್ತು. ಅಮ್ಮಾ ಅಂತೂ ಗೇಟಿನಲ್ಲೇ ನಿಂತಿದಾರೆ"

"ಸಾರಿ ರಮಾ..... ನಾನು ಬೇಕೂಂತ ಹೀಗೆ ಮಾಡಲಿಲ್ಲ. ಎಲ್ಲಾ ಮನೆಗೆ ಬಂದ ಮೇಲೆ ಹೇಳ್ತೀನಿ. ಅಮ್ಮನಿಗೆ ಏನೂ ಹೇಳಬೇಡ. ಗಿರಾಕಿಗಳು ಕಾಯ್ತಾ ಇದಾರೆ, ಫೋನು ಇಡ್ತೀನಿ. ನಾನೂ ಅಪ್ಪ ಒಟ್ಟಿಗೇ ಬರ್ತೀವಿ. ಹಾಗಾಂತ ಹೇಳಿಬಿಡು" ಎನ್ನುತ್ತಾ ಫೋನು ಇಟ್ಟ.

ಶ್ರೀಕಾಂತ ಫೋನು ಮಾಡಿದ್ದ ಎಂದು ತಿಳಿದ ಮೇಲೆ ಪಾರ್ವತಿಯ ಆತಂಕ ಕಡಿಮೆಯಾಗಿತ್ತು. ಸಮಾಧಾನದ ನಿಟ್ಟುಸಿರನ್ನು ಬಿಟ್ಟಳು.

"ಯಾಕೋ ಈ ನಡುವೆ ಭಯವೇ ಜಾಸ್ತಿ. ಏನನ್ನು ತಡೆಯೋ ಶಕ್ತಿಯೇ ಇಲ್ಲ" ತನಗೆ ತಾನೇ ಹೇಳಿಕೊಂಡಳು.

"ಮೊದಲು ಮಗೂಗೆ ಊಟ ಮಾಡಿಸು. ನೀನು ಊಟ ಮಾಡು"

"ಅಮ್ಮ, ಮೊದಲು ನೀವು ಊಟ ಮಾಡಿ ರೆಸ್ಟ್‌ತಗೊಳ್ಳಿ. ನಾನು ಅವರಿಬ್ಬರಿಗೆ ಬಡಿಸ್ತೀನಿ. ನೀವು ಮಧ್ಯಾಹ್ನವೂ ಊಟ ಮಾಡಿಲ್ಲವೇನೋ...."

"ಪರವಾಗಿಲ್ಲ, ನಾನು ಅವನ ಹತ್ತಿರ ಸ್ವಲ್ಪ ಮಾತನ್ನಾಡಬೇಕು. ತಾಯಿ ಎಂದರೆ ಸದರ ಅವನಿಗೆ. ಜವಾಬ್ದಾರಿ ಬೇಡವಾ ಅವನಿಗೆ?"

ಅತ್ತೆ ಶ್ರೀಕಾಂತನಿಗೆ ಏನು ಬುದ್ಧಿ ಹೇಳುತ್ತಾರೆ ಎನ್ನುವುದು ರಮಳಿಗೆ ಗೊತ್ತು. ಶ್ರೀಕಾಂತ ಏನು ಉತ್ತರ ಕೊಡುತ್ತಾನೆ ಎನ್ನುವುದೂ ಅವಳಿಗೆ ತಿಳಿದದ್ದೇ.

"ಬಾರೋ ರಾಜಾ ಮಮ್ಮ ಮಾಡೂವಂತೆ" ಎನ್ನುತ್ತಾ ಅತ್ತೆಯ ಕೈನಿಂದ ಮಗುವನ್ನೆತ್ತಿಕೊಂಡು ಅಡಿಗೆ ಮನೆಗೆ ಕಡೆ ನಡೆದಳು. ರಮಳ ಬೆನ್ನ ಮೇಲೆ ಇಳಿಬಿದ್ದಿದ್ದ ಜಡೆಯನ್ನು ನೋಡಿ, ಅವಳಿಗೆ ದುಃಖವುಕ್ಕಿತ್ತು.

* * * *

ಸ್ಕೂಟರ್ ನಿಂತ ಸದ್ದು ಕೇಳಿದ ಕೂಡಲೇ ವಿಶೂ ಕೈಕಾಲು ಒದರತೊಡಗಿದ. ರಮಾ ತಾನೇ ಹೋಗಿ ಬಾಗಿಲು ತೆರೆದಳು. ತಂದೆ ಮಗ ಒಟ್ಟಾಗಿ ಒಳಗೆ

ಬಂದರು.

"ಶ್ರೀಕಾಂತ ಬೇಗ ಕೈ ಕಾಲು ತೊಳೆದು ಬಾ. ಅಮ್ಮ ಬೆಳಗ್ಗಿಂದ ಊಟ ಮಾಡಿಲ್ಲ. ನಿನಗೋಸ್ಕರ ಕಾಯ್ತಾ ಇದಾರೆ. ನಾನು ಎಲ್ಲರಿಗೂ ಬಡಿಸ್ತೀನಿ" ಎನ್ನುತ್ತಾ ಒಳಗೆ ಹೋಗಿ ಮೂವರಿಗೂ ತಟ್ಟೆ ಲೋಟಗಳನ್ನು ತಂದಿಟ್ಟು ಅಡಿಗೆಯನ್ನು ಬಿಸಿ ಮಾಡಿದಳು.

ಶ್ರೀಕಾಂತ ತಾಯಿಗೆ ಬೇಸರವಾಗಬಾರದೆಂದು ಊಟಕ್ಕೆ ಕುಳಿತ. ಸಾಯಂಕಾಲ ಗಡದ್ದಾಗಿ ತಿಂದ ತಿಂಡಿ ಹಸಿವನ್ನು ಮುಚ್ಚಿಸಿತ್ತು. ಊಟ ಮುಗಿಯಲಿ, ಮಾತನಾಡ್ತೀನಿ ಎನ್ನುವಂತೆ ಪಾರ್ವತಿ ಸರಸರನೆ ಊಟ ಮುಗಿಸಿದಳು. ತಂದೆ ನಿತ್ಯದಂತೆ ಸಾವಕಾಶವಾಗಿ ಊಟ ಮುಗಿಸಿ ಎದ್ದು ಕೈ ತೊಳೆದು ತಮ್ಮ ರೂಮನ್ನು ಸೇರಿದರು. ರಮ ತನ್ನ ಕೆಲಸಗಳನ್ನು ಮುಗಿಸಿ ವಿಶೂನನ್ನು ಎತ್ತಿಕೊಂಡು ತನ್ನ ರೂಮಿಗೆ ಹೋದಳು.

"ಶ್ರೀಕಾಂತ, ಇನ್ನು ನನ್ನನ್ನು ಎಷ್ಟು ದಿನ ಹೀಗೇ ಗೋಳು ಹುಯ್ಕೋಬೇಕೂಂತ ಇದೀಯ?" ತಾಯಿ ಮಾತು ಪ್ರಾರಂಭಿಸಿದಾಗ ಅವನು ಗಲಿಬಿಲಿಗೊಂಡ.

"ಏನೋ ಅರ್ಜೆಂಟು ಕೆಲಸದ ಮೇಲೆ ಹೊರಗೆ ಹೋಗಿದ್ದೆ. ಹೊತ್ತಾಗಿ ಹೋಯ್ತು. ನಾನೇನು ಬೇಕೂಂತ ಮಾಡಲಿಲ್ಲ"

"ಆದರೆ ನಿನಗೋಸ್ಕರ ಕಣ್ಣಿಗೆ ಎಣ್ಣೆ ಬಿಟ್ಟು ಕೂತಿರ್ತೀನಿ ನಾನು, ಅನ್ನೋ ಪರಿಜ್ಞಾನ ನಿನಗೆ ಬೇಡವಾ? ಹೆಂಡತಿ ಇದ್ದಿದ್ದರೆ ಹೀಗೆ ಮಾಡ್ತಿದ್ದೆಯಾ? ಫೋನನ್ನಾದರೂ ಮಾಡಬಾರದಾಗಿತ್ತಾ?"

"ಹೆಂಡತಿ ಇಲ್ಲವಲ್ಲ..... ಅದಕ್ಕೇ ಫೋನು ನಿಧಾನವಾಗಿ ಮಾಡಿದ್ದು" ತಮಾಷೆಯಿಂದ ಮಾತನ್ನು ತೇಲಿಸಿ ನುಡಿದ.

"ಅದಕ್ಕೇ ಹೇಳಿದ್ದು. ಆದಷ್ಟು ಬೇಗ ಮದುವೆಯಾಗು. ಆಗ ಈ ಸ್ಥಿತಿಯೇ ಬರೋಲ್ಲ ಯಾರಿಗೂ"

"ನನ್ನ ಮದುವೆ ಸುದ್ದಿ ಮಾತ್ರ ಎತ್ತಬೇಡ ನೀನು," ರೇಗಿದ.

"ನನಗೂ ವಯಸ್ಸಾಯ್ತು. ನಿನ್ನ ಮದುವೆ ಒಂದು ಆಗಿ ಹೋದರೆ ನನ್ನ ಜವಾಬ್ದಾರಿ ತೀರಿದ ಹಾಗೆ..... ನಿನ್ನ ಯೋಗಕ್ಷೇಮ ಮುಂದೆ ಅವಳಿಗೆ ಸೇರಿದ್ದು"

"ಬಿಡಮ್ಮ ನನ್ನ ಯೋಗಕ್ಷೇಮ ನಾನು ನೋಡಿಕೊಳ್ತೀನಿ. ನನಗೆ ಯಾರೂ ಬೇಡ...... ನಾನು ಏಳಲಾ?"

"ಏಳೋವಂತೆ ತಡೀ..... ನೀನೂ ಯಾರನ್ನಾದ್ರೂ ಪ್ರೀತಿಸ್ತಿದ್ರೆ ಈಗಲೇ ಹೇಳಿಬಿಡು. ನಾನು ಯಾವ ಹಗರಣವನ್ನು ಮಾಡುವುದಿಲ್ಲ. ನಾನೇ ನಿಮ್ಮಿಬ್ಬರ ಮದುವೆ ಮಾಡಿಸ್ತೀನಿ"

ಈ ಮಾತುಗಳನ್ನಾಡುವಾಗ ತಾಯಿಯ ಹೃದಯ ಎಷ್ಟು ಅಳುತ್ತಿರಬಹುದು ಅಂತ ಅರ್ಥವಾಗಿತ್ತು. ಸುಮ್ಮನೇ ತಾಯಿಯನ್ನೇ ನೋಡಿದ.

"ಹೂ ಕಣೋ ಶ್ರೀಕಾಂತ. ಹಾಗೇನಾದರೂ ಇದ್ದರೆ ಆದಷ್ಟು ಬೇಗ ತಿಳಿಸು. ನಾನು ಖಂಡಿತಾ ನಿಮ್ಮಿಬ್ಬರ ಮದುವೆಗ ಅಡ್ಡ ಬರುವುದಿಲ್ಲ"

"ಹಾಗೇನೂ ಇಲ್ಲಮ್ಮ. ನಾನು ಯಾರನ್ನೂ ಪ್ರೀತಿಸಲಿಲ್ಲ. ಪ್ರೀತಿಸುತ್ತಿಲ್ಲ. ಯಾಕೋ ಏನೋ ನನಗೆ ಮದುವೆಯಾಗುವ ಆಸೆಯೇ ಇಲ್ಲ. ಹಾಗೇ ಇದ್ದು ಬಿಡ್ತೀನಿ"

"ನಂಗೊತ್ತು. ನಿನ್ನ ಮನಸ್ಸು ಕೆಟ್ಟುಹೋಗಿದೆ ಅಂತ. ಸುಮ್ಮನೆ ನಿಮ್ಮ ಅಜ್ಜಿಗೆ ಬೇರೆ ಕೆಲಸವಿರಲಿಲ್ಲ. ಆ ರೂಪಳೇ ನಿನ್ನ ಹೆಂಡತಿ ಅಂತ ಊರ ತುಂಬಾ ಡಂಗುರ ಹೊಡೆದುಕೊಂಡು ಬಂದರು. ಅವಳು ಯಾವನ ಜತೆಯೇ ಓಡಿ ಹೋಗಿ ಮದುವೆಯಾದರೆ ನೀನೇಕೆ ಕೊರಗಬೇಕು. ನೀನೂ ಝಂ ಅಂತ ಒಂದು ಹುಡುಗೀನ ಪ್ರೀತಿಸು. ಮದುವೆಯಾಗು"

"ಏನಮ್ಮಾ..... ಏನೇನೋ ಮಾತನಾಡ್ತಿದೀಯಾ. ನಿನಗೆ ನಿದ್ದೆ ಬರುತ್ತಿರಬಹುದು. ಹೋಗು ಮಲಕ್ಕೋ"

"ಮಲಗಿದ್ರೆ ನಿದ್ದೆ ಬರುತ್ತೆ ಅಂತ ಅಂದ್ಕೊಂಡ್ಯಾ? ನನಗೆ ನಿದ್ದೆಯೇ ಒಂದು ಕನಸಾಗಿ ಹೋಗಿದೆ. ಪಿಳಿ ಪಿಳಿ ಅಂತ ಕಣ್ಣು ಬಿಟ್ಟುಕೊಂಡು ಮಲಗಿರ್ತೀನಿ"

"ನಾನು ನಿನಗೆ ನಿದ್ದೆ ಮಾತ್ರೆಗಳನ್ನು ಕೊಡ್ತೀನಿ. ರಾತ್ರಿ ಮಲಗೋಕೆ ಮುಂಚೆ ಒಂದು ನುಂಗು. ಚೆನ್ನಾಗಿ ನಿದ್ದೆ ಬರುತ್ತೆ"

"ಮುಂಚೆ ಹೀಗಿರಲಿಲ್ಲ ಕಣೋ, ಚೆನ್ನಾಗಿ ಮನೆ ಕೆಲಸ ಮಾಡಿ, ಹೊಟ್ಟೆ ತುಂಬಾ ಊಟ ಮಾಡಿ ಮಲಗಿದರೆ, ಇನ್ನು ಬೆಳಿಗ್ಗೇನೇ ಎಚ್ಚರವಾಗುತ್ತಿದ್ದುದು.... ಈಗ ಹಸಿವೂ ಇಲ್ಲ. ನಿದ್ದೆಯೂ ಇಲ್ಲ. ಪ್ರಕಾಶ ಹೋಗಿಯೇ ಹೋದ. ಎಲ್ಲಾ ಅವನ ಹಿಂದೆಯೇ ಹೊರಟು ಹೋಯ್ತು."

"ಎಷ್ಟು ದಿನಾಂತ ಹೀಗೆ ಕೊರಗ್ತೀಯ. ಮೊದಲೇ ನಿನಗೆ ವಯಸ್ಸಾಗ್ತಿದೆ. ಹಸಿವು ನಿದ್ರೆ ಕಡಿಮೆ ಆಗುತ್ತೆ. ಅದಕ್ಕೇ ಹೇಳಿದ್ದು ನಿದ್ದೆ ಮಾತ್ರೆ ತಗೋ ಅಂತ"

"ಸರಿಯಪ್ಪಾ ಕೊಡು" ಆದರೆ ನಾನು ಹೇಳಿದ್ದನ್ನು ಮರೀಬೇಡ ಎನ್ನುತ್ತಾ ತಾಯಿ ಕೈತೊಳೆಯಲು ಎದ್ದಾಗ, ಅವನು ಕಣ್ಣಲ್ಲಿ ನೀರು ತುಂಬಿಕೊಂಡಿದ್ದ. ತಾನೆ ತಟ್ಟೆಗಳನ್ನು ತೊಳೆದು ಗೋಮೆ ಹಚ್ಚಿ ಒರೆಸಿದ.

"ನೀನ್ಯಾಕೆ ಮಾಡ್ತಿದೀಯೋ..... ರಮನ್ನ ಕರಿ...... ಮಾಡಲಿ"

"ಬೇಡ ಬಿಡಮ್ಮ..... ಅವಳು ಎದ್ದು ಬಂದರೆ ವಿಶೂ ಅಳ್ತಾನೆ. ಅವಳಿಗೂ ನಿದ್ದೆ ಬಂದಿರಬಹುದು"

"ಹೌದಪ್ಪ.... ಅವಳಿಗೋ ಯೌವನ. ಚೆನ್ನಾಗಿ ಊಟ ಸೇರುತ್ತೆ. ಗಡದ್ದಾಗಿ ನಿದ್ದೆ ಬರುತ್ತೆ. ತೊಂದರೆ ಎಲ್ಲಾ ನನಗೇ......"

"ಏನಮ್ಮಾ ನೀನು ಹೇಳೋದು. ಅವಳು ಊಟ ನಿದ್ದೆ ಮಾಡುವುದೂ ನಿನಗೆ ಸಹಿಸುಲ್ವಾ?"

"ನಾನೆಲ್ಲಿ ಹಾಗಂದ್ನೋ. ನನ್ನ ಕಷ್ಟ ಹೇಳಿಕೊಂಡೆ. ಈಗಲೂ ನೀನು ಅವಳ ಪರವಹಿಸಿ ಮಾತನಾಡ್ತೀಯಲ್ಲ. ನಾಳೆ ನಿನ್ನ ಹೆಂಡತಿ ಬಂದಮೇಲೆ ಅವಳು ಸಹಿಸ್ತಾಳಾ?"

"ಹೇಳಿದ್ನಲ್ಲ ನಾನು ಮದುವೆಯಾಗೊಲ್ಲ ಅಂತ. ಇನ್ನು ಹೆಂಡತಿ ಬರೋ ಪ್ರಶ್ನೆಯೇ ಇಲ್ಲ. ನೀನೂ ಹೀಗೇ ಮಾತಾಡ್ತಿದ್ರೆ..... ನಾನು ಇನ್ನು ಮೇಲೆ ಮನೆಗೇ ಬರೊಲ್ಲ. ಅಂಗಡೀಲೇ ಇದ್ದು ಬಿಡ್ತೀನಿ"

ಶ್ರೀಕಾಂತ ರೇಗಿ ಹೀಗೆ ನುಡಿದಾಗ ಪಾರ್ವತಿ ಸುಮ್ಮನಾದಳು. ತನ್ನನ್ನು ಹೆದರಿಸಲು ಶ್ರೀಕಾಂತ ಅಂಗಡಿಯಲ್ಲೇ ಉಳಿದುಬಿಟ್ಟರೇ.... ಈಗ ಮನೆಯಲ್ಲಿ ಅಡಿಗೆ ಊಟ ಅವನಿಗಾಗಿ, ವಿಶೂಗಾಗಿ,. ವಿಶು ಎಷ್ಟೊ ತಿಂದಾನು? ತಮ್ಮಿಬ್ಬರಿಗೂ ವಯಸ್ಸಾಗಿದೆ. ಹೆಚ್ಚಿಗೆ ತಿನ್ನುವಂತಿಲ್ಲ. ರಮಾ ಮಧ್ಯಾಹ್ನ ಊಟಕ್ಕೆ ಬರುವುದಿಲ್ಲ. ಯಾಕೋ ಅವನ ಮಾತುಗಳು ಅವಳನ್ನು ದುಃಖಗೊಳಿಸಿದವು. ಮುಂದೆ ಏನೂ ಮಾತನಾಡದೇ ದೀಪಗಳನ್ನಾರಿಸಿ, ಅಡಿಗೆ ಮನೆಯ ಬಾಗಿಲನ್ನು ಎಳೆದು ಹಾಕಿ, ತಾನು ಮಲಗಲು ಹೊರಟು ಹೋದಳು.

ಶ್ರೀಕಾಂತನ ಮನಸ್ಸು ಕೆಟ್ಟು ಹೋದಂತಾಗಿತ್ತು. ತಾನು ಏನೋ ಒಂದು ಮಹಾಸಾಧನೆ ಮಾಡಿ ಮುಗಿಸಿದವನಂತೆ ಮನೆಗೆ ಬಂದರೆ, ಮನೇಲಿ ಅಮ್ಮನ ಪುರಾಣ ಮುಗಿಯುವುದೇ ಇಲ್ಲ ಅಂತ ಅನ್ನಿಸಿದರೂ ಈ ಅಮ್ಮನಿಗೇಕೆ ಅರ್ಥವಾಗುವುದಿಲ್ಲ. ಪ್ರಕಾಶನ ಮದುವೆಯನ್ನು ಸಾಕಷ್ಟು ವಿರೋಧಿಸಿದ್ದವಳು, ಈಗ ನನಗೆ ಪ್ರೀತಿಸಿ ಮದುವೆಯಾಗು ಅಂತ ಬೇರೆ

ಹೇಳ್ತಾಳೆ. ಆದರೆ ನನಗೆ ಮದುವೆಯಾಗುವ ಆಸೆಯೇ ಹೊರಟು ಹೋಗಿದೆ. ರೂಪ ತನ್ನನ್ನು ತಿರಸ್ಕರಿಸಿದ್ದರಿಂದ ತನಗಾದದ್ದು ಅವಮಾನ...... ಅವಳನ್ನು ತಾನೆಂದೂ ಪ್ರೀತಿಸಿರಲೇ ಇಲ್ಲ. ಆದರೆ ನನಗೆ ಆಘಾತವಾದದ್ದು ರಮಾಳಿಂದ. ತನ್ನ ಪ್ರೀತಿಯನ್ನು ಹೊರಗೆಡಹುವ ಮೊದಲೇ ಆ ಪ್ರೀತಿಯಿಂದ ವಂಚಿತನಾಗಿದ್ದೆ. ರೂಪಳ ವರ್ತನೆಯ ಬಗ್ಗೆ ತನಗೆ ಅಸಹ್ಯ ಹುಟ್ಟಿತ್ತು. ಆದರೆ ರಮಳ ಬಗ್ಗೆ ತನಗೆ ಯಾವ ಕೆಟ್ಟ ಭಾವನೆಯೂ ಬರಲಿಲ್ಲ. ಅವಳ ನೆನಪಿನಲ್ಲೇ ತಾನು ಜೀವಮಾನವನ್ನೆಲ್ಲ ಕಳೆಯ ಬೇಕೆಂದು ಏನೂ ಇಲ್ಲ. ಆದರೆ ಮದುವೆ ಯಾಗುವ ಮನಸ್ಸೇ ತನಗಿಲ್ಲ. ಇದನ್ನೆಲ್ಲ ಅಮ್ಮನಿಗೆ ಹೇಳುವುದು ಹೇಗೆ..... ತಲೆಯ ಕೆಳಗೆ ಕೈಗಳನ್ನಿಟ್ಟು ಛಾವಣಿ ನೋಡುತ್ತಾ ಮಲಗಿದ್ದವನಿಗೆ, ಇದ್ದಕ್ಕಿದ್ದಂತೆ ಅನ್ನಿಸಿತು ತಾನು ಇವತ್ತು ವಿಶೂನ ಮಾತನಾಡಿಸಲೇ ಇಲ್ಲವೆಂದು. ತಾನು ಬಂದುದು ಯಾವಾಗಲೋ..... ಈಗ ಮಲಗಿ ನಿದ್ರಿಸುತ್ತಿರಬಹುದು ಎಂದುಕೊಂಡು ತಾನು ನಿದ್ರಿಸಲು ಯತ್ನಿಸಿದ.

* * * *

ಎಂದಿನಂತೆ ಅಂಗಡಿಯ ಬಳಿ ಮಾತಿಗೆಂದು ಮಹೇಶ ಬಂದಿದ್ದ. "ಏನಯ್ಯಾ ಆ ರಾಜಕುಮಾರಿ ಹೇಗಿದಾಳೆ ಅಂತ ವಿಚಾರಿಸಿದೀಯಾ?" ಅಂತ ಕೇಳಿದ್ದ.

"ಯಾವ ರಾಜಕುಮಾರಿ? ಓ..... ಅವಳಾ.... ವಿಚಾರಿಸಿದರಾಯ್ತು. ಮೊದಲು ಅವಳ ಅಪ್ಪನಿಗೆ ಎಲ್ಲಾ ಹೇಳಬೇಕಲ್ಲಾ..... ನೀನು ಹೋಗಿ ಹೇಳಿಬರ್ತೀಯಾ...."

"ನಾನಾ? ಇಲ್ಲಪ್ಪ. ನಿನ್ನ ಜತೆಗೆ ಬೇಕಾದ್ರೆ ಬರ್ತೀನಿ. ನೀನು ಶುರು ಮಾಡಿದ್ದು ಈ ಕತೆಯನ್ನು ನೀನೇ ಮುಗಿಸಬೇಕು"

"ಯಾಕೋ ಹೀಗಾಡ್ತೀಯಾ? ನೀನಾದ್ರೆ ಫ್ರೀಯಾಗಿದೀಯ. ನೆನ್ನೆ ದಿನ ನಾನು ಮಧ್ಯಾಹ್ನ ಮನೆಗೆ ಊಟಕ್ಕೆ ಹೋಗಲಿಲ್ಲ. ಮನೇಲಿ ನೋಡಬೇಕಾಗಿತ್ತು. ಎಲ್ಲರ ಮುಖಾನ"

"ನೀನು ತಿಳಿಸದೇ ಇದ್ದುದು ನಿನ್ನ ತಪ್ಪು"

"ಹೌದು. ಎಲ್ಲಾ ತಪ್ಪೂ ನನ್ನದೇ. ಒಂದೊಂದು ಸಾರಿ ಎಲ್ಲಾ ಬಿಟ್ಟು ಎಲ್ಲಾದರೂ ಹೊರಟು ಹೋಗೋಣ ಅಂತನ್ನಿಸುತ್ತೆ. ಆಗ ನನ್ನ ಜತೆಗೆ ನೀನು ಖಂಡಿತಾ ಬರೊಲ್ಲ. ನನಗೆ ಗೊತ್ತು" ಶ್ರೀಕಾಂತ ನಗುತ್ತಾ ನುಡಿದ.

"ಏನ್ಮಾಡ್ಲೋ ಸಂಸಾರ ಅಂತ ಕಟ್ಟಿಕೊಂಡು ಬಿಟ್ಟಿದೀನಲ್ಲೋ. ಇಲ್ಲದಿದ್ದರೆ

ಖಂಡಿತಾ ಬರ್ತಿದ್ದೆ" ಅವನೂ ತಮಾಷೆಯಾಗಿ ನುಡಿದ. ಸ್ವಲ್ಪ ಸಮಯದ ನಂತರ ನರ್ಸಿಂಗ್ ಹೋಂಗೆ ಫೋನ್ ಮಾಡಿ ವಸುಧಾ ಹೇಗಿದ್ದಾಳೆಂದು ವಿಚಾರಿಸಿಕೊಂಡ. ರಾಯರ ಮನೆಗೆ ಫೋನ್ ಮನೆಗೆ ಫೋನ್ ಮಾಡಿ, ಆತನ ಆರೋಗ್ಯ ವಿಚಾರಿಸಿ, ಆ ದಿನದ ಡ್ಯೂಟಿ ಮುಗಿಯಿತು ಅಂತಂದು ಕೊಂಡ.

* * * *

ಐದಾರು ದಿನಗಳು ಕಳೆದಿತ್ತು. ವಸುಧಾಳ ಚಿಕಿತ್ಸೆಯ ಖರ್ಚಿಗೆಂದು ಸ್ವಲ್ಪ ಹಣವನ್ನು ಶ್ರೀಕಾಂತ ಕೊಟ್ಟಿದ್ದ. ಅವನಿಗೇ ಮುಜುಗರವೆನಿಸುತ್ತಿತ್ತು. ತಾನು ಯಾವ ನಂಬಿಕೆಯ ಮೇಲೆ ಹೀಗೆ ಹಣ ಖರ್ಚು ಮಾಡುತ್ತಿದ್ದೇನೆ. ತಾನೇನು ಶ್ರೀಮಂತನಲ್ಲ. ತಾಯಿಗೆ ವಿಷಯ ತಿಳಿದರೆ ಖಂಡಿತಾ ಬೈಯುತ್ತಾಳೆ. ಸುಧಾಕರರಾಯರಿಗೆ ವಿಷಯ ತಿಳಿದರೆ ಹಣ ಕೊಡಬಹುದು. ಆದಷ್ಟು ಬೇಗ ಅವರಿಗೆ ವಿಷಯವನ್ನು ತಿಳಿಸಬೇಕು ಅಂತಂದುಕೊಂಡು ಗೆಳೆಯನೊಂದಿಗೆ ಅವರ ಮನೆಯತ್ತ ಹೊರಟ.

ವೆರಾಂಡದಲ್ಲಿ ಪೇಪರನ್ನು ಓದುತ್ತಾ ಕುಳಿತಿದ್ದವರು, ಗೇಟು ಸದ್ದಾದಾಗ ಇಣುಕಿ ನೋಡಿದರು. ಮಹೇಶ, ಶ್ರೀಕಾಂತ ಬರುತ್ತಿರುವುದನ್ನು ಗಮನಿಸಿದರು.

"ಬನ್ನಿ ಬನ್ನಿ..... ಏನು ಸಮಾಚಾರ? ಈ ಮುದುಕ ಹೇಗಿದಾನೆ ಅಂತ ನೋಡೋಕೆ ಬಂದ್ರಾ?" ತಮಾಷೆ ಮಾಡಿದರು.

"ಹೇಗಿದೀರಾ?" ಎಂದು ಶ್ರೀಕಾಂತ ಆರೋಗ್ಯವನ್ನು ವಿಚಾರಿಸಿದ.

"ನೋಡಿ ಹೀಗೇ. ಡಾಕ್ಟರು ರೆಸ್ಟು ತಗೊಳ್ಳಿ ಅಂತ ಅಂದ್ರು ಅಂತ ಸದಾ ಮನೇಲಿ ಕೂತಿರೋದೆ ಆಗಿದೆ. ನನಗಂತೂ ವಾಕಿಂಗ್ ಹೋಗದೇ ಬೇಸರವಾಗಿದೆ. ಒಬ್ಬಂಟಿಗರ ಜೀವನ ಬಹಳ ಕಷ್ಟ. ನಿಮ್ಮ ಮನೇಲಿ ಎಲ್ಲಾ ಹೇಗಿದಾರೆ? ಹುಶಾರಾಗಿದಾರಾ?"

"ನಿಮಗೊಂದು ಗುಡ್ ನ್ಯೂಸ್ ತಿಳಿಸೋಣ ಅಂತ ಬಂದಿದೀವಿ" ಎಂದ ಮಹೇಶ ಶ್ರೀಕಾಂತನ ಕಡೆ ನೋಡುತ್ತಾ.

"ಗುಡ್ ನ್ಯೂಸಾ! ಏನಪ್ಪಾ ಅದು.... ನಾನೋ ಹಾರ್ಟುಪೇಶೆಂಟು ತಡೆದುಕೊಳ್ಳೋಕೆ ಆಗದಿದ್ದರೆ?"

"ನಿಮ್ಮ ಸ್ಥಿತಿ ಹೀಗಿದ್ದೂ ಒಬ್ಬರೇ ಯಾಕೆ ಇದೀರಿ. ಏನಾದ್ರೂ ತೊಂದರೆ ಉಂಟಾದಾಗ ಹತ್ತಿರ ಯಾರು ಇರುತ್ತಾರೆ?"

"ಏನಾದರೂ ಆಗೋದಾದ್ರೆ, ಯಾರಾದರೂ ಹತ್ತಿರ ಇದ್ದರೂ ಅದು

ಆಗೇ ತೀರುತ್ತೆ. ಅದನ್ನು ತಡೆಯಲು ಯಾರಿಂದ ಸಾಧ್ಯವಿಲ್ಲ.... ಕಾವೇರಮ್ಮ ಇದಾರೆ. ನೀವುಗಳು ಇದೀರಿ. ಇನ್ನೇಕೆ ಚಿಂತೆ?"

"ಅದು ಸರಿ. ಆದರೂ ಹತ್ತಿರದವರು......"

"ಹತ್ತಿರದವರು ಯಾರೂ ಇಲ್ಲ. ನನಗೆ ಹೆಂಡತಿ [illegible] ಮಕ್ಕಳು ಇಲ್ಲ" ವ್ಯಥೆಯಿಂದ ನುಡಿದರು.

ಮಹೇಶ, ಶ್ರೀಕಾಂತ ಒಬ್ಬರನ್ನೊಬ್ಬರು ನೋಡಿದರು. ಒಂದು ಗಳಿಗೆ ತಡೆದು ಮಹೇಶ ನುಡಿದ.

"ಇಲ್ಲಿಯ ನರ್ಸಿಂಗ್ ಹೋಂ ಒಂದರಲ್ಲಿ ಒಬ್ಬ ಹುಡುಗಿ ಅಡ್ಮಿಟ್ ಆಗಿದಾಳೆ. ಅವಳ ಹೆಸರು ವಸುಧಾ ಅಂತ...... " ಆತ ಬೆಚ್ಚಿಬಿದ್ದರು.

"ಅವಳ ತಂದೆ ನೀವು ಅಂತ ತಿಳೀತು..... "

"ಅವಳು ನಿಮಗೆ ಹೇಗೆ ಪರಿಚಯ? ಆಸ್ಪತ್ರೇಲಿ ಏಕೆ ಇದಾಳೆ?" ಅಂತ ಆತ ಉದ್ವೇಗದಿಂದ ಪ್ರಶ್ನಿಸಿದಾಗ ಶ್ರೀಕಾಂತ ನುಡಿದ.

"ಗಾಬರಿಯಾಗಬೇಕಾದದ್ದು ಏನಿಲ್ಲ. ಅವಳಿದ್ದ ಹಾಸ್ಟೆಲ್ಲಿನಲ್ಲಿರುವ ಹುಡುಗಿಯರಲ್ಲಿ ಕೆಲವರಿಗೆ ಆರೋಗ್ಯ ಕೆಟ್ಟಿತು. ಆಸ್ಪತ್ರೆಗೆ ಸೇರಿಸಿದ್ದರು"

"ಮೊದಲೇ ನನಗೇಕೆ ತಿಳಿಸಲಿಲ್ಲ? ಈಗ ಹೇಗಿದಾಳೆ?"

"ನಿಮಗೂ ಆರೋಗ್ಯ ಸರಿ ಇರಲಿಲ್ಲವಲ್ಲ"

"ನಾನು ವಯಸ್ಸಾದವನು, ನನಗೆ ಏನಾದರೆ ಏನೀಗ..... ನನ್ನ ಮಗಳು ಆಸ್ಪತ್ರೆಗೆ ಸೇರಿಕೊಂಡರೂ, ನನಗೆ ಒಂದು ಮಾತು ತಿಳಿಸಲಿಲ್ಲವಲ್ಲ. ಇನ್ನು ಬುದ್ಧಿ ಬಂದಿಲ್ಲವಲ್ಲ ಅವಳಿಗೆ....."

"ಅಂದರೇ.... " ಮಹೇಶ ತನಗೇನೂ ತಿಳಿಯದವನಂತೆ ಕೇಳಿದ.

"ಬಿಡಿ.... ಒಂದು ದೊಡ್ಡ ಕತೆ ಅದು. ಅವಳಿಗೆ ನಾನು ಬೇಡವಾದ ಮೇಲೆ ನನಗೂ ಅವಳು ಬೇಡ"

"ಹಾಗಂದ್ರೆ ಸಂಬಂಧ ತಪ್ಪಿ ಹೋಗುತ್ತಾ?"

"ಹೋಗೋಲ್ಲ. ಸಂಬಂಧ ಇರುತ್ತೆ. ಕೇವಲ ಹಣದ ಸಂಬಂಧ. ನಾನು ಅವಳ ತಂದೆ ಅಂತ ನಾನು ಅವಳಿಗಾಗಿ ಹಣ ಖರ್ಚು ಮಾಡಬೇಕು. ಅವಳು ಉಡಾಯಿಸಬೇಕು. ಇದರಿಂದ ನನಗೇನು ಲಾಭ? ಇದೀಯಾ ಸತ್ತಿದ್ದೀಯಾ ಅಂತ ಒಂದು ದಿನ ವಿಚಾರಿಸುವ ಹೃದಯವಿಲ್ಲದ ಮಗಳಿಗೆ ನಾನು ತಂದೆ..... ಅವಳ ಪೋಷಕ ಅಷ್ಟೇ"

"ಹಾಗಾದ್ರೆ ಈಗ..... "

"ಈಗಲೂ ಅಷ್ಟೇ. ಅವಳು ಯಾವುದೋ ಹಾಸ್ಟೆಲ್ಲಿನಲ್ಲಿದ್ದಳು. ಈಗ ಯಾವುದೋ ನರ್ಸಿಂಗ್‌ಹೋಂಗೆ ಅಡ್ಮಿಟ್ ಆಗಿದಾಳೆ. ಹುಷಾರಾದ ಮೇಲೆ ಮತ್ತೆ ಹಾಸ್ಟೆಲ್ಲಿಗೆ ವಾಪಸ್ಸು ಹೋಗ್ತಾಳೆ. ಅಷ್ಟೇ. ಇದರಿಂದ ನನಗೆ ಇನ್ನೊಂದಿಷ್ಟು ಹಣ ಜಾಸ್ತಿ ಖರ್ಚಾಗಬಹುದು ಅಷ್ಟೇ. ಆಗಲಿ ಬಿಡಿ. ಇಂಥಾ ಮಗಳನ್ನು ಪಡೆದ ತಪ್ಪಿಗೆ ಹಣಾನ ನೀರಿನಂತೆ ಖರ್ಚು ಮಾಡ್ತೀನಿ ಅಷ್ಟೇ"

"ಏನೋ ನಿಮ್ಮಿಬ್ಬರ ಮಧ್ಯೆ ಭಿನ್ನಾಭಿಪ್ರಾಯ ಮೂಡಿ ಮನಸ್ತಾಪ ಆಗಿರಬಹುದು. ಆದರೆ ಈಗ ಪರಿಸ್ಥಿತಿ ಹಾಗಿಲ್ಲ"

"ಅವಳೇನು ಚಿಕ್ಕ ಹುಡುಗಿಯಲ್ಲ. ನನ್ನನ್ನು ಧಿಕ್ಕರಿಸಿ ಮನೆ ಬಿಟ್ಟು ಹೋದವಳು ಅವಳು, ತಂದೆ ಎನ್ನೋ ಗೌರವ ಅವಳಿಗಿಲ್ಲ. ಅವಳು ಎಲ್ಲಿದ್ದರೂ, ಹೇಗಿದ್ದರೂ ನನಗೆ ಒಂದೇ"

"ನೀವು ಹೀಗೆ ಮಾತನಾಡಿದರೂ, ನಿಮಗೆ ಎಷ್ಟು ದುಃಖವಾಗುತ್ತಿರಬಹುದು ಅಂತ ಅರ್ಥವಾಗುತ್ತೆ. ಬರೀ ಹಣದ ಪ್ರಶ್ನೆ ಇಲ್ಲ, ಮಾನದ ಪ್ರಶ್ನೆ ಸಹ"

"ಏನಾಗಿದೆ? ಹಾಸ್ಟೆಲ್ಲಿಗೆ ಸೇರಿದರೆ ಅವಮಾನ ಏನಲ್ಲ. ಎಷ್ಟೋ ಜನ ಹುಡುಗಿಯರು ಹಾಸ್ಟೆಲ್ಲಿನಲ್ಲಿದ್ದುಕೊಂಡು ಓದುಲ್ವೇ..... ಕೆಲಸಕ್ಕೆ ಹೋಗೋಲ್ವೆ?"

"ಅದು ಸರಿ. ಅಂಥಾ ಹುಡುಗಿಯರಿಗೆ ತಮ್ಮ ಜವಾಬ್ದಾರಿಯ ಅರಿವಿರುತ್ತೆ. ನಿಮ್ಮ ಮಗಳು ಹಾಗಲ್ಲ. ಅತೀ ಮುಗ್ಧೆ. ಮುದ್ದಿನಿಂದ ಬೆಳೆದವಳು. ಹೊರಗಿನ ಪ್ರಪಂಚ ಅರಿಯದವಳು"

"ಅಂಥೋಳು ಮನೆಯಿಂದ ಹೊರಗೆ ಹೋದದ್ದು ಏಕೆ? ಅವಳು ಮುಗ್ಧೆ ಏನಲ್ಲ. ಏನೇನು ನಡೀತು ಅಂತ ನಿಮಗೆ ಗೊತ್ತಿಲ್ಲ ಬಿಡಿ"

"ಮನೇಲಿ ಏನೇನೋ ರಂಪರಾದ್ಧಾಂತಗಳು ನಡೆಯಬಹುದು. ಎಲ್ಲರ ಮನೆಯಲ್ಲೂ ನಡೆಯುತ್ತಲೇ ಇರುತ್ತವೆ. ಹಾಗಂತ ಮನೆಯವರನ್ನು ಬಿಟ್ಟು ಕೊಡಲಾಗುವುದಿಲ್ಲ. ತಂದೆಯಿದ್ದೂ ಅನಾಥಳಂತೆ ಇರುವವಳ ಸ್ಥಿತಿ ಬಗ್ಗೆ ಯೋಚಿಸಿ ಸಾರ್"

"ಈಗ ಹುಶಾರಿಲ್ಲ. ಅಸಹಾಯಕಳಾಗಿ ಮಲಗಿದಾಳೆ. ಏನೋ ಸ್ವಲ್ಪ ಅಹಂ ಕಡಿಮೆ ಆಗಿರಬಹುದು. ನಾಲ್ಕು ದಿನ ಕಳೆದರೆ ಮತ್ತೆ ಅದೇ ದಾರಿ. ನನಗೆಲ್ಲ ಗೊತ್ತು. ನಮ್ಮ ಮನೆ ವಿಚಾರ ನಿಮಗೇನು ಗೊತ್ತು?"

"ಸರಿ ಸಾರ್. ನಾವಿನ್ನು ಬರ್ತೀವಿ. ನಿಮಗೆ ವಿಷಯ ತಿಳಿಸಬೇಕಾಗಿತ್ತು. ತಿಳಿಸಿ ಆಯ್ತಲ್ಲ"

"ಅವಳ ಚಿಕಿತ್ಸೆಗೆ ಎಷ್ಟು ಖರ್ಚಾಗುತ್ತೋ ಅಷ್ಟನ್ನು ನಾನು ಕೊಡ್ತೀನಿ. ನೀವುಗಳು ಖರ್ಚು ಮಾಡಬೇಡಿ"

"ಡಿಸ್ಚಾರ್ಜ್ ಮಾಡುವ ಸಮಯದಲ್ಲಿ ಕೊಟ್ಟರೂ ಆಯ್ತು" ಎನ್ನುತ್ತಾ ಇಬ್ಬರೂ ಹೊರಟರು. ಆತ ಸುಮ್ಮನೇ ಕುಳಿತೇ ಇದ್ದರು. ಗೇಟಿನಲ್ಲಿ ಇವರುಗಳಿಗಾಗಿ ಕಾಯುತ್ತಾ ನಿಂತಿದ್ದ ಕಾವೇರಮ್ಮ ವಸುಧಾಳ ಬಗ್ಗೆ ವಿಚಾರಿಸಿದಳು.

"ನೋಡಿದ್ರಾ..... ವಯಸ್ಸಾದವರು ಇವರೇ ಹೀಗಾಡಿದ ಮೇಲೆ ಇವರ ಮಗಳು ಅವಳು, ಚಿಕ್ಕವಯಸ್ಸಿನವಳು ಇವರಿಗಿಂತ ಹೆಚ್ಚು ಹೇಗಿದಾಳೆ ಈಗ? ಏನಾಗಿತ್ತು ಅವಳಿಗೆ?"

"ಇಲ್ಲಿ ಗೇಟಿನ ಬಳಿ ಎಲ್ಲಾ ವಿಷಯ ಮಾತನಾಡುವುದು ಬೇಡ. ಇನ್ನೊಂದು ದಿನ ತಿಳಿಸ್ತೀನಿ. ನೀವು ಹೋಗಿ ಅವಳನ್ನು ನೋಡಿಕೊಂಡು ಬನ್ನಿ. ಇನ್ನು ಎಷ್ಟು ದಿನ ಅಲ್ಲಿರುತ್ತಾಳೋ ತಿಳಿಯದು" ಎನ್ನುತ್ತಾ ನರ್ಸಿಂಗ್ ಹೋಂನ ವಿಳಾಸ ತಿಳಿಸಿದ.

"ನನಗೆ ಒಬ್ಬಳಿಗೆ ಓಡಾಡಿ ಅಭ್ಯಾಸವಿಲ್ಲ. ನನಗ್ಯಾಕೋ ಇದೆಲ್ಲ ಸರಿ ಎನಿಸುತ್ತಿಲ್ಲ. ತಂದೆ ಮಗಳು ಇಬ್ಬರೂ ಹುಶಾರಿಲ್ಲದೇ ಮಲಗಿದಾರೆ. ನಾನು ರಾಯರ ತಂಗಿಗೆ ತಿಳಿಸ್ತೀನಿ. ಅವರು ಬಂದರೆ ಎಲ್ಲಾ ಸರಿಹೋಗುತ್ತದೆ"

"ಅವರಿಗೆ ವಸುಧಾ ಮೇಲೆ ಪ್ರೀತಿ ಇದೆಯಾ?"

"ಪ್ರೀತಿಯೂ ಇಲ್ಲ, ದ್ವೇಷವೂ ಇಲ್ಲ. ಆಕೆಯೂ ಒಂದು ತರಹ ಒರಟು ಹೆಂಗಸು. ಎಷ್ಟಾಗಲೀ ಟೀಚರ್ ಆಗಿದ್ದವರು. ಅತೀ ಸ್ಟ್ರಿಕ್ಟು"

"ಸಧ್ಯಕ್ಕೆ ತಿಳಿಸುವುದು ಬೇಡ ಬಿಡಿ ಹಾಗಾದರೇ, ನೀವು ಆಸ್ಪತ್ರೆಗೆ ಹೋಗುವಾಗ ನನಗೆ ತಿಳಿಸಿ, ನಾನು ಬಂದು ಕರೆದುಕೊಂಡು ಹೋಗ್ತೀನಿ"

ರಾಯರಿಗೆ ತಿಳಿದರೆ ಏನಂತಾರೋ..... ಅವರಿಗೆ ತಿಳಿಸದೇ ಮನೆಯಿಂದ ಹೊರಡಲು ಸಾಧ್ಯವಿಲ್ಲ.

"ಸರಿ ಬಿಡಿ. ಏನಾದರೂ ಒಂದು ಉಪಾಯ ಹುಡುಕೋಣ" ಎನ್ನುತ್ತಾ ಇಬ್ಬರೂ ಹೊರಟುಹೋದರು. ದಾರಿಯಲ್ಲಿ ಮಹೇಶ ನುಡಿದ.

"ನನಗಂತೂ ಸಾಕಾಯ್ತಪ್ಪ. ಈತನ ಸಹವಾಸ. ಇಂಥಾ ತಂದೇನೂ ಇರ್ತಾರಾ? ವಿಷಯ ತಿಳಿಸಿದ್ದಾಯ್ತಲ್ಲ ಇನ್ನು ಅವರ ಪಾಡು ಅಂತ ಸುಮ್ಮನಿದ್ದು ಬಿಡೋಣ. ಈ ಮೀಡಿಯೇಟರ್ ಕೆಲಸ ನಾವೇಕೆ ಮಾಡಬೇಕು?"

"ಹೌದು ಕಣೋ. ನನಗೂ ಸಾಕಷ್ಟು ಬೇಸರವಾಗಿದೆ. ಆದರೇನು ಮಾಡಲಿ? ಆಕೆ ಕೇಳಿಕೊಂಡರಲ್ಲ ಅಂತ ಮುಂದುವರೆದೆ"

"ಸರಿಯಪ್ಪಾ, ನಿಂದೇನೂ ತಪ್ಪಿಲ್ಲ. ನನಗೆ ಗೊತ್ತು. ಆ ಹುಡುಗಿಯ ಹತ್ತಿರವ್ಪೂ ಮಾತನಾಡಿ, ನಿಮ್ಮ ತಂದೆಯ ಆರೋಗ್ಯ ಸರಿಯಾಗಿಲ್ಲ. ಅವರು ನಿನಗಾಗಿ ಹಂಬಲಿಸ್ತಿದಾರೆ ಅಂತ ಹೇಳೋಣ. ಅವಳಿಗೂ ಪಶ್ಚಾತ್ತಾಪವಾಗ ಬಹುದು. ಆಗ ಎಲ್ಲಾ ಸರಿಹೋಗುತ್ತೆ. ಈ ಚಾಪ್ಟರ್ ಮುಗಿಯುತ್ತೆ"

ಅಂಗಡಿಯ ಬಳಿ ಸ್ಕೂಟರನ್ನು ನಿಲ್ಲಿಸುತ್ತಿದ್ದಂತೆ, ಒಬ್ಬ ಹೆಂಗಸು ಇವನ ಬಳಿಗೆ ಬಂದು ಮಗುವನ್ನೆತ್ತಿಕೊಂಡು ಬಂದಳು. ಇವನ ಕತ್ತೆತ್ತಿ ನೋಡಿದ. ತಕ್ಷಣಕ್ಕೆ ಅವಳ ಗುರುತು ಸಿಗಲಿಲ್ಲ.

"ಹಲೋ ಶ್ರೀಕಾಂತ.... ನಾನು ರೂಪ..... ಗುರುತು ಸಿಗಲಿಲ್ವಾ?" ಎಂದಳು.

"ಓ...... " ಎಂದ ಉದಾಸೀನನಾಗಿ.

"ನಾನು ನಿನಗಾಗೇ ಕಾಯ್ತಾ ನಿಂತಿದ್ದೆ. ಯಾಕೆ ಇನ್ನೂ ಅಂಗಡಿ ತೆಗೆದಿಲ್ಲವಲ್ಲ?"

"ಏನಾದರೂ ಮೆಡಿಸಿನ್ ಬೇಕಾಗಿತ್ತಾ?"

"ಹುಂ.... ಒಂದಿಷ್ಟು ಮೆಡಿಸಿನ್ ಬೇಕಾಗಿತ್ತು. ನನ್ನ ಹತ್ತಿರ ಪ್ರಿಸ್ಕ್ರಿಪ್ಶನ್ ಇಲ್ಲ. ದುಡ್ಡೂ ಇಲ್ಲ"

"ಪ್ರಿಸ್ಕ್ರಿಪ್ಶನ್ ಇಲ್ಲದೇ ಮೆಡಿಸಿನ್ ಕೊಡೋಲ್ಲ"

"ನನಗೂ ಹಾಗೇ ಹೇಳ್ತೀಯಲ್ಲ. ನಾನೇನು ಅಪರಿಚಿತಳಾ?"

"ಅದಲ್ಲ ಪ್ರಶ್ನೆ. ನಿಯಮ ಅಂದರೆ ನಿಯಮ. ಏನಾದರೂ ಹೆಚ್ಚು ಕಡಿಮೆ ಆದರೆ ನನ್ನ ತಲೆಗೆ ಬರುತ್ತೆ. ನಿಂಗೇನು ಗೊತ್ತು" ಅನಿರೀಕ್ಷಿತವಾಗಿ ಅವನು ದನಿ ಏರಿಸಿ ಮಾತನಾಡಿದಾಗ ಅವಳು, "ಮೆಲ್ಲಗೆ.... ಯಾಕೆ ಎಕ್ಸೈಟ್ ಆಗ್ತೀಯಾ? ಹೋಗಲಿ ಬಿಡು. ಮನೇಲಿ ಎಲ್ಲಾ ಹೇಗಿದಾರೆ? ರಮಾ ಹೇಗಿದಾಳೆ?"

"ಎಲ್ಲಾ ಚೆನ್ನಾಗಿದಾರೆ....." ಎಂದರೂ ನೀನು ಹೇಗಿದೀಯ..... ನಿಮ್ಮ ಮನೆಯವರು ಹೇಗಿದಾರೆ ಎಂದು ಅವನು ವಿಚಾರಿಸಲಿಲ್ಲ.

"ನಾನೀಗ ಇಲ್ಲೇ ಇದೀನಿ" ಅವಳು ತಾನಾಗಿಯೇ ಹೇಳಿದಾಗ ಅವನು ಆಸಕ್ತಿಯನ್ನು ತೋರಲಿಲ್ಲ.

"ಯಾಕೋ, ಶ್ರೀಕಾಂತ, ನನ್ನ ಮೇಲಿನ ಸಿಟ್ಟು ಇನ್ನೂ ನಿನಗೆ ಕಡಿಮೆ ಆಗಿಲ್ಲ ಅಲ್ವಾ?" ಎಂದು ಅವಳು ನುಡಿದಾಗ ಅವನು ಹಲ್ಲು ಕಡಿದ.

"ನಿಮ್ಮ ಮನೆಯ ವಿಷಯ ತಿಳಿಯಿತು. ನನಗೆ ದುಃಖವಾಯ್ತು"

ಎಂದು ಅವಳು ನುಡಿದಾಗ, ಅವನು ಸುಳ್ಳು ಎಂದುಕೊಳ್ಳುತ್ತಾ ಅಂಗಡಿಯ ಕಡೆ ನಡೆದ. ಅವನ ಹಿಂದೆಯೇ ಅವಳೂ ಬಂದಳು.

"ಶ್ರೀಕಾಂತ, ಒಂದು ಸ್ವಲ್ಪ ದುಡ್ಡು ಬೇಕಾಗಿತ್ತು ಕೊಟ್ಟಿರ್ತೀಯಾ.... ಡಾಕ್ಟರ ಹತ್ತಿರ ಬಂದೆ. ನನ್ನ ಪರ್ಸನ್ನು ಯಾರೋ ಹೊಡೆದು ಬಿಟ್ಟಿದ್ದಾರೆ"

ಅವಳು ನಿಜ ಹೇಳುತ್ತಿದಾಳೋ ಸುಳ್ಳು ಹೇಳುತ್ತಿದಾಳೋ ಎನ್ನುವಂತೆ ಅವಳನ್ನೇ ನೋಡಿದ.

"ನಿನಗೆ ಸಾಲ ಕೊಡುವಷ್ಟು ಶ್ರೀಮಂತ ನಾನಲ್ಲ" ಎಂದ ಒಂದು ಬಗೆಯಾಗಿ ನಗುತ್ತಾ.

"ಈ ಸಮಯದಲ್ಲೂ ಹಂಗಿಸ್ತೀಯಲ್ಲ, ಮೆಡಿಸಿನ್ ಕೊಡೊಲ್ಲ ಅಂತೀಯ. ದುಡ್ಡನ್ನು ಕೊಡೊಲ್ಲ ಅಂತೀಯ....."

"ನನ್ನ ನಿನ್ನ ಮಧ್ಯೆ ಇರುವ ವ್ಯತ್ಯಾಸ ತಿಳಿಸಿದೆ. ಒಂದು ನೂರಿನ್ನೂರು ಸಾಕಾಗುತ್ತಾ?"

"ಸಧ್ಯಕ್ಕೆ ಸಾಕು..... ನಾಳೆ ನಾಡಿದ್ದರಲ್ಲಿ ತಂದು ಕೊಡ್ತೀನಿ"

"ಪರವಾಗಿಲ್ಲ. ಆ ದುಡ್ಡಿನಲ್ಲಿ ಪಾಪೂಗೆ ಏನಾದರೂ ತೆಗೆಸಿ ಕೊಡು" ಎನ್ನುತ್ತಾ ನೂರರ ಎರಡು ನೋಟನ್ನು ಅವಳ ಕೈಗಿತ್ತ.

"ಥ್ಯಾಂಕ್ಸ್ ಶ್ರೀಕಾಂತ" ಎಂದು ಹೇಳಿ, "ಟಾಟಾ ಮಾಡು" ಎಂದು ಮಗುವಿನ ಕೈಯಾಡಿಸಿ ರಸ್ತೆಗಿಳಿದಳು. ಅವನು ಅವಳ ಬಗ್ಗೆ ತಲೆ ಕೆಡಿಸಿಕೊಳ್ಳಲು ಸಮಯವಿರಲಿಲ್ಲ. ಗಿರಾಕಿಗಳು ಬಂದು ನಿಂತಿದ್ದರು.

ಮಧ್ಯಾಹ್ನ ಊಟದ ಸಮಯದಲ್ಲಿ ಮನೆಗೆ ಹೋದಾಗ ರಮಳೇ ಬಾಗಿಲು ತೆಗೆದಾಗ ಅವನು ಆಶ್ಚರ್ಯಶದಿಂದ, "ಕೆಲಸಕ್ಕೆ ಹೋಗಲಿಲ್ವಾ? ರಜಾ ಹಾಕಿದೀಯ" ಅಂತ ಕೇಳಿದ.

"ಹುಂ. ಒಂದೆರಡು ದಿನ ರಜ ಹಾಕಿದೀನಿ. ಯಾಕೋ ಈ ನಡುವೆ ಕೆಲಸಕ್ಕೆ ಹೋಗುವ ಮನಸ್ಸೇ ಇಲ್ಲ" ಎಂದಳು.

"ಇಷ್ಟವಿಲ್ಲದಿದ್ದರೆ ಕೆಲಸಾನ ಬಿಟ್ಟು ಬಿಡು" ಸುಲಭವಾದ ಪರಿಹಾರ ಹೇಳಿದ.

"ಮನೇಲಿ ಕೂತು ಏನು ಮಾಡಲಿ?" ಅದೂ ಬೇಜಾರಲ್ವಾ?

"ಈ ಕೆಲಸ ಸರಿ ಹೋಗದಿದ್ದರೆ, ಬೇರೆ ಕಡೆ ಸೇರಿದರಾಯ್ತು. ಯಾಕೆ ಏನಾದರೂ ತೊಂದರೇನಾ?"

"ತೊಂದರೇನೇ..... ಅದರಲ್ಲೂ ಹೆಂಗಸರು ಅಂದ ಮೇಲೆ ತೊಂದರೆ

ಇಲ್ಲದೇ ಇರುತ್ತಾ? ಏನೋ ತಕರಾರು" ಎಂದಳು ರಮಾ.

"ನಾನು ಬಂದು ನಿನ್ನ ಬಾಸ್ ಹತ್ತಿರ ಮಾತನ್ನಾಡ್ಲಾ?"

"ಸಧ್ಯಕ್ಕೆ ಬೇಡ. ಬೇಕಾದಾಗ ಹೇಳ್ತೀನಿ"

"ನೀನು ಏನೂ ಸಂಕೋಚ ಪಟ್ಟುಕೊಳ್ಳಬೇಡ. ಯಾವ ಸಹಾಯ ಬೇಕಾದ್ರೂ ಕೇಳು ಮಾಡ್ತೀನಿ"

"ಖಂಡಿತಾ ಹೇಳ್ತೀನಿ ಶ್ರೀಕಾಂತ. ನಿನಗಲ್ಲದೇ ಇನ್ಯಾರಿಗೆ ಹೇಳಲಿ?" ಅವಳ ಧ್ವನಿ ಭಾರವಾಗಿದೆ ಎಂದೆನಿಸಿದರೂ.

"ವಿಶೂ ಏನು ಮಾಡ್ತಿದಾನೆ? ಎಷ್ಟು ದಿನ ಆಯ್ತು ಅವನ ಹತ್ತಿರ ಸರಿಯಾಗಿ ಮಾತನಾಡಿ. ಎಲ್ಲಿ ಕರೆದುಕೊಂಡು ಬಾ"

"ಮೊದಲು ನೀನು ಕೈ ಕಾಲು ತೊಳೆದು ಊಟ ಮಾಡು. ಈಗ ನಿನ್ನ ಜತೆ ಕೂತರೆ, ನಿನಗೆ ಸರಿಯಾಗಿ ಊಟ ಸಹ ಮಾಡೊಕ್ಕೆ ಬಿಡೊಲ್ಲ" ಅಂದನು.

ಶ್ರೀಕಾಂತ ಬಟ್ಟೆ ಬದಲಾಯಿಸಿ ಕೈ ಕಾಲು ತೊಳೆದು ಊಟಕ್ಕೆ ಕೂತ. ಅಮ್ಮನ್ನ ಕಾಣದಾಗ ಕೇಳಿದ, "ಅಮ್ಮಾ ಎಲ್ಲಿ?"

"ಇವತ್ತು ನಾನು ಮನೇಲೇ ಇದ್ನಲ್ಲ. ಅದಕ್ಕೇ ಹೊರಗೆಲ್ಲೋ ಹೋಗಿದ್ದಾರೆ. ಬಹುಶಃ ನಿನಗೆ ಹೆಣ್ಣು ವಿಚಾರಿಸಲಿಕ್ಕೆ ಅಂತ ಹೋಗಿರಬಹುದು" ತಮಾಷೆಯ ಧ್ವನಿಯಲ್ಲಿ ನುಡಿದಳು.

"ಈ ಅಮ್ಮಂಗೆ ಮಾಡೋಕ್ಕೆ ಬೇರೆ ಕೆಲಸವಿಲ್ಲ" ಗೊಣಗಿದ.

"ಯಾಕೆ ಶ್ರೀಕಾಂತ ಹೀಗಾಡ್ತೀಯ? ಅಮ್ಮಂಗೆ ನೀನು ಮದುವೆಯಾಗಿ ಸೆಟ್ಲ್ ಆಗಲಿ ಅಂತ ಆಸೆ ಇಲ್ವಾ?"

"ಅಮ್ಮಂಗೆ ಬೇಕಾದಷ್ಟು ಆಸೆಗಳಿವೆ. ಎಲ್ಲಾ ನೆರವೇರುತ್ತಾ?"

"ನಿನ್ನ ಕೈಲಾಗೋ ಆಸೇನ ನೆರವೇರಿಸಿದರೆ ಅವರಿಗೆ ಖುಷಿಯಾಗುತ್ತೆ."

"ಆದರೆ ಅದರಿಂದ ನನ್ನ ಖುಷಿ ಏನೂ ಹೆಚ್ಚಾಗೊಲ್ಲವಲ್ಲ."

"ನಿಜ ಹೇಳು ಶ್ರೀಕಾಂತ, ಮದುವೆ ಮಾತು ಬಂದಾಗೆಲ್ಲಾ ಹೀಗೇ ಆಡ್ತೀಯಲ್ಲ. ಯಾರನ್ನಾದ್ರೂ ಲವ್ ಮಾಡ್ತಿದೀಯ. ಹಾಗಿದ್ರೆ ಹೇಳು. ನಾನು ನಿನ್ನ ಪರವಾಗಿ ಮಾತನಾಡ್ತೀನಿ" ನಿನ್ನ ಮದುವೆಗೆ ಹೆಲ್ಪ ಮಾಡ್ತಿವಿ.

"ಹಾಗೇನೂ ಇಲ್ಲಮ್ಮ. ಈಗ ನನ್ನ ಮದುವೆ ವಿಷಯ ಸಾಕು. ನಾನು ನಿರಾಳವಾಗಿ ಊಟ ಮಾಡಬೇಕು" ಅವನು ಕಟುವಾಗಿ ನುಡಿದಿದ್ದ. "ಎಲ್ಲಾ ಇಲ್ಲಿ ಇಟ್ಟು ಹೋಗು. ನಾನೇ ಬಡಿಸಿಕೊಳ್ತೀನಿ" ಎಂದಾಗ ಅವಳು ಮತ್ತೆ

ಹೇಳಿಸಿಕೊಳ್ಳದೇ ಹೊರಟು ಹೋದಳು. ಬೇಳೆ ಸಾರು, ಬದನೇಕಾಯಿ ಪಲ್ಯ ರುಚಿಯಾಗಿದ್ದರೂ, ಊಟ ಹಿತವೆನಿಸಲಿಲ್ಲ. ಯಾಂತ್ರಿಕವಾಗಿ ಊಟ ಮುಗಿಸಿ, ಪಾತ್ರೆಗಳನ್ನು ತಾನೇ ತೆಗೆದಿಟ್ಟು ನೆಲ ಒರೆಸಿ ಹೊರಗೆ ಬಂದ. ರಮಾ ಮಗುವಿನೊಡನೆ ಕೂತಿದ್ದಳು. ವಿಶೂ ಇವನನ್ನು ಕಂಡೊಡನೆ ಸರಸರನೆ ಇವನೆಡೆಗೆ ಬಂದ.

"ಬಾರೋ ರಾಜ....." ಎನ್ನುತ್ತಾ ಅವನು ಮಗುವನ್ನು ಎತ್ತಿಕೊಂಡು ಲೊಚಲೊಚನೆ ಮುತ್ತಿಟ್ಟಾಗ ರಮಾ ಅವನನ್ನೇ ನೋಡುತ್ತಿದ್ದಳು. ಅದನ್ನು ಗಮನಿಸದೇ ಅವನು ಅವನನ್ನು ಎತ್ತಿಕೊಂಡು ತನ್ನ ರೂಮಿಗೆ ಹೋದ. ತನ್ನ ಪಕ್ಕ ಅವನನ್ನು ಮಲಗಿಸಿಕೊಂಡು ಕೈಯಲ್ಲಿ ಪೇಪರನ್ನು ಹಿಡಿದು ಮಲಗಿದ.

* * * *

ಅಂಗಡಿಯಲ್ಲಿದ್ದಾಗ ನರ್ಸಿಂಗ್ ಹೋನಿಂದ ಫೋನು ಬಂದಿತ್ತು. ಡಾಕ್ಟರು ಅವನಿಗೆ ಬರುವಂತೆ ಹೇಳಿದ್ದರು. ಶ್ರೀಕಾಂತ ಬೇಗ ಬೇಗ ಅಂಗಡಿಯನ್ನು ಮುಚ್ಚಿ ಮಹೇಶನನ್ನು ಕರೆದುಕೊಂಡು ನರ್ಸಿಂಗ್ ಹೋಂಗೆ ಬಂದ. ಡಾಕ್ಟರನ್ನು ಕಂಡ.

"ಯಾಕೆ ಡಾಕ್ಟರ್ ಹೇಳಿ ಕರೆಸಿದೀರಲ್ಲ....." ಹೇಗಿದಾಳೆ ಆ ಹುಡುಗಿ?

"ಪರವಾಗಿಲ್ಲ ಸ್ವಲ್ಪ ಬೆಟರ್. ಆದರೆ ಒಂದೆ ಗಲಾಟೆ ಆ ಹುಡುಗಿಯದು. ನಾನು ಇಲ್ಲಿರಲ್ಲ. ಹಾಸ್ಟೆಲ್ಲಿಗೆ ಹೋಗ್ತೀನಿ ಅಂತ. ನನ್ನನ್ಯಾಕೆ ಕರೆದುಕೊಂಡು ಬಂದು ಸೇರಿಸಿದ್ದಾರೆ? ಅವರ್ಯಾರು? ನಾನು ಅವರನ್ನು ನೋಡಬೇಕು ಅಂತ. ವಿಪರೀತ ಗಲಾಟೆ. ಕೋಆಪರೇಷನೇ ಇಲ್ಲ. ಇಂಜೆಕ್ಷನ್ ತಗೊಳ್ಳಲ್ಲ ಅಂತ ಹಠ ಮಾಡ್ತಾಳೆ"

"ಈಗ ಡ್ರಗ್ಸ್ ಕಂಪ್ಲೀಟ್ ಆಗಿ ನಿಲ್ಲಿಸಾಯ್ತಾ?"

"ಇನ್ನೂ ಇಲ. ಟೇಪರಿಂಗ್ ಡೋಸ್ ಕೊಡುತ್ತಿದೀನಿ. ಜತೆಗೆ ಬೇರೆ ಔಷಧೀನೂ ಕೊಡ್ತಿದೀವಿ. ಅದರ ಎಫೆಕ್ಟ್ ಎಲ್ಲಾ ಕಡಿಮೆಯಾಗೋ ಹಾಗೆ ಅದಕ್ಕೇ ಗಲಾಟೆ. ಹೀಗೇ ಆಡ್ತಾ ಇದ್ದರೆ ಒಂದು ದಿನ ಇಲ್ಲಿಂದ ಓಡಿಹೋದರೂ ಹೋಗಬಹುದು"

"ನೀವೇ ಹೀಗೆ ಹೆದರಿಸಿದರೆ ಹೇಗೆ ಡಾಕ್ಟರ್..... ಅಷ್ಟು ಸುಲಭವಾಗಿ ಅವಳು ಓಡಿಹೋಗಲು ಸಾಧ್ಯಾನಾ?"

"ಸಾಧ್ಯವಿಲ್ಲ..... ಆದರೂ ಅವಳ ಮೇಲೆ ಸದಾ ನಿಗಾ ಇಡಬೇಕಾಗುತ್ತದೆ.

ಅವಳ ತಂದೆಗೆ ವಿಷಯ ತಿಳಿಸಿ ಆಯ್ತಾ? ಏನಂದ್ರು?"

"ತಿಳಿಸಿದೆವು. ಆದರೆ ಆತನಿಗೂ ಆರೋಗ್ಯ ಸರಿ ಇಲ್ಲವಲ್ಲ. ಸಧ್ಯಕ್ಕೆ ಅವಳು ಇನ್ನೂ ಸ್ವಲ್ಪ ದಿನ ಇಲ್ಲಿರಲು ಸಾಧ್ಯವಿಲ್ಲವಾ?"

"ಇರಲೇಬೇಕು..... ಆದರೆ ಆ ಹುಡುಗಿಗೆ ಇಲ್ಲಿಂದ ಹೋಗಬೇಕು ಅಂತ ಅನ್ನಿಸ್ತಾ ಇದೆಯಲ್ಲಾ, ಯಾರಾದ್ರೂ ಮನೆಯವರು ಬಂದು ಆಗಾಗ ಮಾತನಾಡಿಸಿ, ಅವಳೊಡನೆ ಕಾಲ ಕಳೆದರೆ, ಅವಳಿಗೂ ಉತ್ಸಾಹ ಬರುತ್ತೆ. ಯಾರೂ ಬರೋದೇ ಇಲ್ಲ. ಈಗ ನೀವಿಬ್ಬರೂ ಬಂದಿದೀರಲ್ಲ, ನೀವೇ ಹೋಗಿ ಮಾತನಾಡಿಸಿ"

"ನಾವಾ? ನಮ್ಮನ್ನು ಬೈದು ಬಿಟ್ಟರೇ..... " ಮಹೇಶ ನುಡಿದ.

"ನಿಮ್ಮನ್ನೇಕೆ ಬೈತಾಳೆ? ನೀವು ಸ್ನೇಹದಿಂದ ಮಾತನಾಡಿಸಬೇಕು"

"ನಮ್ಮ ಪರಿಚಯವೇ ಅವಳಿಗಿಲ್ಲವಲ್ಲ"

"ಪರಿಚಯ ಮಾಡಿಕೊಳ್ಳಿ, ಆ ಹುಡುಗಿ ಒಂಟಿ..... ಒಂಟಿತನವೇ ಇಂಥಾ ದುರಂತಕ್ಕೆ ಕಾರಣವಾಗುತ್ತೆ. ಸ್ನೇಹಿತೆಯರು ಸರಿಯಾಗಿಲ್ಲದಿದ್ದರೆ.....ಹೀಗೆ ಹಾಳು ಮಾಡ್ತಾರೆ"

"ಪೊಲಿಸ್ನೋರು ಮತ್ತೆ ಬಂದು ವಿಚಾರಿಸಿದ್ರಾ?"

"ಹುಂ ವಿಚಾರಿಸಿದ್ದಾರೆ. ಆದರೆ ಅವಳ ಹತ್ತಿರ ಇನ್ನೂ ಮಾತನಾಡಿಲ್ಲ. ಯಾರದೋ ತಪ್ಪಿಗೆ ಈ ಹುಡುಗಿ ಬಲಿಯಾಗಿದ್ದಾಳೆ. ನೋಡಿದರೆ ಪಾಪ ಅಂತ ಸಹ ಅನ್ನಿಸುತ್ತೆ. ಹದಿನೆಂಟು ಇಪ್ಪತ್ತು ವರ್ಷದ ಹುಡುಗಿ ಅಂದ್ರೆ ಹೇಗಿರಬೇಕು. ಹೆಣ ಇದ್ದ ಹಾಗೆ ಇದ್ದಾಳಲ್ಲ. ಆ ಸರ್ಕಾರಿ ಆಸ್ಪತ್ರೇಲೇ ಇದ್ದಿದ್ದರೆ, ಅವಳ ಗತಿ ಏನಾಗುತ್ತಿತ್ತೋ...... ನೀವು ಅವಳನ್ನು ಇಲ್ಲಿಗೆ ಕರೆತಂದು ಸೇರಿಸಿ ಒಳ್ಳೆ ಕೆಲಸ ಮಾಡಿದ್ರಿ...... ಇಷ್ಟೆಲ್ಲಾ ಆದರೂ, ಆ ಹುಡುಗಿಯ ತಂದೆ ಅವಳನ್ನು ನೋಡಲು ಬಂದಿಲ್ಲ ಅಂತಂದ್ರೆ ಆಶ್ಚರ್ಯವಾಗುತ್ತೆ. ಏನು ಪೇರೆಂಟ್ಸೋ, ಜವಾಬ್ದಾರಿ ಬೇಡವಾ! ನರ್ಸಿಂಗ್‌ಹೋಂಗೆ ಒಂದಿಷ್ಟು ಹಣ ಕಟ್ಟಬೇಕಾಗಿದೆ. ಅದನ್ನು ಆದಷ್ಟು ಬೇಗ ಕೊಡುವಂತೆ ಹೇಳಿ."

ಡಾಕ್ಟರು ಇಷ್ಟೊಂದು ಮಾತನ್ನಾಡಲು ಅವರಿಗೆ ಸಮಯವಿದೆಯೇ ಎಂದು ಮಹೇಶ ಯೋಚಿಸುತ್ತಿದ್ದ. ಬೇರೆ ಹೆಚ್ಚಿಗೆ ಪೇಶೆಂಟ್ಸ್‌ಗಳಿಲ್ಲದ್ದರಿಂದ ಡಾಕ್ಟರು ತಾನು ಆಡುವ ಮಾತುಗಳನ್ನು ಆಡಿ ಮುಗಿಸಿದ್ದ. ತನ್ನ ಪರಿಚಯದವನಾದ್ದರಿಂದ ಇಷ್ಟೆಲ್ಲಾ ಹೇಳಿದಾನೆಂದು ಶ್ರೀಕಾಂತ, ಡಾಕ್ಟರಾಡಿದ ಮಾತುಗಳನ್ನೇ ಮೆಲಕು ಹಾಕುತ್ತಿದ್ದ. ಅವನ ತಲೆಯೊಳಗೆ ಗೊಂದಲದ ಅಲೆಗಳು.

"ಆ ಹುಡುಗೀನ ಕಂಡು ಮಾತನಾಡಿಸಿ ಹೋಗಿ. ಹೊತ್ತಾಯಿತು ನಾನಿನ್ನು ಬರ್ತೀನಿ ಇನ್ನೊಂದು ಕೇಸನ್ನು ನೋಡಬೇಕು." ಎಂದು ಡಾಕ್ಟರು ಎದ್ದಾಗ ಇಬ್ಬರೂ ಎದ್ದರು.

ಹಣೆಯ ಮೇಲೆ ಕೈಅಡ್ಡ ಇಟ್ಟು ಮಲಗಿದ್ದ ವಸುಧಾ ಹೆಜ್ಜೆ ಸದ್ದಾದರೂ ಇತ್ತ ತಿರುಗಲಿಲ್ಲ. ಅಲ್ಲಿಯೇ ಕುಳಿತಿದ್ದ ನರ್ಸು ತಿರುಗಿದಳು. ಇಬ್ಬರೂ ಒಳಗೆ ಬಂದರು. ನರ್ಸು ಎದ್ದು ಮಂಚದ ಬಳಿಗೆ ಬಂದಳು.

"ವಸುಧಾ...... ನೋಡು..... ಯಾರೋ ಬಂದಿದಾರೆ" ಮೈ ಮುಟ್ಟಿ ಎಬ್ಬಿಸಿದಳು.

"ನನ್ನನ್ನು ನೋಡೋಕೆ ಯಾರು ಬರ್ತಾರೆ? ನನಗೆ ಯಾರೂ ಇಲ್ಲ" ಎಂದಳು ಕೈ ತೆಗೆಯದೇ.

"ನೋಡು ನಾನು ಸುಳ್ಳು ಹೇಳುತ್ತಿಲ್ಲ" ನರ್ಸು ಮತ್ತೆ ಕೈ ಮುಟ್ಟಿದಾಗ "ಶ್" ಎನ್ನುತ್ತಾ ವಸುಧಾ ನರ್ಸನ್ನು ಅತ್ತ ತಳ್ಳಿ ಇತ್ತ ತಿರುಗಿದಳು. ನರ್ಸು ಹಿಂದೆ ಸರಿದಳು. ಮಲಗಿದ್ದಂತೆಯೇ ವಸುಧಾ ಇಬ್ಬರನ್ನು ನೋಡಿದಳು.

"ಪೊಲಿಸ್ನೋರಾ? ನಂಗೇನೂ ಗೊತ್ತಿಲ್ಲ ಅಂತ ಅವತ್ತೇ ಹೇಳಲಿಲ್ವಾ ನಾನು?" ಎತ್ತರದ ಸ್ವರದಲ್ಲಿ ನುಡಿದಳು.

"ನಾವು ಪೊಲಿಸ್ನೋರಲ್ಲ. ನಿಮ್ಮ ಸ್ನೇಹಿತರು" ಶ್ರೀಕಾಂತ ನುಡಿದಾಗ ವಸುಧಾ ನಕ್ಕಳು.

"ಸ್ನೇಹಿತರು! ನನಗೆ ಯಾರೂ ಸ್ನೇಹಿತರಿಲ್ಲ. ನೀವು ಪೊಲಿಸ್ನೋರೇ ನನಗೆ ಗೊತ್ತು ನೀವು ಸುಳ್ಳು ಹೇಳ್ತಿದ್ದೀರಿ."

"ನಾವು ಯೂನಿಫಾರಂ ನೇ ಹಾಕಿಕೊಂಡಿಲ್ಲವಲ್ಲ. ನಾವು ಪೊಲಿಸ್ನೋರು ಅಂತ ಹೇಗೆ ಹೇಳ್ತಿರಿ ಮೇಡಂ?" ಮಹೇಶ ತಮಾಷೆಯಾಗಿ ಕೇಳುತ್ತಾ ಮುಂದೆ ಬಂದು ನುಡಿದ.

"ಪೊಲಿಸ್ನೋರು ಯಾವ ವೇಷದಲ್ಲಾದರೂ ಬರ್ತಾರೆ ಅಂತ ನನಗೆ ಗೊತ್ತು. ನೀವು ಹೊರಟುಹೋಗಿ. ಹೋಗಿ.....ಹೋಗೀ.... "

"ಓ..... ಕೇ. ನಾವು ಹೋಗ್ತೀವಿ. ನೀವು ಹೇಗಿದೀರಿ ಅಂತ ನೋಡಿ ಹೋಗೋಣ ಅಂತ ಬಂದೆವು. ಯಾಕೇಂದ್ರೆ ನಾವೇ ಅವತ್ತು ನಿಮ್ಮನ್ನು ಈ ನರ್ಸಿಂಗ್ ಹೋಂಗೆ ಸೇರಿಸಿದೋರು....... ನಮ್ಮನ್ನು ನೋಡಬೇಕು ಅಂತ ಡಾಕ್ಟರ ಹತ್ತಿರ ಹೇಳಿದ್ರಂತೆ."

"ಓ...... ನೀವೇನೋ" ಎನ್ನುತ್ತಾ ವಸುಧಾ ಎದ್ದು ಕೂತಳು.

"ನಿಮಗ್ಯಾರು ಹೇಳಿದರು ಇಲ್ಲಿಗೆ ನನ್ನನ್ನು ಕರೆತಂದು ಸೇರಿಸೋಕ್ಕೆ. ನಾನು ಅಲ್ಲೇ ಬಿದ್ದು ಸತ್ತಿರುತ್ತಿದ್ದೆ...... " ಮೂರ್ಖಳಂತೆ ಮಾತನಾಡಿದಳು.

"ಹಾಗಲ್ಲ......" ಮಹೇಶ್ ಏನೋ ಹೇಳಲು ಹೋದವನನ್ನು ತಡೆದಳು.

"ಹಾಗಲ್ಲ...... ಹೀಗಲ್ಲ. ನೀವ್ಯಾರು ಅಂತ ನನ್ನ ವಿಷಯಕ್ಕೆ ಬರೋಕೆ ಆಂ!" ಅಂತ ಗುಡುಗಿದಳು. ಮಹೇಶ ಹಿಂದೆ ಸರಿದ.

"ನಾವು ನಿಮ್ಮವೆಲ್ ವಿಷರ್..... ನಿಮ್ಮ ಒಳ್ಳೇದಕ್ಕೆ ಹೀಗೆ ಮಾಡಿದೆವು" ಈಗ ಶ್ರೀಕಾಂತ ನುಡಿದ.

"ಓಹೋಹೋ..... ವೆಲ್ ವಿಷರ್ ಅಂತೆ ವೆಲ್ ವಿಷರ್..... ಹಾಗಾದ್ರೆ ನನಗೊಂದು ಹೆಲ್ಪ್ ಮಾಡಿ. ನನ್ನನ್ನು ಇಲ್ಲಿಂದ ಹಾಸ್ಟೆಲ್ಲಿಗೆ ಕರೆದುಕೊಂಡು ಹೋಗಿಬಿಡಿ. ನಾನು ಇಲ್ಲಿರೋಲ್ಲ. ತಕ್ಷಣಕ್ಕೆ ಅಷ್ಟು ಮಾಡಿ. "

"ಸಾರಿ ಮೇಡಂ. ಆ ಹಾಸ್ಟೆಲನ್ನು ಮುಚ್ಚಿಬಿಟ್ಟಿದ್ದಾರೆ. ಈಗ ಅದು ಪೊಲೀಸರ ವಶದಲ್ಲಿದೆ. ಈಗ ಅಲ್ಲಿಗೆ ಹೋಗುವಂತಿಲ್ಲ. ನಿಮ್ಮ ತಂದೆ ಮನೆಗೆ ವಾಪಸ್ಸು ಹೋಗಬಹುದು"

"ನನ್ನ ತಂದೆ ಮನೆಗಾ? ನನಗೆ ತಂದೆ ಇದ್ದಾರೆ ಅಂತ ನಿಮಗ್ಯಾರು ಸುಳ್ಳು ಹೇಳಿದರು?" ಸೊಟ್ಟ ನಗೆ ನಕ್ಕು ಕೇಳಿದಳು.

"ಹಾಸ್ಟೆಲ್ಲಿನವರೇ ನಿಮ್ಮ ತಂದೆ ಅಡ್ರೆಸ್ ಕೊಟ್ಟಿದ್ದಾರೆ. ನಿಮ್ಮ ತಂದೆ ಜಾಮೀನಿನ ಮೇಲೆ ನಿಮ್ಮನ್ನು ಬಿಡಿಸಿದ್ದಾರೆ. ಇಲ್ಲದಿದ್ದರೆ ನೀವು ಜೈಲಿನಲ್ಲಿರುತ್ತಿದ್ದಿರಿ...." ಮಹೇಶ ನುಡಿದ. ಆದರೆ ಅವಳು ಹೆದರಿದಂತೆ ಅನಿಸಲಿಲ್ಲ.

"ನಾನೇಕೆ ಜೈಲಿನಲ್ಲಿರಬೇಕು?" ನಾನೇನು ತಪ್ಪು ಮಾಡಿದ್ದೀನಿ? ಮಹೇಶ ಏನಾದರೂ ಆಡುವ ಮೊದಲೇ ಶ್ರೀಕಾಂತ ಅವನ ಮೊಣಕೈ ಮುಟ್ಟಿದ.

"ಅದೆಲ್ಲಾ ಹೇಳ್ತಾ ಹೋದರೆ ತುಂಬಾ ಹೊತ್ತಾಗುತ್ತೆ. ಈಗ ನಾವು ಹೋಗೋಣ. ಮೇಡಂ ಮಲಗಲಿ, ನಾಳೆ ಮತ್ತೆ ಬರೋಣ" ಅಂತ ಹಿಂದೆ ಸರಿದ.

"ಏನೋ ಮುಚ್ಚಿಡ್ತಿದೀರಿ ನೀವು. ಅದೇನು ಅಂತ ಹೇಳಲೇಬೇಕು" ಎನ್ನುತ್ತಾ ಏಳಲು ಹೋದ ವಸುಧಾ ಆಯತಪ್ಪಿ ಕೆಳಗೆ ಬಿದ್ದುಬಿಟ್ಟಳು. ಅವರಿಬ್ಬರ ಎದುರಿಗೆ ಬಿದ್ದುದು ಅವಮಾನವಾದಂತಾಗಿತ್ತು. ಎಬ್ಬಿಸಲು ಬಂದ ನರ್ಸನ್ನು ಹಿಂದೆ ತಳ್ಳಿ. ತಾನೇ ಎದ್ದು ಮಂಚದ ಮೇಲೆ ಮಲಗಿ ಮುಖದಮೇಲೆ ಮುಸುಕನೆಳೆದುಕೊಂಡಳು. ಮುಸುಕಿನೊಳಗೆ ಮುಸಿ ಮುಸಿ

ಅಳುತ್ತಾ ಇದ್ದುದು ಕೇಳಿಸಿತ್ತು. ಇಬ್ಬರಿಗೂ ಖೇದವೆನಿಸಿತು. ಒಬ್ಬರಮುಖ ಒಬ್ಬರು ನೋಡಿಕೊಂಡರು.

"ಗುಡ್‌ನೈಟ್ ವಸುಧಾ" ಎಂದು ಇಬ್ಬರೂ ವಿಷ್ ಮಾಡಿದ್ದು ಕೇಳಿಸಿದರೂ ಅವಳು ಮುಸುಕು ತೆಗೆಯಲಿಲ್ಲ. ಅಲ್ಲೇ ಒಂದು ಗಳಿಗೆ ನಿಂತಿದ್ದು ಇಬ್ಬರೂ ರೂಮಿನಿಂದ ಹೊರಗೆ ಬಂದರು.

"ಅವಳು ಹೇಗಿದ್ದಾಳೆ ಅಂತ ನೋಡಿದ್ಯಾ? ಆ ಮಬ್ಬು ಬೆಳಕಿನಲ್ಲಿ ಮುಖವೇ ಸರಿಯಾಗಿ ಕಾಣುತ್ತಿರಲಿಲ್ಲ" ಎಂದು ಮಹೇಶ ನುಡಿದಾಗಿ ತಲೆಯಾಡಿಸಿ ಹೌದೆಂದ. ಶ್ರೀಕಾಂತ ಯೋಚಿಸುತ್ತಿದ್ದುದೇ ಬೇರೆ. ಬಹುಶಃ ತಾವು ಮಾಡಿದ್ದು ಸರಿ ಹೋಗಲಿಲ್ಲವೋ ಏನೋ. ಆ ಹುಡುಗಿಗೆ ನಮ್ಮ ಮಾತಿನ ಮೇಲೆ ವಿಶ್ವಾಸವಿಲ್ಲ..... ಡಾಕ್ಟರು ಹೇಳಿದಂತೆ ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋದರೆ ... ಏನಾದರೂ ಅಪಾಯ ಮಾಡಿಕೊಂಡರೇ? " ಅವನಿಗೆ ಬೇಸರವಾಗಿತ್ತು.

ರಾತ್ರಿ ಮಲಗಿದರೂ, ನಿದ್ದೆ ಹತ್ತಲಿಲ್ಲ. ಮಬ್ಬು ಬೆಳಕಿನಲ್ಲಿ ಏಳಲು ಹೋಗಿ ಬಿದ್ದ ಹುಡುಗಿಯ ಚಿತ್ರವೇ ಕಣ್ಣ ಮುಂದೆ ಮತ್ತೆ ಮತ್ತೆ ಬರುತ್ತಿತ್ತು. ಪಾಪ, ತುಂಬಾ ನಿಶ್ಶಕ್ತಿಯಾಗಿರಬೇಕು. ಆದರೂ ಗರ್ವದ ಮಾತುಗಳಿಗೇನೂ ಕಡಿಮೆ ಇರಲಿಲ್ಲ ಅಂತನ್ನಿಸಿದಾಗ, ಮತ್ತೊಮ್ಮೆ ಅವಳನ್ನು ಕಂಡು ಸರಿಯಾಗಿ ಮಾತನಾಡಿ ಅವಳ ತಪ್ಪು ಕಲ್ಪನೆಗಳನ್ನು ಹೋಗಲಾಡಿಸಬೇಕೆಂದು ಕೊಂಡ. ಇದಕ್ಕೆ ತಾನು ರಮಳ ಸಹಾಯ ಪಡೆಯಬೇಕೆಂದುಕೊಂಡ. ತಕ್ಷಣವೇ ಎದ್ದು ರಮಳ ರೂಮಿನ ಬಾಗಿಲಲ್ಲಿ ನಿಂತು ಮೆಲ್ಲಗೆ ರಮಾ ರಮಾ..... ಎಂದು ಕರೆದ. ನಿದ್ದೆಯಲ್ಲಿದ್ದವಳಿಗೆ ಎಚ್ಚರವಾಯಿತು. ಯಾರೋ ತನ್ನನ್ನು ಕರೆಯುತ್ತಿದ್ದಾರೆ. ಪ್ರಕಾಶನ ಧ್ವನಿ ಇದ್ದಂತಿದೆ ಎಂದುಕೊಂಡು ಹೆದರಿದಳು. ಉಸಿರಾಡಲು ಕಷ್ಟವೆನಿಸಿತ್ತು. ಪಕ್ಕದಲ್ಲಿದ್ದ ಮಗನನ್ನು ತಬ್ಬಿ ಕೊಂಡಳು.

ಮತ್ತೊಮ್ಮೆ ಶ್ರೀಕಾಂತ ಕರೆದ. "ನಿದ್ದೆ ಬಂದಿದೆಯಾ? ರಮಾ" ಅಂತ ಕೇಳಿದ. ಯಾರು ಎಂದು ಕೆಳಗಿನ ಧ್ವನಿಯಲ್ಲಿ ಪ್ರಶ್ನಿಸಿದಳು.

"ನಾನು ಶ್ರೀಕಾಂತ, ಸ್ವಲ್ಪ ನಿನ್ನ ಹತ್ತಿರ ಮಾತನಾಡಬೇಕಾಗಿತ್ತು. ಹೊರಗೆ ಬರ್ತೀಯಾ? ಕೇಳಿದ."

"ಹೂಂ, ಏನಪ್ಪಾ ಅದು..... ಇಷ್ಟು ಹೊತ್ನಲ್ಲಿ?" ಎಂದು ಎದ್ದು ಬಂದಳು. ಕೆದರಿದ ತಲೆ, ನೈಟಿ ಧರಿಸಿದ್ದವಳು ವಿಚಿತ್ರವಾಗಿ ಕಂಡಳು. ಅವನಿಗೆ ಮುಜುಗರವೆನಿಸುತ್ತಿತ್ತು.

"ವಿಶೂ ಮಲಗಿದಾನಾ? ಇಲ್ಲಿ ಬೇಡ. ನಮ್ಮ ರೂಮಿಗೆ ಹೋಗಿ ಮಾತನಾಡೋಣ ಬಾ...." ಎಂದ.

ಅವಳು ಅವನನ್ನೇ ಸಂದೇಹದಿಂದ ನೋಡಿದಳು. ಎಂದೂ ಇಲ್ಲದ್ದು... ಈ ಹೊತ್ನಲ್ಲಿ ಎಬ್ಬಿಸಿ ತನ್ನ ರೂಮಿಗೆ ಕರೆಯುತ್ತಿದ್ದಾನಲ್ಲ. ನಿಷ್ಕಲ್ಮಶವಾದ ಅವನ ಮುಖದಲ್ಲಿ ಯಾವ ಕೆಟ್ಟ ಭಾವನೆಗಳೂ ಇಲ್ಲವೆನ್ನುವುದನ್ನು ಗಮನಿಸಿದಳು. ಆದರೂ, "ಬೆಳಿಗೆ ಮಾತನಾಡಿದ್ದರೆ ಆಗ್ತಿರಲಿಲ್ವಾ? ಅದೇನದು ಹೇಳು" ಅನ್ನುತ್ತಾ ಹಾಲಿನಲ್ಲಿದ್ದ ಸೋಫಾದ ಮೇಲೆ ಕುಳಿತಳು. ಅವನೂ ಅಲ್ಲೇ ಕುಳಿತ.

"ನೀನು ನಾಳೆ ನನ್ನ ಜತೆಗೆ ಆಸ್ಪತ್ರೆಗೆ ಬರಬೇಕು. ಅಲ್ಲಿ ನಮ್ಮ ಪರಿಚಯದವರ ಮಗಳೊಬ್ಬಳನ್ನು ಅಡ್ಮಿಟ್ ಮಾಡಿದ್ದಾರೆ. ಆ ಹುಡುಗಿಗೆ ನೀನು ಸ್ವಲ್ಪ ತಿಳುವಳಿಕೆ ಹೇಳಬೇಕು"

"ಏಕೆ? ಏನಾಗಿದೆ ಅವಳಿಗೆ?" ಕೇಳಿದಳು.

"ಅವಳು ಡ್ರಗ್ಸ್‌ತಗೋತಿದ್ದಳು. ಈಗ ಟ್ರೀಟ್‌ಮೆಂಟ್ ಕೊಡ್ತಾ ಇದ್ದಾರೆ. ಯಾರ ಮಾತನ್ನು ನಂಬುವುದಿಲ್ಲ. ತಂದೆ ಮನೆಗೆ ಹೋಗುವುದಿಲ್ಲ ಅಂತ ಹಠ ಮಾಡ್ತಿದಾಳೆ"

"ನಾನು ಹೇಳಿದರೆ ಹೋಗಿ ಬಿಡ್ತಾಳಾ?" ಆಕಳಿಸುತ್ತಾ ಕೇಳಿದಳು.

"ಅವಳಿಗೆ ಯಾರೂ ಸ್ನೇಹಿತೆಯರಿಲ್ಲ. ನೀನು ಅವಳ ಸ್ನೇಹಗಳಿಸಿ, ಅವಳ ಮನಸ್ಸು ಬದಲಾಗುವಂತೆ ಮಾಡಬೇಕು"

"ಇದೆಲ್ಲಾ ನನ್ನಿಂದ ಸಾಧ್ಯವಿಲ್ಲಪ್ಪಾ. ಮೊದಲೇ ನನ್ನ ಮನಸ್ಸೇ ಸರಿ ಇಲ್ಲ. ಇಂಥದ್ದನ್ನೆಲ್ಲಾ ನನಗೆ ಹೇಳಲೇ ಬೇಡ."

"ಯಾಕೆ ಸಾಧ್ಯವಿಲ್ಲ. ಒಂದು ಅಸಹಾಯಕ ಹುಡುಗಿಗೆ ಸಹಾಯ ಮಾಡಿದರೆ, ನಿನಗೂ ಒಂದು ತರಹ ಖುಷಿ ಸಿಗುತ್ತೆ. ಪ್ಲೀಸ್ ಇಲ್ಲವೆನ್ನಬೇಡ"

"ಏನು ಖುಷಿ ಸಿಗುತ್ತೊ?..... ನಿನ್ನ ಮಾತಿಗೆ ಇಲ್ಲವೆನ್ನಲಾಗದೇ ಒಪ್ಪಬೇಕು ಅಷ್ಟೇ..." ಮತ್ತೊಮ್ಮೆ ಆಕಳಿಸಿದಳು.

"ಹಾಗಾದರೆ ಒಪ್ಪಿದೆ ಅನ್ನು.... ಥ್ಯಾಂಕ್ ಯೂ ರಮಾ" ಎಂದಿದ್ದ.

ಕತ್ತಲೆಯಲ್ಲಿ ಕುಳಿತು ಪಿಸುದನಿಯಲ್ಲಿ ಮಾತನಾಡುತ್ತಿದ್ದವರ ದನಿ ಕೇಳಿ ಪಾರ್ವತಿ ಎಚ್ಚೆತ್ತಳು.

"ಯಾರು ಯಾರು..... " ಎಂದು ಮಲಗಿದ್ದಲ್ಲಿಂದಲೇ ಕೂಗಿದಳು. ಶ್ರೀಕಾಂತ 'ನಾನು' ಎಂದ.

ಇಷ್ಟು ಹೊತ್ತಾದರೂ ಇನ್ನೂ ಮಲಗಿಲ್ವಾ? ಏನು ಮಾಡ್ತಿದ್ದೆ ಎನ್ನುತ್ತಾ ಹೊರಗೆ ಬಂದಳು. ಸೋಫಾದ ಮೇಲೆ ಶ್ರೀಕಾಂತನ ಎದುರಿಗೆ ಕುಳಿತಿದ್ದ ರಮಳನ್ನು ಕಂಡು ಅವಳ ಬುದ್ಧಿ ಎತ್ತೆತ್ತಲೋ ಓಡಿತು. ಆದರೂ ಸಂಶಯವನ್ನು ಪ್ರಕಟಿಸದೇ, ನುಡಿದಳು.

"ಇನ್ನು ನೀನ್ಯಾಕೆ ಮಲಗಿಲ್ಲ ರಮಾ.... ಇಷ್ಟು ಹೊತ್ನಲ್ಲಿ ಏನು ಮಾತು? ಬೆಳಿಗ್ಗೆ ಆಡಿದ್ದರೆ ಆಗುತ್ತಿರಲಿಲ್ವಾ? ಹೋಗು ಮಲಕ್ಕೋ ಹೋಗು ವಿಶೂ ಎದ್ದು ಅಳ್ತಾನೆ ಹೋಗು...... "

"ಹೋಗ್ತಾಳೆ ಬಿಡಮ್ಮ. ನಾನೇ ಏನೋ ಕೇಳಬೇಕಾಗಿತ್ತು. ಎಬ್ಬಿಸಿ ಕರೆದು ಮಾತನಾಡಿದೆ. ಎಲ್ಲರಿಗೂ ಎಚ್ಚರವಾಗುತ್ತಲ್ಲ ಅಂತ ದೀಪ ಹಾಕಿರಲಿಲ್ಲ" ಅಷ್ಟೇ.

"ಮಾತು ಮುಗಿದಿದ್ದರೆ ನೀನೂ ಹೋಗಿ ಮಲಕ್ಕೋ ಸುಮ್ಮನೇ" ತಾಯಿ ಗದರಿದಾಗ ಅವನಿಗೆ ಪೆಚ್ಚಾಯಿತು. ರೂಮಿಗೆ ಹೋಗಿ ದೀಪವಾರಿಸಿ ಮಲಗಿದ. ಮತ್ತೆ ತನ್ನ ರೂಮಿಗೆ ಹೋಗಿ ಮಲಗಿದ ಪಾರ್ವತಿಗೆ ನಿದ್ದೆ ದೂರವಾಯಿತು. ಗಂಡನಿಲ್ಲದ ಸೊಸೆ, ಮದುವೆ ಇಲ್ಲದ ಮಗ, ಎಲ್ಲರೂ ಮಲಗಿರುವ ಹೊತ್ತಿನಲ್ಲಿ ಕತ್ತಲಲ್ಲಿ ಕೂತು ಮಾತನಾಡಲು ಏನಿರುತ್ತದೆ? ಅವಳ ತಲೆ ಕೊರೆಯತೊಡಗಿತು. ಶ್ರೀಕಾಂತ ಮದುವೆಯಾಗಲು ಒಪ್ಪುತ್ತಿಲ್ಲ. ರಮಳ ಮೇಲಿನ ಸಹಾನುಭೂತಿ ಹೆಚ್ಚು ಇವನಿಗೆ. ಇಬ್ಬರೂ ಮೊದಲ್ನಿಂದ ಸ್ನೇಹಿತರು. ಆ ಸ್ನೇಹ ಎಲ್ಲಿಯವರೆಗೆ ಮುಂದುವರೆಯುತ್ತದೆಯೋ, ಇನ್ನೇನೇನು ಕಾಣಬೇಕಾಗಿದೆಯೋ ಈ ವಯಸ್ನಲ್ಲಿ? ನಿರಾತಂಕವಾಗಿ ಮಲಗಿ ನಿದ್ರಿಸುತ್ತಿದ್ದ ಗಂಡನನ್ನು ಎಬ್ಬಿಸಿ ಜಗಳವಾಡುವ ಮನಸ್ಸಾಯಿತು. ಆದರೆ ಹಾಗೆ ಮಾಡದೇ ಪಿಳಿ ಪಿಳಿ ಕಣ್ಣು ಬಿಟ್ಟು ಮಲಗಿದಳು.

ಬೆಳಿಗ್ಗೆ ಎಂದಿನಂತೆ ತಿಂಡಿ ಕಾಫಿ ಮುಗಿಸಿ ರಮಾ ಸಿದ್ಧಳಾದಳು. "ಒಂದೆರಡು ದಿನ ರಜ ಹಾಕಿದೀನಿ ಅಂದ್ಯಲ್ಲಾ ರಮಾ.... ಮತ್ತೆ ಎಲ್ಲಿಗೋ ಹೊರಟದೀಯ. ನಾನು ಇವತ್ತು ಶಾಸ್ತ್ರಿಗಳ ಮನೆಗೆ ಹೋಗಬೇಕು ಅಂತ ಅಂದ್ಕೊಂಡಿದ್ದೆ."

"ಬೇಗ ಬಂದ್ಬಿಡ್ತೀನಿ ಅಮ್ಮಾ. ಇಲ್ಲೇ ಸ್ವಲ್ಪ ಕೆಲಸವಿದೆ..... " ಎನ್ನುತ್ತಾ ಮಗನನ್ನೂ ಸಿದ್ಧ ಮಾಡಿದಾಗ, ಮತ್ತೆ ಎಲ್ಲಿಗೆ ಅಂತ ಕೇಳಲಿಲ್ಲ. ಎಲ್ಲೋ ತಾಯಿ ಮನೆ ಕಡೆ ಏನೋ ವಿಷಯಕ್ಕೆ ಹೋಗುತ್ತಿದ್ದಾಳೆ ನನಗೇಕೆ ಎಂದು ಕೊಂಡಳು. ಶ್ರೀಕಾಂತನೂ ನಿತ್ಯಕ್ಕಿಂತ ಸ್ವಲ್ಪ ಬೇಗ ಸಿದ್ದನಾದ. ಮೂವರು

ಒಟ್ಟಾಗಿ ಹೊರಟಾಗ ಪಾರ್ವತಿ ಗಂಭೀರಳಾದಳು, ಏನೋ ಸರಿ ಇಲ್ಲ. ಎಲ್ಲೋ ಇಬ್ಬರೂ ತಪ್ಪುತ್ತಿದ್ದಾರೆ ಅಂತ ಎನಿಸಿತ್ತು. ಆದರೆ ಯಾರನ್ನು ಎದುರಿಗೇ ಕೇಳುವಂತಿಲ್ಲ. ಯಾರಿಗೂ ಕಾಣದಂತೆ ಗಮನಿಸಬೇಕು ಅಂತಂದು ಕೊಂಡರೂ, ಇದ್ಯಾವ ಕರ್ಮ ನನಗೆ ಎಂದು ಹಳಿದುಕೊಳ್ಳುವಂತಾಗಿತ್ತು.

"ಖಾಯಿಲೆ ಮಲಗಿರುವ ಹುಡುಗಿ ಅಂತೀಯ ಒಂದಿಷ್ಟು ಹೂವು ಹಣ್ಣುಗಳನ್ನು ತಗೊಳ್ಳೋಣ" ದಾರಿಯಲ್ಲಿ ರಮಾ ನುಡಿದಿದ್ದಳು. ಮಾರ್ಕೆಟ್ಟಿಗೆ ಹೋಗಿ ಹೂವು ಹಣ್ಣು ಖರೀದಿಸಿದರು.

"ಶ್ರೀಕಾಂತ ವಿಶೂನ ಎತ್ತಿಕೊಂಡು ಹೊರಗೇ ನಿಂತ. ರಮಾ ಒಬ್ಬಳೇ ಒಳಗೆ ಹೋದಳು. ಮಂಚದ ಮೇಲೆ ಕುಳಿತು, ಕಿಟಕಿಯಿಂದ ಹೊರಗಿನ ದೃಶ್ಯಗಳನ್ನು ನೋಡುತ್ತಾ ಇದ್ದ ವಸುಧಾ ಹೆಜ್ಜೆ ಸದ್ದಾದರೂ ಇತ್ತ ತಿರುಗಲಿಲ್ಲ"

"ಗುಡ್ ಮಾರ್ನಿಂಗ್? ಎಂದಳು ರಮಾ ರಾಗವಾಗಿ,"

ಇತ್ತ ತಿರುಗಿದ ವಸುಧಾ ಯಾವ ಭಾವನೆಯನ್ನೂ ತೋರಲಿಲ್ಲ.

"ಹಲೋ! ಹೇಗಿದೀರಾ? ಮತ್ತೆ ಕೇಳಿದಳು" ಅವಳ ಕೈಗೆ ಹೂಗಳನ್ನು ಕೊಡುತ್ತಾ, ವಸುಧಾ ಹೂಗಳನ್ನು ತೆಗೆದುಕೊಂಡು ಪಕ್ಕದ ಟೇಬಲ್ ಮೇಲೆ ಇಟ್ಟು, "ನೀವ್ಯಾರೋ ನನಗೆ ಗೊತ್ತಾಗಲಿಲ್ಲ" ಎಂದಳು, ಸಂಶಯದಿಂದ ಕೆಕ್ಕರಿಸಿ ನೋಡುತ್ತಾ.

"ನಾನು ರಮಾ ಅಂತ. ನಿಮ್ಮ ಸ್ನೇಹಿತೆ" ಎಂದು ನುಡಿದು ಮುಗುಳು ನಕ್ಕಳು.

"ನನಗೆ ಯಾರೂ ರಮಾ ಅನ್ನೋ ಸ್ನೇಹಿತೆಯರಿಲ್ಲ" ಕಡ್ಡಿ ಸುಂಡು ಮಾಡಿದಂತೆ ನುಡಿದಳು.

"ಹೌದು. ನಾನು ನಿಮಗೆ ಹೊಸಬಳು. ನೀವು ನನಗೆ ಹೊಸಬರೇ. ನಾನೇ ನಿಮ್ಮ ಪರಿಚಯ ಮಾಡಿಕೊಂಡೆ"

"ಏಕೆ? ನನ್ನಿಂದ ಏನಾಗಬೇಕು ನಿಮಗೆ?" ರಮ ತಬ್ಬಿಬ್ಬಾದಳು ತಕ್ಷಣಕ್ಕೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ತಡವರಿಸಿದಳು ಕೈಲಿದ್ದ ಹಣ್ಣಿನ ಚೀಲವನ್ನು ಅವಳಿಗಿತ್ತು...... ಹಣ್ಣು ತಿಂತೀರಾ.... ಹೆಚ್ಚಿ ಹೋಳು ಮಾಡಿ ಕೊಡ್ಲಾ?" ಅಂತ ಕೇಳಿದಳು.

"ಹಣ್ಣು ಹೂವು ಯಾವುದೂ ನನಗೆ ಬೇಡ. ನನಗೆ ಒಂದು ಸಹಾಯ ಮಾಡಿ. ಇಲ್ಲಿಂದ ನನ್ನನ್ನು ಹೊರಕ್ಕೆ ಕರೆದುಕೊಂಡು ಹೋಗಿ, ನಾನು ಇಲ್ಲಿ ಇರೋಲ್ಲ. "

ರಮಾ ನಕ್ಕಂತೆ ಮಾಡಿದಳು.

"ಓ..... ಅದಕ್ಕೇನಂತೆ ಕರೆದುಕೊಂಡು ಹೋಗ್ತೀನಿ. ಆದರೆ ಅದಕ್ಕೆ ಡಾಕ್ಟರ್ ಪರ್ಮಿಶನ್ ಕೊಡಬೇಕು"

"ನಾನು ನೀವು ಕೇಳಿದಷ್ಟು ದುಡ್ಡು ಕೊಡ್ತೀನಿ. ಪ್ಲೀಸ್. ಹೇಗಾದ್ರೂ ಸರಿ. ಇಲ್ಲಿಂದ ಕರೆದುಕೊಂಡು ಹೋಗಿ. ನನಗೆ ಇಲ್ಲಿರೋಕೆ ಆಗ್ತಾ ಇಲ್ಲ."

" ಓ.ಕೆ. ನಾನು ಡಾಕ್ಟರ ಹತ್ರ ಮಾತಾಡ್ತೀನಿ. ನೀವು ಬೇಗ ರಿಕವರ್ ಆಗಿ. ನಾನು ಆದಷ್ಟು ಬೇಗ ನಿಮ್ಮನ್ನು ಕರೆದುಕೊಂಡು ಹೋಗಲು ವ್ಯವಸ್ಥೆ ಮಾಡ್ತೀನಿ"

"ನನಗೆ ಇವತ್ತೇ, ಈಗಲೇ ಹೋಗಬೇಕು ಅಂತ ಆಸೆ"

"ಇವತ್ತೇ ಈಗಲೇ ಅಂದ್ರೆ ಹೇಗೆ ಆಗುತ್ತೆ, ಡಾಕ್ಟರ್ಸ್ ಬಂದು ಚೆಕ್ ಅಪ್ ಮಾಡಿ, ನಿಮ್ಮ ಇಂಪ್ರೂವ್‌ಮೆಂಟ್ ಹೇಗಿದೆ ಅಂತ ನೋಡಬೇಕು. ಇಲ್ಲಿಂದ ಡಿಸ್‌ಚಾರ್ಜ್ ಮಾಡಿಸೋಕೆ ಬೇಕಾದಷ್ಟು ಕೆಲಸಗಳಿರುತ್ತವೆ. ನಾನು ದುಡ್ಡು ಹೊಂದಿಸಿಕೊಂಡು ಬರಬೇಕು. ತಕ್ಷಣಕ್ಕೆ ನನ್ನ ಹತ್ತಿರ ದುಡ್ಡಿಲ್ಲ" ರಮಾ ವಸುಧಾಳನ್ನು ಮೆಚ್ಚಿಸಲು, ತನಗೆ ತೋಚಿದ್ದೆಲ್ಲಾ ಹೇಳಿದಳು.

"ನನ್ನ ಅಕೌಂಟ್‌ನಲ್ಲಿ ಬೇಕಾದಷ್ಟು ದುಡ್ಡಿದೆ. ನನ್ನನ್ನು ಬ್ಯಾಂಕಿಗೆ ಕರೆದುಕೊಂಡು ಹೋಗಿ. ನಾನು ಡ್ರಾ ಮಾಡಿಸಿಕೊಡ್ತೀನಿ"

"ಸರಿ. ನಾನು ನಾಳೆ ಬಂದು ಕರೆದುಕೊಂಡು ಹೋಗ್ತೀನಿ. ಇವತ್ತು ಆಗೊಲ್ಲ" ಅಷ್ಟರಲ್ಲಿ ಹೊರಗಿನಿಂದ ಶ್ರೀಕಾಂತ ಮಗುವನ್ನು ಎತ್ತಿಕೊಂಡು ಬಂದ. ವಸುಧಾ ವಿಶೂನೇ ನೋಡಿದಳು. ಮುಖದಲ್ಲಿ ಮಂದಹಾಸ ಮೂಡಿತು. ಅದನ್ನು ಇಬ್ಬರೂ ಗಮನಿಸಿದರು.

"ರಮಾ..... ಇವನು ಹಠ ಮಾಡ್ತಿದಾನೆ. ಎತ್ತಿಕೋ. "ಹಲೋ. ಹೇಗಿದೀರಾ ಮೇಡಂ...." ಎಂದು ಕೇಳಿದ.

"ನೀವ್ಯಾರು?" ಕಿರಿಗಣ್ಣು ಮಾಡಿ ಕೇಳಿದಳು.

"ಇವರು ಯಾರು ಅಂತ ಗೊತ್ತಾಗಲಿಲ್ವಾ ವಸುಧಾ. ಇವರು ನಿಮ್ಮ ಸೋದರಮಾವ ಶ್ರೀಕಾಂತ ಅಂತ....." ರಮಾ ಲಘುವಾಗಿ ಸುಳ್ಳು ನುಡಿದಳು.

"ಸುಳ್ಳು, ನನಗೆ ಯಾವ ಸೋದರ ಮಾವನೂ ಇಲ್ಲ" ಖಂಡಿತವಾಗಿ ನುಡಿದಳು.

"ನಿನಗೆ ಗೊತ್ತಿಲ್ಲ. ನೀನು ಮನೆಯಲ್ಲೇ ಇರಲಿಲ್ಲವಲ್ಲ. ಬೋರ್ಡಿಂಗ್ ಸ್ಕೂಲಿನಲ್ಲಿ ಓದುತ್ತಿದ್ದೆಯಲ್ಲಾ. ನೀನು ಇವರನ್ನು ನೋಡಿರಲೇ ಇಲ್ಲ."

ಅವಳ ಸಂಬೋಧನೆ ಏಕವಚನಕ್ಕೆ ತಿರುಗಿತ್ತು.

"ಇರಬಹುದು. ಆದರೆ ಇವರು ಈಗೇಕೆ ಬಂದರು"

"ಹಿಂದೆಯೇ ಬಂದಿದ್ದರು. ಆದರೆ ನೀನು ಹಾಸ್ಟೆಲ್ಲಿನಲ್ಲಿದ್ದೆಯಲ್ಲ, ನಿನ್ನನ್ನು ಹುಡುಕಿಸಿ ಪತ್ತೆ ಮಾಡುವುದು ಕಷ್ಟವಾಯಿತು ಅಷ್ಟೆ. ಬೇಕಾದರೆ ನಿಮ್ಮ ತಂದೇನ ಕೇಳು ಹೇಳ್ತಾರೆ" ಎಂದಳು ರಮಾ.

ವಸುಧಾ ಮುಖ ಅತ್ತ ತಿರುಗಿಸಿದಳು. ಅವಳಿಗೆ ಅವಳ ತಂದೆಯ ಬಗ್ಗೆ ಮಾತನಾಡುವುದು ಇಷ್ಟವಾಗಿರಲಿಲ್ಲ.

"ಓ.ಕೇ. ನಾಳೆ ಮತ್ತೆ ಬರ್ತೀನಿ ವಸುಧಾ...... ವಿಶೂ ಟಾಟಾ ಮಾಡೋ ಆಂಟಿಗೆ" ಎಂದು ಅವನ ಕೈ ಎತ್ತಿ ಆಡಿಸಿದಾಗ ವಸುಧಾ ಇತ್ತ ತಿರುಗಿದಳು.

"ಬರ್ತೀಯಾ" ನನ್ನ ಹತ್ತಿರ ಎನ್ನುವಂತೆ ಅವನನ್ನು ಕರೆದಾಗ ಅವನು ಇಲ್ಲವೆನ್ನುವಂತೆ ತಲೆಯಾಡಿಸಿದ.

"ಬರೊಲ್ಲ ಅಂತೀಯ ಕಳ್ಳ...... ಚಾಕ್ಲೇಟ್ ಕೊಡ್ತೀನಿ ಬಾ....." ಅಂತ ಮತ್ತೆ ಮತ್ತೆ ಕರೆದಳು.

"ನೋಡಿದ್ರಾ ಆಂಟಿ.... ಹೇಗಾಡ್ತಾನೆ ಇವನು?"

"ಇವತ್ತೇ ಫಸ್ಟ್ ಟೈಂ ನಿನ್ನನ್ನ ನೋಡ್ತಾ ಇರೋದು ಅಲ್ವಾ? ಒಂದೆರಡು ದಿನ ಕಳೆಯಲಿ ನಿನ್ನ ಬೆಸ್ಟ್ ಫ್ರೆಂಡ್ ಆಗ್ತಾನೆ"

"ನಾಳೇನೂ ಕರೆದುಕೊಂಡು ಬನ್ನಿ ಆಂಟಿ...... "

"ನನ್ನ ಆಂಟಿ ಅಂತ ಕರೆಯಬೇಡ" ರಮಾ ಅನ್ನು ಸಾಕು.

ಹೂಂ ಎನ್ನುವಂತೆ ಅವಳು ತಲೆಯಾಡಿಸಿದಳು. ಹೊರಗೆ ಬರುತ್ತಿದ್ದಂತೆ ಶ್ರೀಕಾಂತ ಗದರಿದ್ದ.

"ಅವಳ ಹತ್ತಿರ ಏನೇನೋ ಸುಳ್ಳು ಯಾಕೆ ಹೇಳಿದೆ?"

"ಅವಳೊಂದು ವಿಚಿತ್ರ ಸ್ವಭಾವದ ಹುಡುಗಿ ಅಂತ ನೀನೇ ಹೇಳಿದ್ದೆ. ಮುಗ್ಧೆ ಸಹಾ. ಅವಳ ಒಳ್ಳೇದಕ್ಕೆ ಸುಳ್ಳು ಹೇಳಿದ್ದು. ನೀನು ಅವಳ ಸೋದರ ಮಾವ ಅಂತ ನಾನು ಹೇಳಿದ ಮಾತ್ರಕ್ಕೆ ನೀನೇನು ಆಗಿ ಬಿಡ್ತೀಯಾ?"

"ಹಾಗಲ್ಲ ರಮಾ.... ಆ ಹುಡುಗಿ ಅದನ್ನೇ ನಿಜ ಅಂತ ತಿಳಿದುಕೊಂಡು ಬಿಟ್ಟರೇ..... ಆಮೇಲೆ ಸುಳ್ಳು ಅಂತ ತಿಳಿದಾಗ ಅವಳಿಗೆ ಕಷ್ಟವಾಗುತ್ತೆ ಅಲ್ವಾ? ನನ್ನ ಬಗ್ಗೆ ಕೆಟ್ಟ ಅಭಿಪ್ರಾಯ ಮೂಡುತ್ತೆ."

"ನಾಲ್ಕು ದಿನ ಕಳೀಲಿ. ನಾನೇ ನಿಜಾ ಏನೂಂತ ಹೇಳ್ತೀನಿ ಬಿಡು. ನನ್ನನ್ನ ಬೇಗ ಮನೆಗೆ ಕರೆದುಕೊಂಡು ಹೋಗಪ್ಪಾ. ಈ ಆಸ್ಪತ್ರೆಗಳಲ್ಲಿ ಹೆಚ್ಚು ಹೊತ್ತು ನಿಂತಿದ್ದರೆ ಮನಸ್ಸೇ ಕೆಟ್ಟುಹೋಗುತ್ತೆ" ಅವಸರಿಸಿದಳು.

"ಥ್ಯಾಂಕ್ ಯೂ..... ರಮಾ.... ಎನ್ನುತ್ತಾ ಎನ್ನುತ್ತಾ ಸ್ಕೂಟರ್ ಏರಿದ"

"ನನ್ನನ್ನ ನಮ್ಮ ಅಮ್ಮನ ಮನೆ ಹತ್ತಿರ ಇಳಿಸು. ಅಲ್ಲಿ ಸ್ವಲ್ಪ ಹೊತ್ತು ಇದ್ದು ಮನೆಗೆ ಹೋಗ್ತಿನಿ" ಎಂದಳು. ಅವನು ಅವಳನ್ನು ಅಲ್ಲಿ ಬಿಟ್ಟು ಸೀದಾ ತನ್ನ ಅಂಗಡಿಗೆ ಹೊರಟುಹೋದ.

*　　　　*　　　　*　　　　*

ಮಾರನೇ ಬೆಳಿಗ್ಗೆಯೂ ರಮಾ, ಶ್ರೀಕಾಂತ್ ಇಬ್ಬರೇ ಮತ್ತೆ ಒಟ್ಟಿಗೆ ಹೊರಟಾಗ, ಪಾರ್ವತಿ ಚಡಪಡಿಸಿದಳು. ತನಗೆ ತಿಳಿಯದಂತೆ ಇಬ್ಬರೂ ಏನೋ ಮಾಡುತ್ತಿದ್ದಾರೆ. ಆದರೆ ಕೇಳುವುದು ಹೇಗೆ? ಶ್ರೀಕಾಂತ ಕೋಪಿಸಿಕೊಂಡರೇ? ಈಗ ನಮಗೆ ಅವನೊಬ್ಬನೇ ದಿಕ್ಕು.......! ಆದರೆ ಯಾಕೋ ರಮಾಳನ್ನ ಏನನ್ನು ಕೇಳುವ ಮನಸ್ಸಾಗಲಿಲ್ಲ. ಅವಳನ್ನು ಹೇಗಾದರೂ ಸಧ್ಯಕ್ಕೆ ಅವಳ ತಾಯಿಯ ಮನೆಗೆ ಕಳಿಸಿಬಿಡಬೇಕು. ಬೇಕಾದರೆ ಶ್ರೀಕಾಂತನ ಮದುವೆಯಾದ ಮೇಲೆ ಮತ್ತೆ ಬರಲಿ. ಪಾರ್ವತಿಯ ಮನಸ್ಸು ಹಾಗೆ ಹೀಗೆ ಚಿಂತಿಸಿತು.

ಶ್ರೀಕಾಂತ, ಡಾಕ್ಟರ ಹತ್ತಿರ ಮಾತನಾಡಿ, ವಸುಧಾಳನ್ನು ಬ್ಯಾಂಕಿಗೆ ಕರೆದುಕೊಂಡು ಹೋಗಲು ಸಾಧ್ಯವೇ ಅಂತ ಕೇಳಿದ.

"ಹೋಗಬಹುದು, ಆದರೆ ತಪ್ಪಿಸಿಕೊಂಡು ಹೊರಟು ಹೋದರೆ ಕಷ್ಟ ಅಲ್ಲವಾ? ಬ್ಯಾಂಕ್ ಮ್ಯಾನೇಜರ್ ಹತ್ತಿರ ಫೋನು ಮಾಡುವಂತೆ ಹೇಳಿ. ಇರು ನನ್ನದೊಂದು ಸಲಹೆ.... ಬ್ಯಾಂಕಿನಲ್ಲಿ ಅವಳ ಅಕೌಂಟಿನಲ್ಲಿ ತುಂಬಾ ಹಣ ಇದೆ ಅಂತ ತಿಳಿದುಕೊಂಡಿದ್ದಾಳೆ. ಅಲ್ಲಿ ಹೆಚ್ಚಗೆ ಹಣ ಇಲ್ಲ ಅಂತ ಅವಳಿಗೆ ಅವರು ಹೇಳಿದರೆ ಸಾಕು.... ಆಮೇಲೆ ಅವಳು ತಂದೆಯ ಮನೆಗೆ ಹೋಗಲು ಒಪ್ಪಬಹುದು. ಏನಂತೀರಾ?"

"ಸರಿ, ನಾನೀಗಲೇ ಹೋಗಿ ಬ್ಯಾಂಕ್ ಮ್ಯಾನೇಜರ್ ಹತ್ತಿರ ಮಾತನಾಡ್ತೀನಿ. ರಮಾ ನೀನು ಅವಳ ಹತ್ತಿರ ಮಾತನಾಡಿ, ಬ್ಯಾಂಕಿಗೆ ಫೋನು ಮಾಡುವಂತೆ ಒಪ್ಪಿಸು" ರಮಾ ಒಪ್ಪಿಕೊಂಡಳು.

ರಮೂಳ ಬರವಿಗಾಗಿ ಕಾಯುತ್ತಾ ಕೂತಿದ್ದ ವಸುಧಾಳನ್ನು ಕಂಡು ಅವಳಿಗೆ ಪಾಪ ಅಂತನ್ನಿಸಿತು. ನಿತ್ಯದಂತೆ ಆಸ್ಪತ್ರೆಯ ಉಡುಪಿನಲ್ಲಿರಲಿಲ್ಲ.

ಜೀನ್ಸ್ ಪ್ಯಾಂಟ್, ಬಿಳಿ ಟೀಷರ್ಟ್ ಧರಿಸಿದ್ದಳು. ಕೂದಲನ್ನು ಎತ್ತಿ ಕಟ್ಟಿ ಹೇರ್ ಬ್ಯಾಂಡ್ ಹಾಕಿಕೊಂಡಿದ್ದಳು. ಲಕ್ಷಣವಾಗಿ ಕಾಣುತ್ತಿದ್ದವಳನ್ನು ಕಂಡು ರಮಾ ಕಣ್ಣರಳಿಸಿದಳು.

"ಇವತ್ತು ನೀವು ಎಷ್ಟು ಚೆನ್ನಾಗಿ ಕಾಣ್ತಿದೀರಿ ಗೊತ್ತಾ?" ಹೊಗಳಿದಳು.

"ಸುಳ್ಳು, ನಾನೇನು ಚೆನ್ನಾಗಿಲ್ಲ" ನನಗೆ ಸುಳ್ಳು ಹೊಗಳಿಕೆ ಬೇಕಿಲ್ಲ.

"ಇಲ್ಲ, ಖಂಡಿತಾ ಸುಳ್ಳಲ್ಲ, ಮುದ್ದಾಗಿ ಎಷ್ಟು ಚಿಕ್ಕವಳ ತರಹ ಕಾಣ್ತಿದೀರಿ ಗೊತ್ತಾ? ಹೈಸ್ಕೂಲಿನಲ್ಲಿ ಓದುತ್ತಿರುವ ಹುಡುಗಿ ತರಹ" ರಮಾ ಅಭಿಮಾನದಿಂದ ಭುಜವನ್ನು ಒತ್ತಿ ನುಡಿದಳು.

"ಥ್ಯಾಂಕ್ ಯೂ" ವಸುಧಾ ನಾಚಿಕೆಯಿಂದ, ಹೊಗಳಿಕೆಯಿಂದ ಕೆಂಪಾಗಿದ್ದಳು.

"ಒಂದು ರಿಕ್ವೆಸ್ಟ್ ರಮಾ..... ನಾವಿಬ್ರೂ ಸ್ನೇಹಿತೆಯರು ತಾನೇ. ಬನ್ನಿ, ಹೋಗಿ ಅಂತ ಮಾತನಾಡುವುದು ಬೇಡ. ಬಾ.... ಹೋಗು ಅಂತ ಕರೆಯೋಣ"

"ಓ.ಕೇ. ಇವತ್ತು ಏನು ತಿಂಡಿ ತಿಂದೆ ನೀನು?"

"ಏನೂ, ತಿಂದಿಲ್ಲ. ಹೇಗೂ ಬ್ಯಾಂಕಿಗೆ ಹೋಗ್ತೀವಲ್ಲ. ಅಲ್ಲೇ ಯಾವುದಾದರೂ ಹೋಟೆಲ್ಲಿನಲ್ಲಿ ತಿಂಡಿ ತಿಂದರಾಯ್ತು" ಇಲ್ಲಿಯ ತಿಂಡಿ ಬೋರ್ ಆಗ್ತಿದೆ ನನಗೆ.

"ಸರಿ ಹಾಗೇ ಮಾಡೋಣ. ನೀನು ಮೊದಲು ಬ್ಯಾಂಕ್ ಮ್ಯಾನೇಜರರ ಹತ್ತಿರ ಮಾತನಾಡಿ, ಎಷ್ಟು ಹಣ ಇದೆ. ಎಷ್ಟು ಡ್ರಾ ಮಾಡಬಹುದು ಅಂತ ಎಲ್ಲಾ ಕೇಳಿದ್ದರೆ ಒಳ್ಳೆಯದು. ಬೇಗ ಬೇಗ ಕೆಲಸ ಆಗುತ್ತೆ....."

"ಯಾಕೆ? ಬೇಕಾದಷ್ಟು ಹಣ ಇರಬೇಕು. ಪ್ರತಿ ತಿಂಗಳೂ ನನ್ನ ಅಕೌಂಟ್‌ಗೆ ಹಣ ಜಮಾ ಆಗಿರುತ್ತೆ"

"ಸರಿ. ನಿನ್ನ ಪಾಸ್ ಬುಕ್ ಎಲ್ಲಿ?" ಎಷ್ಟಿದೆ ಅಂತ ನೋಡು.

"ಅದು ಈಗ ನನ್ನ ಹತ್ತಿರ ಇಲ್ಲ, ಪೊಲೀಸ್ನೋರು ಇಟ್ಟುಕೊಂಡಿರಬಹುದು, ನನ್ನ ಲಗೇಜು ಎಲ್ಲಿದೆಯೋ ನನಗೆ ಗೊತ್ತಿಲ್ಲ. ಮತ್ತೀಗ ಏನು ಮಾಡಲಿ ನಾನು?"

"ಪರವಾಗಿಲ್ಲ, ಮ್ಯಾನೇಜರ್‌ಗೆ ಹೇಳಿದ್ರಾಯ್ತು, ಒಪ್ತಾರೆ." ಆಸ್ಪತ್ರೆಯಲ್ಲಿದ್ದ ಪಬ್ಲಿಕ್ ಫೋನ್‌ನಿಂದ ಬ್ಯಾಂಕಿಗೆ ಫೋನು ಮಾಡಿದಳು ವಸುಧಾ. ಈ ಮೊದಲೇ ಶ್ರೀಕಾಂತ ಹೇಳಿದ್ದರಿಂದ, ಅಲ್ಲದೇ ಪೊಲೀಸಿನವರು ಬಂದು ಈ

ಮೊದಲೇ ವಿಚಾರಿಸಿದ್ದರಿಂದ ಬ್ಯಾಂಕ್ ಮ್ಯಾನೇಜರ್, ಹಣವನ್ನು ಡ್ರಾ ಮಾಡಲು ಸಾಧ್ಯವಿಲ್ಲವೆಂದು ತಿಳಿಸಿದಾಗ, ವಸುಧಾ ಥುತ್ ಎನ್ನುತ್ತಾ ರಸೀವರ್‌ನ ಕುಕ್ಕಿದಳು.

"ನನ್ನ ಮೂಡ್ ಎಲ್ಲಾ ಅಪ್‌ಸೆಟ್ ಆಗಿ ಹೋಯ್ತು. ಇಲ್ಲಿಂದ ಹೋದರೆ ಸಾಕು ಅಂತ ಕಾಯ್ತಾ ಇದೀನಿ. ನನ್ನ ಹಣ ನನಗೆ ಕೊಡೊಕ್ಕೆ ಮ್ಯಾನೇಜರ್‌ಗ್ಯಾಕೆ ಇಷ್ಟು ಧಿಮಾಕು?"

"ನಾನೊಂದು ಮಾತು ಹೇಳಲಾ ವಸುಧಾ....."

"ಹೂಂ..... ಎಲ್ಲರೂ ನನಗೆ ಬಿಟ್ಟಿ ಸಲಹೆ ಕೊಡುವವರೇ?"

"ನಿಮ್ಮ ತಂದೆ ಒಂದು ಮಾತು ಹೇಳಿದರೆ ಬ್ಯಾಂಕಿನವರು ಹಣ ಕೊಡಬಹುದು ಅಲ್ವಾ?"

"ಕೊಡಬಹುದೇನೋ..... ಆದರೆ ಅವರನ್ನು ನಾನಾಗಿಯೇ ಕೇಳಲು ಇಷ್ಟವಿಲ್ಲ. ಅವರಾಗಿಯೇ ಕೊಡಿಸಲಿ"

"ಅವರಿಗೆ ಯಾವ ವಿಷಯವೂ ತಿಳಿಯದು. ತಿಳಿಯದೇ ಅವರಾಗಿಯೇ ಹೇಗೆ ಕೊಡಿಸ್ತಾರೆ?"

"ಮಗಳು ಅಂತಂದರೆ ಅಷ್ಟು ಜವಾಬ್ದಾರಿ ಬೇಡವಾ? ಅವಳು ಎಲ್ಲಿದಾಳೆ, ಅವಳಖರ್ಚಿಗೆ ಎಷ್ಟು ಹಣ ಬೇಕೂಂತ ಗೊತ್ತಾಗಬೇಡವಾ?"

"ಇಂಥದೆಲ್ಲಾ ಸಾಮಾನ್ಯವಾಗಿ ತಂದೆಗೆ ಗೊತ್ತಾಗುವುದಿಲ್ಲ. ತಾಯಿಗೆ ಮಾತ್ರ ಮಕ್ಕಳ ವಿಷಯ ಚೆನ್ನಾಗಿ ಅರ್ಥವಾಗುತ್ತೆ"

"ಇರಬಹುದು, ನನಗೀಗ ತಾಯಿ ಇಲ್ಲವಲ್ಲ, ನಾನು ಏನು ಮಾಡಲಿ?" ಹಲ್ಲು ಕಚ್ಚಿ ನುಡಿದಳು.

"ಓ..... ಐ ಆಮ್ ವೆರಿ ಸಾರಿ. ಹಾಗಾದರೆ ನಿಮ್ಮ ತಂದೇನೇ ಕೇಳಬೇಕು. ಅವರಿಗೆ ಫೋನು ಮಾಡ್ತೀಯಾ?"

"ಬೇಡ, ಅವರಿಗೆ ನಾನು ಇಲ್ಲಿರುವುದು ಗೊತ್ತಾಗಬಾರದು"

"ಯಾಕೆ?"

"ಯಾಕೆಂದ್ರೆ ನನಗದು ಇಷ್ಟವಿಲ್ಲ...."

"ಹಾಗಾದ್ರೆ ನಿಮ್ಮ ತಂದೆ ಮನೆಗೇ ವಾಪಸ್ಸು ಹೋದರೇ"

"ಇಂಪಾಸಿಬಲ್. ನಾನು ಮತ್ತೆ ಅಲ್ಲಿಗೆ ಹೋಗುವುದಿಲ್ಲ. ಬೇಕಾದ್ರೆ ಇಲ್ಲೇ ಸಾಯ್ತೀನಿ"

"ಛಿ.... ಎಂಥಾ ಮಾತಾಡ್ತೀ ವಸುಧಾ? ನೀನು ಚೆನ್ನಾಗಿ ಬದುಕಿ

ಬಾಳಬೇಕು ಅಂತ ತಾನೇ ನಾವೆಲ್ಲಾ ಇಷ್ಟು ಪ್ರಯತ್ನ ಮಾಡ್ತಿರುವುದು"

"ನೆನ್ನೆ ನಿಮ್ಮ ಜತೆ ಬಂದಿದ್ರಲ್ಲ ಅವರೆಲ್ಲಿ? ಇವತ್ತು ಬರಲಿಲ್ವಾ? ವಿಶೂ ಬಂದೇ ಇಲ್ಲ" ಮಾತು ಬದಲಾಯಿಸಿದಳು.

"ಓ..... ನಿಮ್ಮ ಮಾವಾನಾ? ಅವರು ಅಂಗಡಿಗೆ ಹೋಗಿದಾರೆ"

"ಅವರು ನಿಜವಾಗಿಯೂ ನನ್ನ ಮಾವಾನಾ? ನನಗೆ ನಂಬಿಕೆ ಬರುತ್ತಿಲ್ಲ"

"ನಂಗೊತ್ತು ನೀನು ಯಾರನ್ನು ನಂಬೋಲ್ಲ ಅಂತ. ಯಾಕೆ?"

"ನನ್ನ ತಾಯಿ ಸತ್ತು ಹೋಗಿ ನನಗೆ ಅನ್ಯಾಯವಾಯಿತು. ನನ್ನ ತಂದೆ ನನಗೆ ದ್ರೋಹ ಮಾಡಿಬಿಟ್ಟರು. ಅದಕ್ಕೇ ನನಗೆ ಅವರನ್ನು ಕಂಡರೆ ಆಗುವುದಿಲ್ಲ"

"ದ್ರೋಹ ಮಾಡಿದರು ಅಂತ ಅಂತೀಯ್ಯ ತಿಂಗಳು ತಿಂಗಳಿಗೆ ಬ್ಯಾಂಕಿಗೆ ಹಣ ಜಮಾ ಮಾಡ್ತಾರೆ ಅಂತೀಯ..... "

"ನಾನು ಅವರ ಮಗಳಾಗಿ ಹುಟ್ಟಿದ ತಪ್ಪಿಗೆ ನನಗೆ ಹಣ ಕೊಡದಿದ್ದರೆ, ನಾನೇನು ಬಿಕ್ಷೆ ಬೇಡಲಾ?" ಕಟುವಾಗಿ ಕೇಳಿದಳು.

"ಥೂ! ಏನೇನೋ ಮಾತನಾಡಬೇಡ. ಚೆನ್ನಾಗಿ ಓದಿ ಬರೆದು ವಿದ್ಯಾವಂತಳಾದರೆ ಒಳ್ಳೆ ಕೆಲಸ ಸಿಗುತ್ತೆ. ಹೇಗಿರಬಹುದು ಗೊತ್ತಾ ಆಗ?"

"ಇನ್ನು ಅದೆಲ್ಲಾ ಎಲ್ಲಿ ಸಾಧ್ಯ? ನನ್ನ ಲೈಫೇ ಹಾಳಾಗಿಹೋಯ್ತು" ವಸುಧಾ ಅಳಲು ಪ್ರಾರಂಭಿಸಿದಾಗ, ರಮಾ ಅವಳ ಬೆನ್ನ ಮೇಲೆ ಕೈಯನ್ನಿಟ್ಟು ಸಮಾಧಾನ ಹೇಳಿದಳು.

"ಏನೂ ಹಾಳಾಗಿಲ್ಲ. ನೀನು ಇನ್ನು ಚಿಕ್ಕವಳು. ಎಲ್ಲಾ ಸರಿ ಹೋಗುತ್ತೆ. ನಾವು ಎಲ್ಲಾ ಸರಿಯಾಗಲು ಸಹಾಯ ಮಾಡ್ತೀವಿ....."

"ಹಾಸ್ಟೆಲ್ಲಿನ ಹುಡುಗಿಯರು ಕೆಲವರು ನನ್ನ ಬಾಳನ್ನೇ ಹಾಳು ಮಾಡಿಬಿಟ್ಟರು"

ಅವಳು ಮತ್ತೆ ಮತ್ತೆ ಬಿಕ್ಕಿ ಬಿಕ್ಕಿ ಅತ್ತಾಗ, ರಮಾ ಅವಳನ್ನು ತಬ್ಬಿಕೊಂಡಳು.

"ಅಳಬೇಡ ವಸುಧಾ..... ಆ ಹಳೆಯ ಮಾತೆಲ್ಲಾ ಯಾಕೆ ಈಗ? ಆ ಹುಡುಗಿಯರೆಲ್ಲಾ ಈಗ ಪೊಲೀಸ್ ಕಸ್ಟಡಿಯಲ್ಲಿದ್ದಾರೆ. ಆ ಹಾಸ್ಟೆಲ್ಲು ಈಗ ಪೋಲೀಸರ ವಶದಲ್ಲಿದೆ. ಅದನ್ನೆಲ್ಲ ಮರೆತುಬಿಡು. ನಿನ್ನ ತಂದೆ, ನಿನ್ನ ಮಾವ, ನಾನು ಎಲ್ಲಾ ನಿನಗೆ ಸಹಾಯ ಮಾಡ್ತೀವಿ. ನೀನು ಮೊದಲಿನಂತೆ ಆಗಬಹುದು"

"ನಾನು ಪರೀಕ್ಷೆಗಳಲ್ಲಿ ಫೇಲಾದೆ..... ಬೇಸರ ಜಾಸ್ತಿಯಾಯ್ತು... ನನ್ನ ಹಾಸ್ಟೆಲ್ಲಿನ ಹುಡುಗಿಯರು ನನ್ನಿಂದ ಹಣ ತೆಗೆದುಕೊಂಡು, ಏನೇನೋ

ತಿನ್ನಿಸಿದರು. ಕುಡಿಸಿದರು ಅದಕ್ಕೆ ನನಗೆ ಸ್ನೇಹಿತೆಯರು ಅಂದ್ರೆ...... "

"ಅದನ್ನೆಲ್ಲಾ ಮರೆತುಬಿಡು ಅಂತ ಹೇಳಿದ್ನಲ್ಲ.... ಎಲ್ಲಾ ಸ್ನೇಹಿತೆಯರು ಹಾಗಿರುವುದಿಲ್ಲ. ನನ್ನನ್ನು ನೋಡಿದರೆ ನಿನಗೇನನ್ನಿಸುತ್ತೆ?"

"ಒಳ್ಳೆಯವರು ಅಂತ ಅನ್ನಿಸುತ್ತೆ. ಆದರೆ ನೀನು ನಮ್ಮ ತಂದೆ ವಿಷಯ ಮಾತನಾಡಿದರೆ ನನಗೆ ಏನೋ ಒಂಥರಾ ಆಗುತ್ತೆ. ನನಗೆ ಇಷ್ಟವಾಗೋಲ್ಲ. ಐ ಹೇಟ್ ಹಿಮ್, ಐ ಹೇಟ್ ಹಿಮ್......" ಅವಳು ಕಣ್ಣು ಗುಡ್ಡೆಗಳನ್ನು ಹೊರಳಿಸಿ ಮಾತನಾಡಿದಾಗ ರಮಾ ಹೆದರಿದಳು, ಸುಮ್ಮನಾಗಿಬಿಟ್ಟಳು.

"ಯಾಕೆ ಸುಮ್ಮನಾದೆಯಲ್ಲ, ನಾನೇನು ಮಾಡಲಿ ಹೇಳು.... ಪ್ಲೀಸ್"

"ನಂಗೇನು ಹೇಳಬೇಕೂಂತ ಗೊತ್ತಾಗ್ತಾ ಇಲ್ಲ. ವಸುಧಾ ನನಗೆ ತಂದೆ ಇಲ್ಲ. ನಮ್ಮ ತಾಯಿ ನಮ್ಮನ್ನೆಲ್ಲ ಕಷ್ಟಪಟ್ಟು ಸಾಕಿದರು. ಬೆಳೆಸಿ, ವಿದ್ಯಾವಂತರನ್ನಾಗಿ ಮಾಡಿದರು. ಆದರೆ ನಾವ್ಯಾರೂ ಒಂದು ದಿನವೂ ನಮ್ಮ ಅಮ್ಮನ್ನ ಅದು ಬೇಕು, ಇದು ಬೇಕು ಅಂತ ಪೀಡಿಸಿದಂತೆ ನೆನಪಿಲ್ಲ. ಈಗ ಅನ್ನಿಸ್ತಾ ಇದೆ. ನಾವು ಎಷ್ಟು ದಡ್ಡರು ಅಂತ ಅಲ್ವಾ..... ನಮಗೂ ಎಷ್ಟು ತರಹದ ಆಸೆಗಳಿದ್ದವು. ಅದನ್ನೆಲ್ಲಾ ಮನಸ್ಸಿನಲ್ಲೇ ಬಚ್ಚಿಟ್ಟುಕೊಂಡೆವು. ನಮ್ಮ ಅಮ್ಮನ ಹತ್ತಿರ ಹೆಚ್ಚಿಗೆ ಹಣ ಇರಲಿಲ್ಲ. ಆದರೆ ನಾವೇನು ಪಾಪ ಮಾಡಿದ್ದೆವು? ನಾವೇಕೆ ಬಡವರಂತೆ ಬೆಳೆದೆವು ಅಂತ ಯೋಚಿಸ್ತಾ ಇದೀನಿ. ನಿನ್ನ ಹಾಗೆ ನಾನೂ ಒಬ್ಬಳೇ ಮಗಳಾಗಿದ್ದಿದ್ದರೆ, ಜಾಲಿಯಾಗಿರಬಹುದಾಗಿತ್ತಲ್ವಾ?"

"ಇಲ್ಲ ರಮಾ.... ನೀನು ನಿನ್ನ ಅಕ್ಕ ತಮ್ಮಂದಿರ ಜತೆ ಬೆಳೆದೆ. ನೀನು ಅದೃಷ್ಟವಂತೆ. ನನಗಾದರೆ.... ಯಾರೂ ಇಲ್ಲ, ಜಗಳ ಆಡೋಣ ಅಂತಂದರೂ ಯಾರಿರಲಿಲ್ಲ. ಇದ್ದ ಒಬ್ಬ ತಂಗಿಯೂ ಸತ್ತು ಹೋದಳು. ನಾನು ಒಂಟಿಯಾಗಿದ್ದು ಕೊಂಡು ಎಷ್ಟು ಹಿಂಸೆ ಪಟ್ಟಿದೀನಿ ಗೊತ್ತಾ?"

"ರಮಾ ನಕ್ಕಳು" ಎಷ್ಟು ವಿಚಿತ್ರ ಅಲ್ಲವಾ ವಸುಧಾ.... ನನ್ನ ಹಾಗೆ ನೀನಿರಬೇಕಾಗಿತ್ತು ಅಂತ ನೀನು ಯೋಚಿಸ್ತೀಯ. ನಿನ್ನ ಹಾಗೆ ನಾನಿರಬೇಕಾಗಿತ್ತು ಅಂತ ನಾನು ಅಂದುಕೊಳ್ತೀನಿ. ಆದರೆ ಒಬ್ಬರ ಹಾಗೆ ಇನ್ನೊಬ್ಬರು ಇರಲು ಖಂಡಿತಾ ಸಾಧ್ಯವಿಲ್ಲ ಅಲ್ಲವಾ?

"ನನ್ನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗ್ತೀಯಾ ರಮಾ..... ನಾನು ನಿಮ್ಮ ತಾಯಿಯನ್ನು ನೋಡಬೇಕು. ಅವರ ಜೊತೆ ಮಾತನಾಡಬೇಕು"

ವಸುಧಾ ಮುಗ್ಧಳಂತೆ ಕೇಳಿದಾಗ ರಮಾ ಆಗಲಿ ಎನ್ನುವಂತೆ ತಲೆ ಆಡಿಸಿದಳು.

"ಇವತ್ತು ಆಗೊಲ್ಲ, ಭಾನುವಾರ ಕರೆದುಕೊಂಡು ಹೋಗ್ತಿನಿ. ನಮ್ಮ ಅಮ್ಮ ಕೆಲಸಕ್ಕೆ ಹೋಗ್ತಾರೆ. ಓ.ಕೆ. ನಾನು ಬರ್ಲಾ" ಎನ್ನುತ್ತಾ ಹೊರಟಾಗ, ವಸುಧಾ ನಿರಾಸೆಯ ಮುಖವನ್ನು ಮಾಡಿದಳು. ಅವಳಿಗಾಗಿ ಹೊರಗೆ ಕಾದು ನಿಂತಿದ್ದ ಶ್ರೀಕಾಂತ, "ಇಷ್ಟು ಹೊತ್ತು ಏನು ಮಾಡ್ತಿದ್ದೆ" ಎಂದ.

"ನಾನೂ ಅವಳು ಇಬ್ಬರೂ ಈಗ ಸ್ನೇಹಿತೆಯರಾಗಿ ಬಿಟ್ಟಿದ್ದೇವೆ. ನಮ್ಮಿಬ್ಬರ ಮಾತೇ ಮುಗಿಯಲಿಲ್ಲ" ಎನ್ನುತ್ತಾ ನಕ್ಕಳು.

"ದಿನಾ ಇವಳ ಹತ್ತಿರಾನೇ ಮಾತಾಡ್ತಿದ್ರೆ ನಮ್ಮ ಕೆಲಸವನ್ನೇ ನಾವು ಮರೆತು ಬಿಡ್ತೀವಿ ಅಷ್ಟೇ"

"ನೀನು ಹೋಗಿ ಅವಳನ್ನು ಮಾತನಾಡಿಸೊಲ್ವಾ ಶ್ರೀಕಾಂತ......"

"ನನಗೇನೂ ಮಾತಿಲ್ಲ. ನೀನಾಡಿಯಾಯ್ತಲ್ಲ"

"ನಾಳೆಯಿಂದ ನಾನು ಕೆಲಸಕ್ಕೆ ಹೋಗಬೇಕು, ಬರೋಕ್ಕಾಗೊಲ್ಲ"

"ದಿನಾ ನಾವು ಬರಬೇಕೂಂತ ಏನಿಲ್ಲವಲ್ಲ. ಆದಾಗ ಬಂದ್ರಾಯ್ತು" ಎನ್ನುತ್ತಾ ಇಬ್ಬರೂ ಸ್ಕೂಟರನ್ನೇರಿದರು.

ರಮಳನ್ನು ಕಂಡೊಡನೆ ಪಾರ್ವತಿ ಸಿಡುಕಿದಳು. "ಏನಮ್ಮಾ ಬೆಳಿಗ್ಗೇನೇ ಎಲ್ಲಿಗೆ ಹೊರಟುಹೋಗಿದ್ದೆ. ವಿಶೂ ಅತ್ತು ಅತ್ತು ಈಗ ಮಲಗಿದ"

"ಆಸ್ಪತ್ರೆಗೆ ಹೋಗಿದ್ದೆ. ನನ್ನ ಸ್ನೇಹಿತೇನ ನೋಡೋಕೆ........" ಪಾರ್ವತಿ ಮತ್ತೆ ಪ್ರಶ್ನಿಸಲಿಲ್ಲ. ಆಸ್ಪತ್ರೆಯ ಹೆಸರು ಕಿವಿಗೆ ಬಿದ್ದೊಡನೆ ಅವಳ ಮುಖದ ನರಗಳು ಬಿಗಿದುಕೊಂಡವು.

ಒಂದೆರಡು ದಿನಗಳ ಮಟ್ಟಿಗೆ ಹೆಂಡತಿಯನ್ನು ನೋಡಲು ಊರಿಗೆ ಹೋಗಿದ್ದ ಮಹೇಶ ವಾಪಸ್ಸಾಗಿದ್ದ. ಸ್ಟುಡಿಯೋದಲ್ಲಿದ್ದ ಅವನ ಸಹಾಯಕ ಯಾವ ಕೆಲಸವನ್ನು ಪೆಂಡಿಂಗ್ ಉಳಿಸಿರಲಿಲ್ಲವಾದ್ದರಿಂದ ಅವನಿಗೆ ಬಿಡುವು. ಸೀದಾ ಶ್ರೀಕಾಂತನನ್ನು ಭೇಟಿಯಾಗಲು ಬಂದ.

"ಏನಯ್ಯಾ ಯಾವಾಗ ಬಂದೆ?" ಎಲ್ಲಾ ಹುಶಾರಾಗಿದಾರಾ? ಶ್ರೀಕಾಂತ ಪ್ರಶ್ನಿಸಿದ. ಹೂಂ ಎನ್ನುತ್ತಾ ಮಹೇಶ ಅಲ್ಲಿದ್ದ ಕುರ್ಚಿಯ ಮೇಲೆ ಕೂತ.

ಮಹೇಶನೇ ಪ್ರಶ್ನಿಸಿದ. ವಸುಧಾ ಹಾಗೂ ಅವಳ ತಂದೆಯ ಬಗ್ಗೆ ತಾನು ರಮಾಳನ್ನು ಕರೆದುಕೊಂಡು ಹೋಗಿ ಪರಿಚಯಿಸಿದ ವಿಷಯವನ್ನು ಶ್ರೀಕಾಂತ ತಿಳಿಸಿದ.

"ಗುಡ್...... ಹುಡುಗೀರು ಹುಡುಗೀರ ಹತ್ತಿರ ಬೇಗ ಸ್ನೇಹಿತರಾಗಿ

ಆಪ್ತರಾಗಿ ಬಿಡ್ತಾರೆ. ತಮ್ಮ ಮನಸ್ಸಿನಲ್ಲಿರುವುದನ್ನೆಲ್ಲಾ ಹೇಳಿಕೊಂಡು ಬಿಡ್ತಾರೆ"

"ನಾನು, ರಮನ್ನ ಸುಧಾಕರರಾಯರ ಬಳಿಗೆ ಕಳಿಸಿ, ಅವರಿಗೆ ವಸುಧಾಳ ಸ್ಥಿತಿ ಬಗ್ಗೆ ತಿಳಿಸೋಣ ಅಂತಂದುಕೊಂಡಿದೀನಿ"

"ಗುಡ್ ಐಡಿಯಾ.... ಆದರೆ ನಿಮ್ಮ ಅತ್ತಿಗೆಗೆ ಬಿಡುವು ಇರುತ್ತಾ?"

"ಒಂದ್ನಾಲ್ಕು ದಿನ ರಜ ಹಾಕಿದಾಳೆ. ಮನೇಲೇ ಇರುವ ಬದಲು ಸ್ವಲ್ಪ ಸಮಾಜಸೇವೆ ಮಾಡಲಿ ಅಂತ. ನೀನು ಅವಳನ್ನು ಕರೆದುಕೊಂಡು ಹೋಗ್ತೀಯಾ? ನಾನೀಗಲೇ ಬಾ ಅಂತ ರಮಳಿಗೆ ಫೋನು ಮಾಡ್ತೀನಿ" ಎನ್ನುತ್ತಾ ಫೋನನ್ನೆತ್ತಿಕೊಂಡ.

ರಿಸೀವರ್ ಎತ್ತಿದವಳು ಪಾರ್ವತಿ "ರಮಾ ಇದಾಳಾ?" ಕೇಳಿದ.

"ಇಲ್ಲ, ಅವಳೂ, ವಿಶೂ ಹೊರಗೆಲ್ಲೋ ಹೋಗಿದಾರೆ"

"ಬಂದ ಮೇಲೆ ಅಂಗಡಿ ಹತ್ತಿರ ಬರಬೇಕಂತೆ ಅಂತ ಹೇಳು" ಎನ್ನುತ್ತಾ ಮಾತು ಮುಗಿಸಿದ. ಅಷ್ಟರಲ್ಲಿ ನರ್ಸಿಂಗ್ ಹೋಂನಿಂದ ಫೋನು ಬಂದಿತ್ತು. ಡಾಕ್ಟರು ತಕ್ಷಣವೇ ಬರಬೇಕೆಂದು ಹೇಳಿದ್ದರು. ಇಬ್ಬರಿಗೂ ಏನು ಮಾಡಬೇಕೆಂದು ಗೊತ್ತಾಗಲಿಲ್ಲ ಶ್ರೀಕಾಂತನೆಂದ.

"ಬೇಗ ಈ ಪ್ರಕರಣವೆಲ್ಲಾ ಮುಗಿದರೆ ಸಾಕಾಗಿದೆ. ಅವತ್ತಿನಿಂದ ಇವತ್ತಿನವರೆಗೂ ಅಂಗಡೀಲಿ ಸಹಾ ಹೆಚ್ಚಿಗೆ ಹೊತ್ತು ಇರುಕ್ಕಾಗುತ್ತಿಲ್ಲ. ನಿನಗೂ ತೊಂದರೆ"

"ನನಗೇನೂ ತೊಂದರೆ ಇಲ್ಲ. ನಾನು ಆಗ ಈಗ ಹೀಗೇ ಸ್ಟುಡಿಯೋದಿಂದ ಹೊರಗೆ ತಿರುಗಾಡುವವನೇ....."

"ಆದರೇನು? ಆಸ್ಪತ್ರೇಲಿ ಮಂಚದ ಮೇಲೆ ಕುಳಿತಿರುವವಳ ಫೋಟೋ ತೆಗೆಯೊಕ್ಕೆ ಹೋಗೋಲ್ಲವಲ್ಲ ನೀನು"

"ಹ್ಲಾಂ ಐಡಿಯಾ. ಯಾಕಾಗಬಾರದು ಅಂತ. ಚಿಕ್ಕ ಹುಡುಗಿ ಅವಳದ್ದೊಂದು ಫೋಟೋ ತೆಗೆದು ಯಾವುದಾದರೂ ಮ್ಯಾಗ್ಜೈನ್‌ಗೆ ಕಳಿಸಿದರೆ ಹೇಗಿರುತ್ತೆ ಅಂತ?"

"ಅವಳು ಪೇಶೆಂಟು..... ಸೌಂದರ್ಯ ಸ್ಪರ್ಧೆಗೆ ಪೋಸ್ ಕೊಡುವ ಬ್ಯೂಟಿ ಅಲ್ಲಾ......"

"ಡ್ರಗ್ಸ್ ತೆಗೆದುಕೊಳ್ಳುವ ಹುಡುಗಿಯರ ಮುಖ ಎಷ್ಟು ಕಳಾಹೀನವಾಗಿರುತ್ತೆ. ಅಂತ ಒಂದು ಆರ್ಟಿಕಲ್ ಬರೆದು....."

"ನಿನ್ನ ತಲೆ! ಅದೆಲ್ಲಾ ಬರೆದರೆ ಅವಳು ನಿನ್ನನ್ನು ಸುಮ್ಮನೇ ಬಿಡುವುದಿಲ್ಲ.

ಮೊದಲೇ ಅವಳು ಜೋರು"

"ಹುಡುಗಿ ಯಂಗ್ ಆಗಿದಾಳೆ. ನಾಲ್ಕೈದು ಪೋಸಿನಲ್ಲಿ ಫೋಟೋ ತೆಗೆದು ನನ್ನ ಸ್ಟುಡಿಯೋದಲ್ಲಿ ಒಂದೆರಡು, ನಿನ್ನ ಅಂಗಡಿಯಲ್ಲಿ ಒಂದೆರಡು ಇಟ್ಟರೆ ಆಡ್ ಫೋಟೋಸ್ ಇದ್ದ ಹಾಗಾಗುತ್ತೆ. ಪಬ್ಲಿಸಿಟಿ ಸಿಗುತ್ತೆ. ಏನೀಗ?"

"ಯಾಕೋ ಬೇಡ ಅಂತನ್ನಿಸುತ್ತೆ ಕಣೋ. ಆ ಹುಡುಗಿ ಮುಗ್ಧೆ ಏನೋ ಅಹಂಕಾರದಿಂದ ಇಂಥ ಸ್ಥಿತಿ ತಂದಿಟ್ಟು ಕೊಂಡಿದ್ದಾಳೆ. ಅವಳನ್ನು ನಾವು ಹೀಗೆಲ್ಲಾ ಯಾತ್ಯಾತಕ್ಕೋ ಉಪಯೋಗಿಸಿಕೊಳ್ಳಬಾರದು. ಅವಳ ತಂದೆ ಏನಂದುಕೊಳ್ತಾರೆ?"

"ಅವಳ ತಂದೆಗೆ ಏನು ಗೊತ್ತಾಗುತ್ತೆ? ಎಷ್ಟು ವರ್ಷದಿಂದ ಹಾಸ್ಟೆಲ್ಲಿನಲ್ಲಿದಾಳೋ..... ಯಾರ್‍ಯಾರ ಸಹವಾಸ ಮಾಡಿದಾಳೋ..... ಅದಕ್ಕೆಲ್ಲಾ ಕೇರ್ ಮಾಡದ ತಂದೆ ಇದಕ್ಕೆ ಕೇರ್ ಮಾಡ್ತಾರಾ? ನಿನ್ನ ಆಲೋಚನೆ ಸರಿಯಲ್ಲ"

"ಏನೋ ನನಗೆ ಹಾಗೆನ್ನಿಸ್ತು... ನಿನ್ನಿಷ್ಟ" ಎಂದ. ಮಹೇಶ ಹಾಗೆಲ್ಲಾ ವಸುಧಾಳ ಬಗ್ಗೆ ಆಡಿದ್ದು ಸರಿ ಎನಿಸಲಿಲ್ಲ. ಶ್ರೀಕಾಂತನಿಗೆ ಅಸಮಾಧಾನ ವಾಗಿದೆ ಯೆನ್ನುವುದನ್ನು ಅರಿತ ಮಹೇಶ ಸುಮ್ಮನಾದ. ಇಬ್ಬರೂ ನರ್ಸಿಂಗ್‌ಹೋಂ ಕಡೆ ಹೊರಟರು. ಎದುರಿಗೆ ಹೂ ಮಾರುತ್ತಿದ್ದವನನ್ನು ಕಂಡ ಶ್ರೀಕಾಂತ ಗಾಡಿ ನಿಲ್ಲಿಸಿ, ಒಂದು ಮೊಳ ಕಟ್ಟಿದ ಮಲ್ಲಿಗೆ ಹೂವನ್ನು ಕೊಂಡ. ಯಾಕೆಂದು ಮಹೇಶ ಕೇಳಲಿಲ್ಲ.

ಡಾಕ್ಟರು ಹೇಳಿದ್ದರು. "ಇದುವರೆಗೂ ಆ ಹುಡುಗಿಯ ಶುಶ್ರೂಷೆಯ ಖರ್ಚೆಲ್ಲಾ ನಾವೇ ವಹಿಸಿಕೊಂಡಾಗಿದೆ. ಆ ಹಣವನ್ನೆಲ್ಲಾ ಭರ್ತಿ ಮಾಡಿ, ಆ ಹುಡುಗಿಯನ್ನು ಮನೆಗೆ ಕರೆದುಕೊಂಡು ಹೋಗಬಹುದು. ಅವಳ ತಂದೆಗೆ ವಿಷಯ ತಿಳಿಸಿದ್ದಾಯ್ತಾ?" ಅಂತ.

"ಇಲ್ಲ, ತಿಳಿಸಿಲ್ಲ" ಎಂದ.

"ನಿಮ್ಮ ಸ್ನೇಹಕ್ಕೆ ಬೆಲೆ ಕೊಟ್ಟು ನಾನು ನಿಮಗೆ ಹೆಲ್ಪ್ ಮಾಡಿದೆ. ಆದರೆ ಯಾಕೆ ಹೀಗೆ ನಿಧಾನ ಮಾಡ್ತಿದೀರೋ ನನಗೆ ತಿಳಿಯದು. ಆ ಹುಡುಗಿಯಂತೂ ಹೇಳಿದ ಮಾತು ಕೇಳುವುದಿಲ್ಲ. ನಿಮ್ಮ ಕಡೆಯವರು ಯಾರಾದರೂ ಒಬ್ಬರೂ ಅವಳ ಜತೆಗೆ ಇರುವುದು ಸರಿ ಅಂತನ್ನಿಸುತ್ತೆ" ಶ್ರೀಕಾಂತನ ಚಿಂತೆ ಹೆಚ್ಚಿತು. ಹೊರಗೆ ಬಂದ ನಂತರ ಮಹೇಶ ನುಡಿದ.

"ನೋಡಿದ್ಯಾ ಇನ್ನೊಬ್ಬರಿಗೆ ಉಪಕಾರ ಮಾಡೋಕೆ ಹೋದರೆ, ಎಂತೆಂಥಾ

ಮಾತುಗಳನ್ನು ಕೇಳಬೇಕಾಗುತ್ತೆ ಅಂತ. ಸುಮ್ಮನೇ ಅವಳನ್ನು ಡಿಸ್ಚಾರ್ಜ್ ಮಾಡಿಸಿಕೊಂಡು, ಅವಳನ್ನು ಅವಳ ತಂದೆ ಮನೆ ಬಾಗಿಲಿಗೆ ಬಿಟ್ಟುಬರುವುದೇ ಸರಿ. ಆಮೇಲೆ ಅವರಿಬ್ಬರೇ ಏನು ಬೇಕಾದರೂ ಮಾಡಿಕೊಳ್ಳಲಿ. ಅವರಿಬ್ಬರ ಜಗಳದಿಂದ ನಮಗೇನು ಲಾಭ!"

"ನಾನು ಯಾವ ಲಾಭದಿಂದಲೂ ಈ ಸಹಾಯ ಮಾಡ್ತಿಲ್ಲ ಮಹೇಶ. ಯಾಕೋ ಏನೋ ಪೇಶೆಂಟುಗಳಿಗೆ ನನ್ನ ಕೈಲಾದ ಸಹಾಯ ಮಾಡಬೇಕು ಅಂತನ್ನಿಸುತ್ತೆ"

"ಸರಿ. ನೋಡು ಈಗ ಎಷ್ಟು ಫಜೀತಿ"

"ಹೌದು. ಫಜೀತೀನೇ, ನನ್ನಿಂದ ನಿನಗೂ ತೊಂದರೇನೇ. ಒಂದು ಗಳಿಗೆ ಯೋಚಿಸು. ಇಂಥ ಪರಿಸ್ಥಿತಿ ನಮ್ಮ ಮನೇಲೇ ಇದ್ದಿದ್ದರೆ" ಅಂತ ಮಹೇಶ ಸುಮ್ಮನಾದ.

ಶ್ರೀಕಾಂತನ ಮನೆಯಲ್ಲಿ ಪ್ರಕಾಶನ ಮದುವೆಯ ಸಮಯದಲ್ಲಿ ನಡೆದ ಮಾತುಕತೆ, ನಂತರದ ದುರಂತ ಎಲ್ಲಾ ಅವನಿಗೆ ತಿಳಿದದ್ದೇ. ಶ್ರೀಕಾಂತ ಸ್ನೇಹಿತ, ತಾನೀಗ ಅವನಿಗೆ ಜತೆಗಾರನಾಗದಿದ್ದರೆ ಸಣ್ಣವನಾಗಿ ಬಿಡುತ್ತೇನೆ ಎಂದುಕೊಂಡ. ಆದರೂ ಶ್ರಿಕಾಂತ ಈ ಗೋಜುಗಳಲ್ಲಿ ಸಿಕ್ಕಿಬಿದ್ದಿರುವುದು ಸರಿಯಲ್ಲ ಅಂತಲೇ ಅನ್ನಿಸುತ್ತಿತ್ತು. ಆದರೂ ಅವನಿಗೆ ಸಹಾಯ ಮಾಡದೇ ಇರಲಾರ.

ಅಷ್ಟರಲ್ಲಿ ರಮಾ ಅಲ್ಲಿಗೆ ವಿಶೂನೊಡನೆ ಬಂದಿದ್ದಳು. ಶ್ರೀಕಾಂತ ಡಾಕ್ಟರು ಹೇಳಿದ್ದನ್ನೆಲ್ಲಾ ಹೇಳಿ, ನೀನು ಹೋಗಿ ಸುಧಾಕರರಾಯರೊಡನೆ ಮಾತನಾಡು ಅಂತ ತಿಳಿಸಿದ. ಮಹೇಶ, ರಮಾ ಇಬ್ಬರೂ ರಾಯರ ಮನೆಯ ಕಡೆ ಹೊರಟರು, ಶ್ರೀಕಾಂತ ವಸುಧಾಳಿದ್ದ ವಾರ್ಡ್‌ಕಡೆ ಹೆಜ್ಜೆ ಹಾಕಿದ. ಮಂಡಿಗೆ ತಲೆಯೂರಿ, ಮಂಚದ ಮೇಲೆ ಕುಳಿತಿದ್ದ ವಸುಧಾ ಬಾಗಿಲ ಕಡೆ ತಿರುಗಿದಳು. ಶ್ರೀಕಾಂತ ಮುಗುಳ್ನಕ್ಕು, "ಹಲೋ" ಎಂದ. ಅವಳು ಅವನ ಬೆನ್ನ ಹಿಂದೆ ಕಣ್ಣು ಆಡಿಸಿ ನಿರಾಸೆಗೊಂಡಿದ್ದನ್ನು ಅವನು ಗಮನಿಸಿದ.

"ತಿಂಡಿ ಕಾಫಿ ಆಯ್ತಾ...... " ಎನ್ನುತ್ತಾ ತಾನು ತಂದಿದ್ದ ಹೂವಿನ ಪೊಟ್ಟಣವನ್ನು ಅವಳ ಕೈಗಿತ್ತ. ಅವಳು ಥ್ಯಾಂಕ್ಸ್ ಎಂದು ಹೇಳಿ ಅದನ್ನು ಪಕ್ಕಕ್ಕಿಟ್ಟಳು. ಅಲ್ಲಿಗೆ ಮಾತು ಮುಗಿಯಿತು ಎನ್ನುವಂತೆ ಅವನು ಸುಮ್ಮನೇ ನಿಂತ.

"ರಮಾ ಬರಲಿಲ್ವಾ?" ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋಗ್ತೀನಿ ಅಂತ ಹೇಳಿದ್ದಳು. ನಾನು ಅವಳಿಗಾಗಿ ರೆಡಿಯಾಗಿ ಎಷ್ಟು ಹೊತ್ನಿಂದ ಕಾಯ್ತಾ ಕೂತಿದೀನಿ, ಎಂದು ಮೂತಿ ಉಬ್ಬಿಸಿ ನುಡಿದಾಗ, ಆ ಹುಡುಗಿಗೆ ನಿರಾಸೆಯಾಗಿದೆ ಎಂದರಿತ.

"ಇಲ್ಲ.... ಅವಳಿಗೆ ಇವತ್ತು ಬರೋಕ್ಕೆ ಆಗೋಲ್ಲ" ಎಂದ.

ವಸುಧಾಳಿಗೆ ನಿರಾಶೆಯಾಗಿತ್ತು. ಕೋಪವೂ ಬಂದಿತ್ತು.

"ಬರೋಕ್ಕೆ ಆಗದಿದ್ದವರು, ಬರ್ತೀನಿ ಅಂತ ಯಾಕೆ ಪ್ರಾಮಿಸ್ ಮಾಡಬೇಕಾಗಿತ್ತು. ಐ ಹೇಟ್ ಹರ್" ಎಂದಳು ಸಿಟ್ಟಿನಿಂದ. ಶ್ರೀಕಾಂತ ಅವಳನ್ನೇ ನೋಡಿದ, ಸಿಟ್ಟಿನಿಂದ ಮುಖ ಕೆಂಪಾಗಿತ್ತು. ಹಾಕಿದ್ದ ಪಿಂಕ್ ಕಲರಿನ ಷರ್ಟಿನಂತೆ. ಸರ್ರನೆ ಅತ್ತ ತಿರುಗಿದಾಗ ತೊಯ್ದಾಡಿದ, ಬಿಚ್ಚಿದ ಕೂದಲು, ಅವಳ ಮುಖದ ಒಂದು ಪಾರ್ಶ್ವವನ್ನೇ ಮುಚ್ಚಿ ಹಾಕಿತ್ತು.

"ಓ ಇವಳಿಗೆ ಜಡೆಯೇ ಇಲ್ಲ. ತಾನು ಹೂವು ತಂದುಕೊಟ್ಟಿದ್ದನ್ನು ಮುಡಿಯುವುದಾದರೂ ಹೇಗೆ ಅಂತ ಅಂದುಕೊಂಡಾಗ ನಗು ಬಂದಿತ್ತು."

"ಯಾಕೆ ನಗ್ತಿದೀರಿ?" ಅವಳು ಸಂಶಯದಿಂದ ಪ್ರಶ್ನಿಸಿದಳು. ಅವನು ತಾನು ನಕ್ಕಿದ್ದರ ಕಾರಣ ಹೇಳಿದಾಗ ಅವಳಿಗೂ ನಗು ಬಂದಿತು.

"ಕೂದಲು ಸಿಕ್ಕಾಬಟ್ಟೆ ಬೆಳೆದು ಬಿಟ್ಟಿದೆ. ಬ್ಯೂಟಿ ಪಾರ್ಲರ್‌ಗೆ ಹೋಗಿ ಎಷ್ಟೋ ದಿನಗಳಾಯ್ತು" ಎಂದಳು ಬಿಚ್ಚಿದ ಕೂದಲಲ್ಲಿ ಕೈಯಾಡಿಸುತ್ತಾ. ಅವನಿಗೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಅವಳನ್ನೇ ನೋಡುತ್ತಾ ನಿಂತ. ಎಳೆಯ ವಯಸ್ಸು, ಕಾಂತಿಹೀನವಾದ ಮುಖ, ಲವಲವಿಕೆಯನ್ನು ಸೂಸದ ಕಣ್ಣುಗಳು. ಆಸೆಯನ್ನು ನಿರಾಸೆಯಲ್ಲಿ ಮುಳುಗಿಸುವ ವರ್ತನೆ......

"ನೀವು ನಿಜವಾಗಿಯೂ ನನ್ನ ಸೋದರ ಮಾವಾನಾ?" ಇದ್ದಕ್ಕಿದ್ದಂತೆ ಅವಳು ಪ್ರಶ್ನಿಸಿದಾಗ ಅವನು ಬೆಚ್ಚಿದ. 'ಆಂ' ಎಂದ.

"ನೀವು ನನ್ನ ಮಾವ ಖಂಡಿತಾ ಅಲ್ಲ. ಹೊಸಬರಂತೆ ನನ್ನನ್ನು ಎಂದೂ ನೋಡದಿರುವವರ ಹಾಗೆ ನೋಡ್ತಿದೀರಿ"

"ಹೌದು. ಈ ಮುಂಚೆ ನಾನು ನಿನ್ನನ್ನು ಸರಿಯಾಗಿ ನೋಡಿರಲೇ ಇಲ್ಲ. ನಾನೆಂದೂ ನಿಮ್ಮ ಮನೆಗೆ ಬಂದಿರಲಿಲ್ಲ" ಎಂದೂ ಸೇರಿಸಿದ.

"ಅಮ್ಮ ಬದುಕಿದ್ದಾಗಲೂ ಬಂದಿರಲಿಲ್ವಾ?"

"ಇಲ್ಲ......" ಎಂದ. ನೀವೆಂಥಾ ಮಾವ? ನೀವು, ರಮಾ ಎಲ್ಲಾ ಬರೀ ಸುಳ್ಳು..... ಅವಳು ಅವಡು ಕಚ್ಚಿ ನುಡಿದಾಗ ಅವನಿಗೆ ಒಂದು ಉಪಾಯ

ಹೊಳೆಯಿತು.

"ನನ್ನ ಜತೆ ಬರ್ತೀಯಾ? ನಾನು ಇಲ್ಲೇ ಎಲ್ಲಾದರೂ ಹೊರಗೆ ತಿರುಗಾಡಿಸಿಕೊಂಡು ಬರ್ತೀನಿ"

"ಓ...... ಷೂರ್" ಎನ್ನುತ್ತಾ ಅವಳು ಸರ್ರನೆ ಎದ್ದಾಗ ಅವನಿಗೆ ದಿಗಿಲಾಗಿತ್ತು. ಆದರೆ ತಾನು ಈಗ ಆಡಿದ ಮಾತಿಗೆ ತಪ್ಪಬಾರದು ಎಂದುಕೊಂಡ.

ಅವನ ಸ್ಕೂಟರ್ ಇರಲಿಲ್ಲವಾದ್ದರಿಂದ ಒಂದು ಆಟೋ ರಿಕ್ಷಾ ಹಿಡಿದ. ಅವಳು ಯಾವ ಅಳುಕು, ಸಂಕೋಚಗಳಿಲ್ಲದೇ ಆಟೋ ಹತ್ತಿದ್ದಳು. ಅವಳ ಮಗ್ಗುಲಿಗೆ ಕುಳಿತಿದ್ದ ಅವನು ಬೆವತಿದ್ದ.

"ಎಲ್ಲಿಗೆ ಹೋಗೋಣ?" ಅವನು ಅವಳ ಕಡೆಗೆ ತಿರುಗಿ ಕೇಳಿದ.

"ನಿಮ್ಮ ಮನೆಗೆ ಕರೆದುಕೊಂಡು ಹೋಗ್ತೀರಾ..... ಮಾವಾ..... ಅಲ್ಲ ಅಲ್ಲ..... ಶ್ರೀ ಅಂತ ಕರೀತೀನಿ. ನನಗೆ ಮಾವ ಅಂತ ಕರೆಯೋಕೆ ಇಷ್ಟ ಇಲ್ಲ" ಅವನು ನಕ್ಕ.

"ನನ್ನ ಹೆಸರು ಶ್ರೀಕಾಂತ ಅಂತ ನಿನಗೆ ಹೇಗೆ ಗೊತ್ತಾಯ್ತು?"

"ರಮಾ, ನಿಮ್ಮ ವಿಚಾರ ಎಲ್ಲಾ ಹೇಳಿದಾಳೆ" ಏನೇನು ಹೇಳಿದಾಳೆ ಎಂದು ಕೇಳುವ ಧೈರ್ಯ ಬರಲಿಲ್ಲ.

"ನಿಮ್ಮ ಮನೆಗೆ ಹೋಗೋಣ್ವಾ? ನನಗೆ ಅಜ್ಜಿಯನ್ನು ನೋಡಬೇಕೂಂತ ಆಸೆ. ನನಗೆ ನೋಡಿದ ನೆನಪೇ ಇಲ್ಲ"

"ಅಜ್ಜಿ ಊರಲಿಲ್ಲ" ದಿಢೀರನೇ ಸುಳ್ಳು ಬಾಯಿಂದ ಬಂದಿತ್ತು. ಅಮ್ಮನೆದುರಿಗೆ ಯಾರೋ ಈ ಅಪರಿಚಿತ ಹುಡುಗಿಯನ್ನು ಕರೆದುಕೊಂಡು ಹೋಗಿ ನಿಲ್ಲಿಸಿ, ಇವಳು ನಿನ್ನ ಮೊಮ್ಮಗಳು ಅಂತ ತಮಾಷೆ ಮಾಡೋಕೆ ಸಾಧ್ಯವಿಲ್ಲ ಅಂತ ಅವನಿಗೆ ಗೊತ್ತಿತ್ತು.

ನಿನ್ನ ಮನೆಗೆ ಹೋಗೋಣ ಎಂದು ಹೇಳುವ ಮನಸ್ಸಾದರೂ ತಡೆದುಕೊಂಡ. ಆಟೋದಲ್ಲೇ ಸುತ್ತಾಡುತ್ತಾ ಇರಲು ಸಾಧ್ಯವೇ. ಎಲ್ಲಾದರೂ ಇಳಿಯಲೇ ಬೇಕು ಎಂದುಕೊಂಡು, ಹತ್ತಿರದಲ್ಲಿದ್ದ ಹೋಟೆಲ್ಲೊಂದರ ಮುಂದೆ ಆಟೋ ನಿಲ್ಲಿಸಿದ.

"ಹೋಟೆಲ್ಲಿನಲ್ಲಿ ಏನಾದ್ರೂ ತಿನ್ನೋಣ್ವಾ?" ಅವಳು ಖುಷಿಯಿಂದ ಒಪ್ಪಿಕೊಂಡಾಗ ಅವನಿಗೆ ಪಿಚ್ಚೆನಿಸಿತು.

"ರಮಾಳ ಜತೆ ಅವರ ಮನೇಲಿ, ಒಳ್ಳೆ ಊಟ ಮಾಡ್ತೀನಿ ಅನ್ನೋ

ಆಸೆಯಿಂದ ನನಗೆ ಟೋಸ್ಟ್ ಸೇರಲಿಲ್ಲ....." ಎಂದಳು. ಇಬ್ಬರೂ ಮೇಲಿದ್ದ ಫ್ಯಾಮಿಲಿ ರೂಮಿನಲ್ಲಿ ಕುಳಿತರು. ಎರಡು ದೋಸೆ, ಎರಡು ಕಾಫಿ.... ಎಂದು ಆರ್ಡರ್ ಕೊಟ್ಟ.

"ಬೇಡ ನನಗೆ ಕಾಫಿ ಬೇಡ. ಐಸ್ ಕ್ರೀಂ ಬೇಕು" ಎಂದಳು. ಸಂಕೋಚವಿಲ್ಲದೇ ಯಾವ ಮಾತು ಇಲ್ಲದೇ ಇಬ್ಬರೂ ಮಸಾಲೆ ದೋಸೆಯನ್ನು ತಿಂದರು. ಅವನು ಬಿಸಿಬಿಸಿ ಕಾಫಿಯನ್ನು ನಿಧಾನವಾಗಿ ಕುಡಿದ. ಅವಳು ಐಸ್‌ಕ್ರೀಂನ್ನು ಗಬಗಬನೆ, ಕರಗುವ ಮುಂಚೆ ತಿಂದು ಮುಗಿಸಿದಳು. ಮತ್ತೆ ಅಲ್ಲಿಂದ ಒಂದು ಆಟೋ ರ್‍ಕ್ಷಾ ಹತ್ತಿದರು.

"ನಾನೀಗ ಇಲ್ಲಿಂದ ಓಡಿ ಹೋದರೆ ಹೇಗಿರುತ್ತೆ?" ಅವಳು ಪ್ರಶ್ನಿಸಿದಾಗ ಅವನು ಬೆಚ್ಚಿದ. ಆದರೂ ಹೇಳಿದ.

"ನಿನ್ನಿಷ್ಟ. ಓಡಿ ಹೋಗಲೇ ಬೇಕೂಂತ ಇದ್ದರೆ ಓಡಿಹೋಗು. ಆದರೆ ಪೋಲೀಸಿನವರು ನಿನ್ನನ್ನು ಬಿಡುವುದಿಲ್ಲ. ಮತ್ತೆ ಹಿಡಿಯುತ್ತಾರೆ. ಮತ್ತೆ ಆಸ್ಪತ್ರೆಗೆ ಕರೆತಂದು ಸೇರಿಸುತ್ತಾರೆ, ಆಗ ಇಷ್ಟೂ ಫ್ರೀಡಂ ಇರುವುದಿಲ್ಲ"

"ಯಾರ ಕೈಗೂ ಸಿಕ್ಕಿ ಬೀಳುವುದಿಲ್ಲ. ಸೂಯಿಸೈಡ್ ಮಾಡಿಕೊಂಡರೇ....."

"ನೀನು ಹಾಗೆಲ್ಲಾ ಮಾಡಿಕೊಂಡರೆ ನಾನು ಜೈಲಿಗೆ ಹೋಗಬೇಕಾಗುತ್ತದೆ ಗೊತ್ತಾ? ನನ್ನನ್ನು ಜೈಲಿಗೆ ಕಳಿಸಬೇಕೂಂತ ಆಸೆ ಇದ್ದರೆ ಹಾಗೇ ಮಾಡು. ನಿನ್ನಿಷ್ಟ. ನಾನು ತಡೆಯುವುದಿಲ್ಲ"

"ನಾನು ಸತ್ತರೆ ನನಗೋಸ್ಕರ ಯಾರಿಗೂ ದುಃಖವಾಗುವುದಿಲ್ಲ ನಂಗೊತ್ತು. ಅದಕ್ಕೇ ನನಗೆ ಪದೇ ಪದೇ ಹಾಗನ್ನಿಸುತ್ತೆ"

"ಡಾಕ್ಟರ್‌ಗೆ ಈ ವಿಷಯ ತಿಳಿದರೆ.... ನಿನ್ನನ್ನು ನರ್ಸಿಂಗ್ ಹೋಂನಿಂದ ಆಚೆಗೇ ಕಳಿಸುವುದಿಲ್ಲ ತಿಳೀತಾ?"

"ಪ್ಲೀಸ್ ಹೇಳಬೇಡಿ. ನನಗೆ ಸದಾ ಅಲ್ಲಿರಲು ಇಷ್ಟವಿಲ್ಲ. ನನಗೆ ಅಲ್ಲಿಂದ ಬಿಡುಗಡೆ ಯಾವಾಗ?"

"ಅದನ್ನು ಡಾಕ್ಟರೇ ನಿರ್ಧರಿಸಬೇಕು. ಅದ್ಸರಿ..... ಡಿಸ್ಚಾರ್ಜ್ ಆದ ನಂತರ ಎಲ್ಲಿಗೆ ಹೋಗ್ತೀಯ? ಆ ಹಾಸ್ಟೆಲ್ಲು ಇಲ್ಲವಲ್ಲ. ಈಗ....."

"ನಿಮ್ಮ ಮನೆಗೆ ಬರ್ತೀನಿ......" ಅವಳು ತಟಕ್ಕನೇ ನುಡಿದಾಗ ಅವನು ಗಲಿಬಿಲಿಗೊಂಡ.

"ಯಾಕೆ ಸುಮ್ಮನಾಗಿ ಬಿಟ್ರೆ ಶ್ರೀ? ನಿಮಗೂ ನಾನು ನಿಮ್ಮ ಮನೆಯಲ್ಲಿರುವುದು ಇಷ್ಟವಿಲ್ಲವಾ?"

"ಹಾಗೇನಿಲ್ಲ, ಮೊದಲು ಡಾಕ್ಟರು ಏನು ಹೇಳ್ತಾರೋ ನೋಡೋಣ" ಎಂದು ಹೇಳಿ ತಪ್ಪಿಸಿಕೊಂಡ. ಅವರಿಬ್ಬರೂ ಆಟೋದಿಂದ ಇಳಿದಾಗ ರಮಾ, ಮಹೇಶ ಅವನಿಗಾಗಿ ಕಾಯುತ್ತಾ ನಿಂತಿದ್ದರು. ರಮನ ಮೇಲೆ ಸಿಟ್ಟು ಇದ್ದುದರಿಂದ ವಸುಧಾ ಅವಳನ್ನು ಮಾತನಾಡಿಸದೇ ಮುಂದೆ ಮುಂದೆ ಹೋದಳು. ಅವಳ ಹಿಂದೆ ಹೋಗು ಎನ್ನುವಂತೆ ಶ್ರೀಕಾಂತ ರಮಳಿಗೆ ಸಂಜ್ಞೆ ಮಾಡಿದ. ಅವಳು ವಿಶ್ವಾಸನೊಂದಿಗೆ ವಸುಧಾಳ ಹಿಂದೆ ಹಿಂದೆ ನಡೆದಳು. ಮಹೇಶ, ಶ್ರೀಕಾಂತ ಮಾತನಾಡುತ್ತಾ ಹೊರಗೇ ನಿಂತರು.

ವಸುಧಾ ಆಯಾಸಗೊಂಡವಳಂತೆ ಮಂಚದ ಮೇಲೆ ಉರುಳಿಕೊಂಡಳು.

"ಎಲ್ಲೆಲ್ಲಿಗೆ ಹೋಗಿದ್ರೀ...... " ಎನ್ನುತ್ತಾ ರಮಾ ಹತ್ತಿರ ಬಂದಾಗ ವಸುಧಾ ಪಕ್ಕಕ್ಕೆ ಮುಖ ತಿರುಗಿಸಿಕೊಂಡಳು.

"ಓ.ಕೆ. ನನ್ನ ಮೇಲೆ ಕೋಪ ಅಲ್ವಾ? ನಾನೇನು ಮಾಡಲಿ? ವಿಶೂ ಎದ್ದದ್ದೇ ಲೇಟು. ಅದಕ್ಕೆ ನಾನೇ ಶ್ರೀಕಾಂತನ್ನು ಕಳಿಸಿದ್ದು........ "

"ಹಾಗಾದ್ರೆ ಈಗ ನಿಮ್ಮ ಮನೆಗೆ ಹೋಗೋಣ್ವಾ? ಎನ್ನುತ್ತಾ ಸಡಗರದಿಂದ ವಸುಧಾ ಎದ್ದಳು"

"ಈಗ ಲೇಟಾಗಿ ಹೋಯ್ತು. ಡಾಕ್ಟರು ಇವತ್ತು ಮತ್ತೆ ಪರ್ಮಿಷನ್ ಕೊಡುವುದಿಲ್ಲ. ಮುಂದಿನವಾರ...... "

"ಕರೆದುಕೊಂಡು ಹೋಗೋಕೆ ಇಷ್ಟವಿಲ್ಲದಿದ್ದರೆ ಸುಳ್ಳು ಪ್ರಾಮಿಸ್ ಮಾಡಬೇಡ ರಮಾ.... ನನಗೆ ಎಲ್ಲಾ ಗೊತ್ತಾಗುತ್ತೆ." ರಮಳಿಗೆ ಚಾಟಿಯಿಂದ ಹೊಡೆದಂತಾಗಿತ್ತು. ಶ್ರೀಕಾಂತನ ಮಾತು ಕೇಳಿ, ಯಾರೋ ಈ ವಿಚಿತ್ರ ಹುಡುಗಿಯಿಂದ ಅನ್ನಿಸಿಕೊಳ್ಳಬೇಕಾಯ್ತು. ಇವಳಿಗೋಸ್ಕರ ತಾನು, ಇವಳ ತಂದೆ ಮನೆಗೆ ಸಹ ಹೋಗಿದ್ದೆನಲ್ಲ, ಸರಿಯಾಗಿದ್ದಾರೆ ತಂದೆ ಮತ್ತು ಮಗಳು. ವಿಚಿತ್ರ ಸ್ವಭಾವದವರು ಅಂತಂದುಕೊಂಡರೂ, ಸೌಜನ್ಯವನ್ನು ಮರೆಯದೇ "ಬಾರೋ ವಿಶೂ..... ವಸುಧಂಗೆ ನಮ್ಮ ಮೇಲೆ ಕೋಪ....." ಎನ್ನುತ್ತಾ ಎದ್ದಳು. ವಿಶೂ ಬೈ ಬೈ ಮಾಡಿದಾಗ ವಸುಧಾ ಕೈಯಾಡಿಸಿದಳು. ರಮಾ ಸಹ ಬೈ ವಸುಧಾ ಎಂದು ಹೇಳಿ ಹೊರಗೆ ಬಂದಳು. ಸುಧಾಕರರಾಯರ ಮನೆಯಲ್ಲಿ ಏನು ಮಾತುಕತೆ ನಡೆಯಿತೆಂದು ಅವಳೂ ಹೇಳಲಿಲ್ಲ. ಇವನೂ ಕೇಳಲಿಲ್ಲ. ಮಹೇಶ ಸಂಕ್ಷಿಪ್ತವಾಗಿ ಕೆಲವು ವಿಷಯಗಳನ್ನು ತಿಳಿಸಿದ.

* * * *

ಸಾಯಂಕಾಲ ತನಗಾಗಿ ಅಂಗಡಿಯ ಬಾಗಿಲಿನಲ್ಲಿ ಕಾಯುತ್ತಾ ನಿಂತಿದ್ದ

ರೂಪಳನ್ನು ಕಂಡು ಶ್ರೀಕಾಂತನಿಗೆ ಸಂತಸವಾಗಲಿಲ್ಲ. ಮಹಾ ದೊಡ್ಡ ಮನುಷ್ಯೆ. ಇನ್ನೂರು ರೂಪಾಯಿಗಳನ್ನು ವಾಪಸ್ಸು ಕೊಡಲು ಬಂದಿದ್ದಾಳೆ ಅಂತಂದುಕೊಂಡ. ಇವತ್ತು ತನ್ನ ಮಗುವನ್ನು ಜತೆಗೆ ಕರೆತಂದಿರಲಿಲ್ಲ. ಅವನು ಹೇಳದೆಯೇ ಅಲ್ಲಿದ್ದ ಇನ್ನೊಂದು ಕುರ್ಚಿಯ ಮೇಲೆ ಕುಳಿತಳು. ಏನು ಸಮಾಚಾರ ಎಂದು ಇವನು ವಿಚಾರಿಸಲಿಲ್ಲ.

"ನಾನು ನಿನ್ನ ಹತ್ತಿರ ಸ್ವಲ್ಪ ಪರ್ಸನಲ್ ಆಗಿ ಮಾತನಾಡಬೇಕು" ಎಂದು ಪ್ರಾರಂಭಿಸಿದಳು.

"ಏನದು?" ಎಂದು ಇವನು ಕೇಳಲಿಲ್ಲ. ಅವಳೇ ಮುಂದುವರೆಸಿದಳು.

"ಶ್ರೀಕಾಂತ.... ನಾನು ನಿನ್ನನ್ನು ತಿರಸ್ಕರಿಸಿಬಿಟ್ಟೆ. ಅದಕ್ಕೇ ನನಗೆ ತಕ್ಕ ಶಿಕ್ಷೆಯಾಯಿತು" ಎಂದಳು ವ್ಯಥೆಯಿಂದ ಕೂಡಿದ ಧ್ವನಿಯಲ್ಲಿ. ಆದರೂ ಅವನು ಏನೆಂದು ಕೇಳಲಿಲ್ಲ.

"ನಾನು ಇಲ್ಲಿ ಕೂತು ಮಾತಾಡಿದರೆ, ನಿನ್ನ ಬಿಸಿನೆಸ್‌ಗೆ ತೊಂದರೆಯಾಗಬಹುದು, ಆದರೆ ನಾನು ಏನು ಮಾಡಲಿ? ನೀನು ನಮ್ಮ ಮನೆಗೆ ಬರುವುದಿಲ್ಲ. ನಾನು ನಿಮ್ಮ ಮನಗೆ ಬಂದರೂ ಎಲ್ಲರೆದುರಿಗೆ ನಿನ್ನೊಡನೆ ಮಾತನಾಡಲು ಆಗುವುದಿಲ್ಲ" ಆಗಲೂ ಏನು ವಿಷಯ ಎಂದು ಶ್ರೀಕಾಂತ ಕೇಳಲಿಲ್ಲ.

"ನಾನು, ಈಗ ನಮ್ಮ ತಂದೆ ಮನೆಗೇ ವಾಪಸ್ಸು ಬಂದು ಬಿಟ್ಟಿದೀನಿ.... ಡೈವೋರ್ಸ್ ಸಹ ಸಿಕ್ಕಿದೆ...." ಶ್ರೀಕಾಂತ ಸುಮ್ಮನೇ ಅವಳ ಕಡೆ ನೋಡಿದ.

"ನನಗೂ ನನ್ನ ಗಂಡನಿಗೂ ಸರಿ ಬರಲಿಲ್ಲ. ಅವನಿಗೆ ಬೇರೆ ಹೆಂಗಸಿನ ಸ್ನೇಹವಿದೆ ಅಂತ ತಿಳಿದದ್ದು ಮದುವೆಯಾದ ನಂತರವೇ, ಆದರೂ ಸಹಿಸಿಕೊಂಡಿದ್ದೆ. ಆದರೆ ನನ್ನ ಮಗಳ ಬಾಣಂತನಕ್ಕೆ ಅಂತ ನಾನು ಇಲ್ಲಿಗೆ ಬಂದಿದ್ದಾಗ, ಆ ಹೆಂಗಸನ್ನು ಮನೆಯಲ್ಲಿಯೇ ಕರೆದು ತಂದು ಇಟ್ಟುಕೊಂಡಿದ್ದ. ನನಗೇಕೋ ಅಸಹ್ಯವಾಯಿತು "

"ಇದನ್ನೆಲ್ಲಾ ನನಗೇಕೆ ಹೇಳ್ತಾ ಇದೀಯ?" ಸಿಡುಕಿ ಪ್ರಶ್ನಿಸಿದ.

"ನೀನ್ಯಾಕೆ ಇನ್ನು ಮದುವೆಯಾಗಿಲ್ಲ?" ಅವಳು ಇದ್ದಕ್ಕಿದ್ದಂತೆ ಪ್ರಶ್ನಿಸಿದಾಗ ಅವನಿಗೆ ಏನೋ ಸಂದೇಹ ಮೂಡಿತು.

"ಅದಕ್ಕೆ ನಾನೇಕೆ ನಿನಗೆ ಉತ್ತರ ಕೊಡಬೇಕು?" ಅವನೂ ಪ್ರಶ್ನಿಸಿದ.

"ಬಹುಶಃ ನನ್ನಿಂದ ನಿನಗೆ ನಿರಾಸೆಯಾಗಿ ಹಾಗೇ ಇರಲು ತೀರ್ಮಾನಿಸಿರಬಹುದು ಅಲ್ವಾ?"

"ನನಗ್ಯಾಕೆ ನಿರಾಸೆ? ನಾನು ಅದನ್ನೆಲ್ಲಾ ಮನಸ್ಸಲ್ಲಿಟ್ಟುಕೊಂಡೇ ಇಲ್ಲ"

"ಹಾಗಾದ್ರೆ.... ಹಾಗಾದ್ರೆ.... ನನ್ನನ್ನ ಮದುವೆಯಾಗ್ತೀಯಾ ಶ್ರೀಕಾಂತ? ನಾನು ಒಂಟಿಯಾಗಿರಲಾರೆ. ನನಗೆ ಸಂಗಾತಿ ಬೇಕು. ನನ್ನ ಮಗಳಿಗೆ ನೀನು ತಂದೆಯಾಗಬೇಕು. ನನ್ನ ಆಸೇನ ನೆರವೇರಿಸಿ ಕೊಡ್ತೀಯಾ?"

"ಈ ಪ್ರಶ್ನೆಗಳಿಗೆ ನಾನು ಉತ್ತರ ಕೊಡಲಾರೆ. ಪ್ಲೀಸ್, ಹೊರಟುಹೋಗು. ಮತ್ತೆಂದೂ ಈ ಮಾತುಗಳನ್ನು ನನ್ನೊಂದಿಗೆ ಆಡುವ ಪ್ರಯತ್ನ ಮಾಡಬೇಡ" ಶ್ರೀಕಾಂತ ಸಿಟ್ಟಿನಿಂದ ನುಡಿದರೂ ಅವಳು ಹೆದರಲಿಲ್ಲ.

"ನಾನು ನನ್ನ ಅಭಿಮಾನವನ್ನು ಬದಿಗಿಟ್ಟು ನಿನ್ನ ಬಳಿಗೆ ಬಂದಿದೀನಿ. ಪ್ಲೀಸ್ ನನ್ನನ್ನು ತಿರಸ್ಕರಿಸಬೇಡ. ನಾನು ನಿನ್ನ ಮೇಲೆ ಭರವಸೆಯನ್ನಿಟ್ಟು ಕೊಂಡಿದ್ದೇನೆ. ಇಲ್ಲದಿದ್ದರೆ ನಾನು ಜೀವಿಸಿರಲಾರೆ....."

"ಒಬ್ಬರ ಮೇಲೆ ಒಬ್ಬರು ಭರವಸೆಯನ್ನಿಟ್ಟುಕೊಂಡು ಜೀವಿಸುವ ಕಾಲ ಇದಲ್ಲ. ರೂಪಾ......ಈಗ ಕಾಲ ಬದಲಾಗಿದೆ. ನಿನ್ನಂತಹ ಎಷ್ಟೋ ಜನ ಹುಡುಗಿಯರು ಇರುತ್ತಾರೆ. ಅವರೆಲ್ಲಾ ಹೇಗೋ ಬದುಕುವುದಿಲ್ಲವೇ..... ಅವರವರ ಜೀವನವನ್ನು ಅವರೇ ರೂಪಿಸಿಕೊಳ್ಳುತ್ತಾರೆ. ಈ ವಿಷಯದಲ್ಲಿ ನನ್ನಿಂದ ಸಹಾಯವನ್ನು ನಿರೀಕ್ಷಿಸಬೇಡ. ಒಂದು ಸಾರಿ ಒಡೆದ ಮನಸ್ಸು ಮತ್ತೆ ಒಂದುಗೂಡಲು ಖಂಡಿತಾ ಸಾಧ್ಯವಿಲ್ಲ....."

"ನನಗೆ ಅವಮಾನ ಮಾಡ್ತಾ ಇದೀಯ ಶ್ರೀಕಾಂತ"

"ನೀನು ಅಜ್ಜಿಯ ಮಾತನ್ನು ಧಿಕ್ಕರಿಸಿ, ನನಗೆ ಅವಮಾನ ಮಾಡಿದ್ದನ್ನು ಮರೆತಿರುವಂತಿದೆ. ನನಗೆ ಮಾತು ಬೆಳೆಸಲು ಇಷ್ಟವಿಲ್ಲ. ಹೊರಟುಹೋಗು...." ಎಂದು ನುಡಿದಾಗ, ಅವಳು ಅವನ ಮುಂದೆ ಇನ್ನೂರರ ನೋಟನ್ನು ಇಟ್ಟು.... "ಆ ದಿನ ನನ್ನ ಸಮಯದಲ್ಲಿ ಸಹಾಯ ಮಾಡಿದ್ದಕ್ಕೆ ಥ್ಯಾಂಕ್ಸ್" ಎನ್ನುತ್ತಾ ತಿರುಗಿ ನೋಡದೇ ಹೊರಟುಹೋದಳು. ಶ್ರೀಕಾಂತನ ತಲೆ ಕೆಟ್ಟುಹೋದಂತಾಗಿತ್ತು. ನಾನೇ ನೂರೆಂಟು ಚಿಂತೆಗಳಲ್ಲಿ ಮುಳುಗಿ ಹೋಗಿದೀನಿ. ಇವಳು ಬೇರೆ ಬಂದು ಮನಸ್ಸನ್ನೂ ಕೆಡಿಸಿದಳು" ಎಂದು ಮನಸ್ಸಿನಲ್ಲೇ ಬೈದುಕೊಳ್ಳುತ್ತಾ ಆ ಹಣವನ್ನು ಟೇಬಲ್ಲಿನ ಡ್ರಾಯರಿನೊಳಗೆ ತುರುಕಿದ.

ಒಂದೆರಡು ದಿನಗಳವರೆಗೆ ರೂಪಳಾಡಿದ ಮಾತುಗಳೇ ಅವನ ತಲೆಯಲ್ಲಿ ತುಂಬಿಕೊಂಡಿತ್ತು. ಎಷ್ಟು ಧೈರ್ಯ ಅವಳಿಗೆ.....? ಯಾವ ಸಂಕೋಚವೂ ಇಲ್ಲದೆ ಮತ್ತೆ ಬಂದು ಮದುವೆಯಾಗ್ತೀಯಾ ಅಂತ ಎಷ್ಟು ಸುಲಭವಾಗಿ ಕೇಳಿದಳಲ್ಲ. ರೂಪ ಬಂದು ಹೋದ ವಿಷಯವನ್ನು ರಮಳಿಗೆ

ತಿಳಿಸಬೇಕೆಂದುಕೊಳ್ಳುತ್ತಿದ್ದ. ಹಿಂದೊಮ್ಮೆ ರೂಪ ತಿರಸ್ಕರಿಸಿದ್ದಾಗ ರಮಾ ಸಾಂತ್ವನ ಹೇಳಿದ್ದಳು. ತಾನು ಅದನ್ನು ಪ್ರೀತಿಯೆಂದು ಭ್ರಮಿಸಿದ್ದ. ಆದರೆ ಈಗ ರಮಳೊಡನೆ ಹೇಳಿದರೆ ಅವಳು ಏನನ್ನಬಹುದು. ರೂಪಳನ್ನೇ ಮದುವೆಯಾಗು ಅಂತ ಸಲಹೆ ನೀಡಿದರೇ.... ಬೇಡ, ತಾನು ಅವಳಿಗೆ ಏನನ್ನೂ ಹೇಳುವುದೇ ಬೇಡ ಎಂದು ನಿರ್ಧರಿಸಿದ......

ರಮಾ ಸಹ ಈಗ ಒಂಟಿಯೇ. ಪ್ರಕಾಶನನ್ನು ಪ್ರೀತಿಸಿ, ಎಲ್ಲರನ್ನು ಒಪ್ಪಿಸಿ, ಮದುವೆಯಾದದ್ದೇ ಒಂದು ಮಹಾ ಯಜ್ಞವೇನೋ ಎಂಬಂತೆ, ಅವರಿಬ್ಬರ ವಿವಾಹ ಜರುಗಿತ್ತು. ಪ್ರಕಾಶ ಸಂತುಷ್ಟನಾಗಿದ್ದ. ರಮಾ ಅಳುಕುತ್ತಲೇ ಗಂಡನ ಮನೆಯ ಒಳಕ್ಕೆ ಕಾಲಿಟ್ಟಿದ್ದಳು. ಪಾರ್ವತಿಗೆ ಮಾತ್ರ ಸಮಾಧಾನವಿರಲಿಲ್ಲ. ತನ್ನ ಅಸಂತೋಷವನ್ನು ಆಗಾಗ್ಗೆ ಪ್ರದರ್ಶಿಸದೇ ಇರುತ್ತಿರಲಿಲ್ಲ. ಅಡಿಗೆ ಕೆಲಸಗಳಲ್ಲಿ ರಮಾ ಕೈ ಹಾಕುವಂತಿರಲಿಲ್ಲ. ಮನೆಗೆ ಬಂದವರ ಎದುರಿಗೆ ಕುಳಿತು ಮಾತನಾಡುವಂತಿರಲಿಲ್ಲ. ಪದೇ ಪದೇ ತಾಯಿಯ ಮನೆಗೆ ಹೋಗುವಂತಿರಲಿಲ್ಲ. ಇದನ್ನೆಲ್ಲಾ ಸಹಿಸಿಯೂ ರಮಾ ಖುಷಿಯಿಂದ ಇರಲು ಪ್ರಯತ್ನಿಸುತ್ತಿದ್ದಳು. ಈ ಸಂದರ್ಭದಲ್ಲಿ ರಮಾ ಮೊದಲ ಬಾರಿಗೆ ಗರ್ಭಿಣಿಯಾದಾಗ, ಪಾರ್ವತಿ ಸಂತಸವನ್ನೇನೂ ವ್ಯಕ್ತಪಡಿಸಲಿಲ್ಲ. ಬದಲಿಗೆ ಅವಳ ಆಕ್ರೋಶ ಹೆಚ್ಚಾಗಿತ್ತು. ಪ್ರಕಾಶ ತಾನು ಪ್ರೀತಿಸಿದವಳನ್ನು ಕಡೆಗೂ ಮದುವೆಯಾಗಿ ಗೆದ್ದ. ತನಗಿಷ್ಟವಿಲ್ಲದಿದ್ದರೂ, ತಾನು ಅವಳನ್ನು ಮಗನಿಗಾಗಿ, ಸೊಸೆ ಅಂತ ಒಪ್ಪಿಕೊಳ್ಳಬೇಕಾಯ್ತು. ಈಗ ಅವಳಿಗೆ ಹುಟ್ಟುವ ಮಗುವನ್ನು ಮೊಮ್ಮಗು ಅಂತ ಎತ್ತಿ ಆಡಿಸಬೇಕಾದ ಪರಿಸ್ಥಿತಿ ಒದಗಿತಲ್ಲ ಎಂದುಕೊಂಡು ಅವಳ ಅಸಹನೆ ಹೆಚ್ಚಾಗಿತ್ತು. ನಡೆ ನುಡಿಗಳಲ್ಲಿ ತನ್ನ ಅಸಹನೆಯನ್ನು ವ್ಯಕ್ತ ಪಡಿಸುತ್ತಿದ್ದಳು.

ರಂಜಿನಿ ಬಸುರಿಯಾಗಿದ್ದಾಗ ತಾಯಿ ಮಾಡಿದ ಮುಚ್ಚಟೆ ಎಲ್ಲರಿಗೂ ತಿಳಿದದ್ದೇ. ಮಗಳಿಗೇ ಬೇರೆ ನ್ಯಾಯ. ಸೊಸೆಗೇ ಬೇರೆ ನ್ಯಾಯ. ಈ ಹೆಂಗಸರು ಬದಲಾಗುವುದೇ ಇಲ್ಲವೇನೋ.... ಅಂತ ಮನೆಯವರೆಲ್ಲಾ ಅಂದುಕೊಳ್ಳುವಂತೆ ಉದಾಸೀನವಾಗಿದ್ದು ಬಿಟ್ಟಳು. ಅದರ ತಾಪ ತಟ್ಟಿತೋ ಎನ್ನುವಂತೆ ರಮಳಿಗೆ ಅಬಾರ್ಷನ್ ಆಯಿತು. ಆಗ ಎಲ್ಲರೂ ದೂಷಿಸಿದ್ದೂ ಪಾರ್ವತಿಯನ್ನೇ.

"ಬಸಿರಿ ಹುಡುಗಿ ಅಂತ ರೆಸ್ಟ್ ಸಹ ಕೊಡದೇ.... ಅಷ್ಟು ದುಡಿಸಿದರೆ ಇನ್ನೇನಾಗುತ್ತೆ?" ಅಂತ. ಆಗ ಪಾರ್ವತಿಗೆ ಕೋಪದಿಂದ ಅಳು ಬರುವಂತಾಗಿತ್ತು.

ಯಾರಿಗೂ ತಿಳಿಯದಂತೆ ರಮಳ ಮನೆಗೆ ಹೋಗಿ ಅವಳ ತಾಯಿಯೊಡನೆ ಜಗಳವಾಡಿದ್ದಳು.

"ನಿಮ್ಮ ಮಗಳನ್ನೇ ಕೇಳಿ. ಅವಳು ರೆಸ್ಟ್ ತೆಗೆದುಕೊಂಡದ್ದೇ ಹೆಚ್ಚು. ನನ್ನ ಕೈಕಾಲು ಇನ್ನೂ ಗಟ್ಟಿಯಾಗಿದೆ. ನನ್ನ ಮನೆಯ ಕೆಲಸವನ್ನು ನಾನೇ ಮಾಡಿಕೊಳ್ಳುವ ಶಕ್ತಿ ನನಗಿದೆ. ಹೀಗೆಲ್ಲ ಹುರುಳಿಲ್ಲದ ಮಾತುಗಳನ್ನಾಡಬೇಡಿ. ನನ್ನ ಮಗನಿಗೋಸ್ಕರ, ನಿಮ್ಮ ಮಗಳನ್ನು ಸೊಸೆ ಅಂತ ಒಪ್ಪಿಕೊಂಡ ಮಾತ್ರಕ್ಕೆ, ಇಂತಹ ಮಾತನ್ನೆಲ್ಲ ನಾನು ಸಹಿಸುವುದಿಲ್ಲ ನೋಡಿ"

ರಮಳಿಂದ ಈ ವಿಷಯ ತಿಳಿದ ಪ್ರಕಾಶ ನೊಂದುಕೊಂಡ.

"ಅಮ್ಮಾ, ಘನತೆ ಗೌರವ ಬೇಡವೇ.... ಅವರ ಹತ್ತಿರ ಜಗಳವಾಡಿದ್ದಕ್ಕೆ ನಿನಗೆ ಸಿಕ್ಕಿದ್ದಾದರೂ ಏನು? ಯಾರ ಮೇಲಿನ ಕೋಪವನ್ನು ಯಾರ ಮೇಲೋ ತೀರಿಸಿಕೊಂಡರೆ.... ಜನ ನಗುಲ್ವೆ?" ಅಂತ ಬೈದಿದ್ದ.

"ಹೌದು, ನನಗೆ ಘನತೆ ಇಲ್ಲ, ಗೌರವ ಇಲ್ಲ, ಜನ ನಗುವ ತರಹಾನೇ ನನ್ನ ಸಂಸಾರ ಇರೋದು. ಅದಕ್ಕೆ ಕಾರಣ ನೀನೇ..... ಏನೂಂತ ಮೆಚ್ಚಿ ಮದುವೆಯಾದೆಯೋ ಈ ರಂಭೇನ. ನಡೆದರೆ ಸವೆದು ಹೋಗ್ತಾಳೆ ಅನ್ನೋ ತರಹ ಕೂರಿಸಿ ಮೆರೆಸ್ತೀಯಾ? ಆದರೆ ಅವರುಗಳು ನನ್ನನ್ನೇಕೆ ಆಕ್ಷೇಪಣೆ ಮಾಡಬೇಕು..... ಅದೆಲ್ಲ ನಿನಗೆ ಅರ್ಥವಾಗೊಲ್ಲ ಹೋಗು"

"ಅಂತೂ ನಿನ್ನ ಕೋಪಾನಾ ತೀರಿಸಿಕೊಳ್ಳಬೇಕು ಅಂತ ಕಾಯ್ತಿದ್ದೆ. ನನ್ನ ಹೆಂಡತಿ ಎನ್ನೋ ಕಾರಣದಿಂದ ರಮಾಳ ಮೇಲೆ ವಿಶ್ವಾಸವಿಲ್ಲ. ಇನ್ನು ಅವಳ ಹೊಟ್ಟೇಲಿ ಹುಟ್ಟುವ ಮಗು ಮೇಲೆ ನಿನಗೆಲ್ಲಿಂದ ವಿಶ್ವಾಸ ಬರುತ್ತೆ" ಅಂತ ಪ್ರಕಾಶ ಹಂಗಿಸಿ ನುಡಿದಾಗ, ತಾಯಿ ಮಗನಲ್ಲಿ ಮಾತಿನ ಘರ್ಷಣೆ ಮುಂದುವರೆಯಿತು. ಶ್ರೀಕಾಂತ ಮಧ್ಯೆ ಬಂದು ರಾಜಿ ಮಾಡಲು ಪ್ರಯತ್ನಿಸಿ ಸೋತಿದ್ದ. ರಮಾ ತನ್ನ ತಾಯಿಯ ಮನೆಯಲ್ಲಿದ್ದುದರಿಂದ ಈ ವಿಷಯಗಳು ಅವಳಿಗೆ ತಿಳಿಯಲಿಲ್ಲ. ಪ್ರಕಾಶ ತಾಯಿಯೊಡನೆ ಮಾತು ಬಿಟ್ಟ. ಮನೆಗೆ ಊಟ ತಿಂಡಿಗೆ ಸರಿಯಾಗಿ ಬರುತ್ತಿರಲಿಲ್ಲ. ರಮಳ ಮನೆಗೆ ಹೋಗುತ್ತಾನೆಂದುಕೊಂಡು ತಾಯಿ ಉದಾಸೀನದಿಂದ ಇದ್ದುಬಿಟ್ಟಳು. ಆದರೆ ನಾಲ್ಕೈದು ದಿನಗಳ ನಂತರ ರಮ ಬಂದು, ಪ್ರಕಾಶ ಅಲ್ಲಿಗೆ ಬರದೆ ಎಷ್ಟೋ ದಿನಗಳಾದವು ಎಂದು ತಿಳಿಸಿದಾಗ, ಪಾರ್ವತಿಗೆ ಆತಂಕವಾಗಿತ್ತು. ತಾನು ಮಗನೊಡನೆ ಅಷ್ಟು ಜಗಳವಾಡಬಾರದಾಗಿತ್ತು ಎಂದು ಪರಿತಪಿಸಿದಳು. ರಮಳನ್ನು ನೋಡಲು ಸಹ ಹೋಗಿಲ್ಲವೆಂದು ತಿಳಿದಾಗ, ಒಂದು ಬಗೆಯ

ಸಮಾಧಾನವಾಗಿತ್ತು. ಆದರೂ ತನ್ನ ಮೇಲಿನ ಸಿಟ್ಟಿಗೆ ಅವನು ಕೆಟ್ಟದಾರಿ ಹಿಡಿದರೆ, ಅದರ ಹೊಣೆಗಾರಳು ತಾನೇ ಆಗ್ತೀನಿ. ಹಾಗೆ ಮಾತ್ರ ಆಗಬಾರದು ಎಂದುಕೊಂಡು ಮತ್ತೊಮ್ಮೆ ಸೋತಳು.

"ಏನೋ ಆಫೀಸ್ನಲ್ಲಿ ಕೆಲಸ ಜಾಸ್ತಿ ಇರಬಹುದು. ಬರೋದೇ ತಡವಾಗಿ ಹೋಗುತ್ತೆ. ನಾನು ಅವನಿಗೆ ಹೇಳ್ತೀನಿ" ಎಂದು ಹೇಳಿಕಳಿಸಿದ್ದಳು. ಆದರೆ ತಾನೇ ಪ್ರಕಾಶನೊಡನೆ ಮಾತನಾಡಲು ಅಂಜಿ, ಶ್ರೀಕಾಂತನಿಗೆ ವಿಷಯವನ್ನು ತಿಳಿಸಿ, ಪ್ರಕಾಶನನ್ನು ಕೇಳುವಂತೆ ಹೇಳಿದ್ದಳು.

ಶ್ರೀಕಾಂತ ಪ್ರಕಾಶನಿಗೆ ಹೇಳಿದ್ದೂ ಅಲ್ಲದೇ, ರಮಳನ್ನು ಮನೆಗೆ ಕರೆದುಕೊಂಡು ಬರುವಂತೆ ಹೇಳಿದ.

"ಇಲ್ಲ, ಶ್ರೀಕಾಂತ. ಈ ಅಮ್ಮ ಸುಮ್ಮನೇ ಮನಸ್ಸಿಗೆ ಬೇಜಾರು ಮಾಡ್ತಾಳೆ ನನ್ನಿಂದಾಗಿ ರಮಳಿಗೂ ಹಿಂಸೆ. ಅವಳದ್ದೇನೂ ತಪ್ಪಿಲ್ಲವಲ್ಲ. ನಾನು ಅವಳಿಗೆ ಡೈವೋರ್ಸ್ ಕೊಟ್ಟುಬಿಡ್ತೀನಿ. ಆಗ ಈ ಅಮ್ಮನಿಗೆ ಖುಷಿಯಾಗಬಹುದು....."

"ರಮಂಗೆ ಡೈವೋರ್ಸ್ ಕೊಟ್ಟು ನೀನು ಖುಷಿಯಾಗಿರಲು ಸಾಧ್ಯಾನಾ? ನೀನು ರಮಳನ್ನು ಪ್ರೀತಿಸಿ ಮದುವೆಯಾದದ್ದು ನಿನ್ನ ಖುಷಿಗೋಸ್ಕರ. ಅಮ್ಮನಿಗೋಸ್ಕರ ಅಲ್ಲ. ನಿಮ್ಮಿಬ್ಬರ ಮಧ್ಯೆ ಅವಳ ಜೀವನ ಹಾಳಾಗುತ್ತೆ ಅಂತ ನಿನಗೆ ಅನ್ನಿಸೋಲ್ವಾ? ಅವಳು ಪ್ರೀತಿಸಿದ್ದು ನಿನ್ನನ್ನು..... ಪತಿಯಾಗಿ ಪಡೆದದ್ದು ನಿನ್ನನ್ನು..... ನಿನ್ನ ಜವಾಬ್ದಾರಿ ಏನೂಂತ ನಿನಗೆ ತಿಳಿದಿರಬೇಕು. ಅದು ಬಿಟ್ಟು ಅಮ್ಮನಿಗೋಸ್ಕರ ಹೆದರಿದರೆ ನಿಮ್ಮಿಬ್ಬರ ಜೀವನ ಹಾಳಾಗುತ್ತೆ ಅಷ್ಟೆ....... "

"ಓ.ಕೆ. ಶ್ರೀಕಾಂತ. ಈ ಸಾರಿ ನಿನ್ನ ಮಾತಿಗೆ ಬೆಲೆ ಕೊಟ್ಟು ರಮನ್ನ ಮನೆಗೆ ಕರೆದುಕೊಂಡು ಬರ್ತೀನಿ. ಆದರೆ ಅಮ್ಮ ಮತ್ತೆ ಇದೇ ತರಹದ ಮಾತುಗಳನ್ನಾಡಿದರೆ ನಾನು ಮನೆ ಬಿಟ್ಟು ಹೋಗ್ತೀನಿ ಹಾಗಂತ ಅಮ್ಮನಿಗೆ ಹೇಳಿಬಿಡು"

ಶ್ರೀಕಾಂತ ಈ ಮಾತುಗಳನ್ನು ಆ ತಕ್ಷಣವೇ ತಾಯಿಗೆ ತಿಳಿಸಲಿಲ್ಲ. ಆದರೂ ರಮಾ ಮತ್ತೆ ತಮ್ಮ ಮನೆಗೆ ಬಂದಿದ್ದಳು. ತಾಯಿ ಎಲ್ಲವನ್ನು ಸರಿಹೋಗಿಸಿಕೊಳ್ಳಲು ಪಡುತ್ತಿದ್ದ ಪ್ರಯತ್ನ ನಾಟಕೀಯವಾಗಿ ಕಾಣುತ್ತಿತ್ತು. ಈ ಸಮಯದಲ್ಲಿ ರಂಜಿನಿ ಮತ್ತೆ ಎರಡನೇ ಮಗುವಿನ ಬಾಣಂತನಕ್ಕೆ ಬಂದಿದ್ದಳು. ರಂಜಿನಿಗೆ ಲೇಡಿ ಡಾಕ್ಟರು ರೆಸ್ಟ್ ಬೇಕು ಅಂತ ಹೇಳಿದ್ದರಿಂದ

ರಂಜಿನಿ ಅಲ್ಲಾಡುವಂತಿರಲಿಲ್ಲ. ರಮಾ ಅವಳ ಮೊದಲ ಮಗುವನ್ನು ನೋಡಿಕೊಳ್ಳುವ ಕೆಲಸವನ್ನು ವಹಿಸಿಕೊಂಡಳು. ಮನೆ ಕೆಲಸಗಳಲ್ಲಿ ಅತ್ತೆಗೆ ಸಹಾಯಕಳಾಗುತ್ತಿದ್ದಳು. ರಂಜಿನಿ ಅಷ್ಟೊಂದು ವಿಶ್ರಾಂತಿ ತೆಗೆದುಕೊಂಡರೂ, ಏಳನೇ ತಿಂಗಳಿನಲ್ಲಿ ಹುಟ್ಟಿದ ಹೆಣ್ಣು ಮಗು, ಉಳಿಯದೇ ತೀರಿಕೊಂಡಾಗ, ಅತೀವ ದುಃಖವಾದದ್ದು ಪಾರ್ವತಿಗೆ. ಈಗ ಅವಳ ಅತ್ತೆ ಮನೆಯವರು ಏನನ್ನುತ್ತಾರೋ ಎನ್ನುವ ದಿಗಿಲಿನೊಂದಿಗೆ, ಯಾಕೆ ಹೀಗಾಯ್ತಪ್ಪಾ ಎನ್ನುವ ಕೊರಗು, ಈ ಸಮಯದಲ್ಲಿ ರಮ, ಪಾರ್ವತಿಗೆ ಆಪ್ತಳಾದಳು. ರಂಜಿನಿಯ ಆರೈಕೆ, ಮೊದಲ ಮಗುವಿನ ಜವಾಬ್ದಾರಿ, ಇದೆಲ್ಲವನ್ನು ತನ್ನೊಬ್ಬಳಿಂದ ನಿರ್ವಹಿಸಲು ಖಂಡಿತಾ ಸಾಧ್ಯವಿರಲಿಲ್ಲವೆನ್ನುವುದು ಅರ್ಥವಾಗಿತ್ತು. ಈ ನೆವದಲ್ಲಿ ರಮಳ ಮೇಲಿನ ಅಸಹನೆ ಕಡಿಮೆ ಆಗಿತ್ತು. ತಾಯಿಯ ಈ ಬದಲಾವಣೆಯನ್ನು ಶ್ರೀಕಾಂತ, ಪ್ರಕಾಶ ಇಬ್ಬರೂ ಗಮನಿಸಿದ್ದರು. ಅದಕ್ಕೆ ಕಾರಣ ಏನು ಎಂದು ತಿಳಿದಿದ್ದುದರಿಂದ ಇಬ್ಬರಿಗೂ ಸಂತಸವೇನೂ ಆಗಿರಲಿಲ್ಲ.

ರಂಜಿನಿ ಬಾಣಂತನ ಮುಗಿಸಿಕೊಂಡು ಹೊರಟುಹೋಗಿದ್ದಳು. ಈಗ ಮನೆಯಲ್ಲಿ ಹೆಚ್ಚಿನ ಕೆಲಸ ಯಾರಿಗೂ ಇಲ್ಲ. ಈ ಸಮಯದಲ್ಲಿ ರಮಾ ಮತ್ತೆ ಗರ್ಭಿಣಿ, ಎಂದು ತಿಳಿದಾಗ, ಪಾರ್ವತಿಯೇನೂ ಸಂತಸದಿಂದ ಕುಣಿದಾಡಲಿಲ್ಲ. ಆದರೆ ಹಿಂದಿನಂತೆ ಅಸಹನೆಯನ್ನು ತೋರಲಿಲ್ಲ. ಆದರೆ ಹಿರಿಯತನವನ್ನು ಉಳಿಸಿಕೊಳ್ಳಲು, ಸೊಸೆಗೆ ಸೂಕ್ತ ಸಲಹೆಗಳನ್ನು ನೀಡಿ ಆರೋಗ್ಯದ ಕಡೆ ಹೆಚ್ಚು ಗಮನ ಕೊಡುವಂತೆ ತಿಳಿಸುತ್ತಿದ್ದಳು. ದಿನ ತುಂಬಿತು. ರಮಾ ಒಂದು ಮುದ್ದಾದ ಗಂಡುಮಗುವನ್ನು ಹೆತ್ತಳು. ಪಾರ್ವತಿ ತಾನು ಅಜ್ಜಿಯಾದೆನೆಂಬ ಹೆಮ್ಮೆಯಿಂದ ಮುಖವರಳಿಸಿದರೂ, ಆತಂಕ ಕಾಡಿತ್ತು. ಮಗು ಹುಟ್ಟಿರುವುದು ಶುಭ ನಕ್ಷತ್ರದಲ್ಲಿ ಅಲ್ಲ. ಶಾಂತಿಯಾಗಬೇಕು. ಎಂದು ಶಾಸ್ತ್ರಿಗಳು ಹೇಳಿ, ಅವಳ ಮನಸ್ಸಿನ ನೆಮ್ಮದಿಯನ್ನು ಕೆಡಿಸಿಬಿಟ್ಟಿದ್ದರು. ಪ್ರಕಾಶ ತಾನು ಅದನ್ನೆಲ್ಲಾ ನಂಬುವುದಿಲ್ಲವೆಂದೂ, ಶಾಂತಿಯ ಅಗತ್ಯವಿಲ್ಲವೆಂದೂ ಖಡಾ ಖಂಡಿತವಾಗಿ ಹೇಳಿಬಿಟ್ಟಿದ್ದ. ಪಾರ್ವತಿ ಅವನನ್ನು ಒಪ್ಪಿಸುವುದರಲ್ಲಿ ಸಫಲಳಾಗಿರಲಿಲ್ಲ. ಈ ಕಾರಣದಿಂದಾಗಿ ಮಗುವಿನ ನಾಮಕರಣ ಮಹೋತ್ಸವವನ್ನು ಸಹ ಮುಂದೂಡಿಬಿಟ್ಟಿದ್ದರು. ಐದು ತಿಂಗಳು ತುಂಬಿದ ಮಗು, ಮನೆಯವರಿಗೆಲ್ಲಾ ಅಚ್ಚುಮೆಚ್ಚು. ಒಂದು ಕೈಯನ್ನು ಮಡಿಸಿ, ಸರಸರನೆ ಹೊಟ್ಟೆಯಲ್ಲಿ ದೇಕುತ್ತಾ ಒಂದು ಕಡೆಯಿಂದ ಇನ್ನೊಂದು ಕಡೆಗೆ

ಮೀನಿಗಿಂತ ವೇಗವಾಗಿ ಸರಿಯುವ ಮಗುವನ್ನು ಎಲ್ಲರೂ ಎತ್ತಿ ಮುದ್ದಾಡುವವರೇ.

ಕಡೆಗೆ ಅತ್ತು ಕರೆದು ರಮಾ ಪ್ರಕಾಶನನ್ನು ಒಪ್ಪಿಸಿದ್ದಳು.

"ನಿಮ್ಮ ವರ್ತನೆಯಿಂದ ಅಮ್ಮನ ಮನಸ್ಸಿಗೆ ಸದಾ ನೋವಾಗಿದೆ. ಈಗ ಮೊಮ್ಮಗ ಹುಟ್ಟಿರುವ ಸಂಭ್ರಮದಲ್ಲಿ ಎಲ್ಲಾ ಮರೆತಿದ್ದಾರೆ. ಈ ನೆವದಲ್ಲಿ ನೆಂಟರಿಷ್ಟರನ್ನು ಕರೆದು, ಮೊಮ್ಮಗನನ್ನು ಮೆರೆಸುವ ಆಸೆಗೆ ನೀವೇಕೆ ಅಡ್ಡಿಬರುತ್ತೀರಿ" ಎಂದಾಗ ಅವನು 'ಹೂಂ. ಏನಾದ್ರೂ ಮಾಡ್ಕೊಳ್ಳಿ' ಎಂದಿದ್ದ.

*    *    *    *

ಆದಿನ, ತಲೆನೋವು ಎಂದು ಹಿಂಸೆಪಡುತ್ತಿದ್ದರೂ ಪ್ರಕಾಶ ಕೆಲಸಕ್ಕೆ ಹೋಗಿದ್ದ. ನೋವು ಹೆಚ್ಚುತ್ತಾ ಹೋದಂತೆ, ಒಂದೆರಡು ಸಲ ವಾಂತಿ ಸಹ ಆಗಿತ್ತು. ಸುಸ್ತಾಗಿ ಕೂತವನು, ಇದ್ದಕ್ಕಿದ್ದಂತೆ ಜ್ಞಾನ ತಪ್ಪಿ ಬಿದ್ದಾಗ, ಸಹೋದ್ಯೋಗಿಗಳು ಅವನನ್ನು ಹತ್ತಿರದ ನರ್ಸಿಂಗ್ ಹೋಂಗೆ ಸೇರಿಸಿ, ಅವನ ಮನೆಯವರಿಗೆ ವರ್ತಮಾನ ತಿಳಿಸಿದರು.

ಬ್ರೈನ್ ಹೆಮರೇಜ್ ಇರಬಹುದೆಂದು ಶಂಕಿಸಿದ ಡಾಕ್ಟರ್ ತತ್‌ಕ್ಷಣದಿಂದಲೇ ಚಿಕಿತ್ಸೆ ಪ್ರಾರಂಭಿಸಿದ್ದರು. ಸ್ಕ್ಯಾನಿಂಗ್ ಮಾಡಿದ್ದಾಯಿತು. ಪ್ರಕಾಶನಿಗೆ ಹೋದ ಪ್ರಜ್ಞೆ ಮತ್ತೆ ಮರಳಿ ಬರಲೇ ಇಲ್ಲ. ಎರಡು ದಿನಗಳ ಹೋರಾಟದ ನಂತರ, ಎಲ್ಲರನ್ನು ಬಿಟ್ಟು ಯಾರೂ ಕಾಣದ ಲೋಕಕ್ಕೆ ಹೊರಟುಹೋಗಿದ್ದ. ಇಲ್ಲಿದ್ದವರು ಅದನ್ನು ನಂಬದವರಂತೆ ಕುಸಿದು ಬಿದ್ದರು.

ಪ್ರಕಾಶನ ಅಗಲಿಕೆಯ ದುಃಖ ಎಷ್ಟು ದಿನಗಳಾದರೂ ಯಾರಿಗೂ ಕಡಿಮೆಯಾಗಿರಲಿಲ್ಲ. ತಂದೆ ದುಃಖವನ್ನು ನುಂಗಿಕೊಂಡು ದಹಿಸಿ ಹೋಗಿದ್ದರೆ, ತಾಯಿ ಅದಕ್ಕೆಲ್ಲಾ ತಾನೇ ಕಾರಣವೇನೋ ಎಂಬಂತೆ ಆಗಾಗ್ಗೆ ನೆನೆಸಿಕೊಂಡು ಅಳುತ್ತಿದ್ದಳು. ಶ್ರೀಕಾಂತ, ತಾನು ಹೊಸದಾಗಿ ಪ್ರಾರಂಭಿಸಿದ್ದ ಅಂಗಡಿಯಲ್ಲಿ ಗಿರಾಕಿಗಳ ಮಧ್ಯೆ ತನ್ನ ದುಃಖವನ್ನು ಮರೆಯಲು ಯತ್ನಿಸಿದ್ದರೆ ರಮಾ ಅತ್ತೆಯ ಮನೆಯಲ್ಲಿ ನೆನೆಸಿಕೊಂಡು ದುಃಖಿಸಲೂ ಆಗದ ಸ್ಥಿತಿಯಲ್ಲಿ ಮಗುವನ್ನು ತಬ್ಬಿಕೊಂಡು ಮೌನವಾಗಿ ರೋದಿಸುತ್ತಿದ್ದಳು. ಏನೂ ಅರಿಯದ ಹಸುಗೂಸೆಂದರೆ ವಿಶ್ವಾಸನೊಬ್ಬನೇ.

ನಂಬಿಕೆ.... ನಂಬಿಕೆ ಒಂದೇ ಮನುಷ್ಯನ ಅಸ್ತಿತ್ವಕ್ಕೆ ಆಧಾರ. ಅದಿಲ್ಲದಿದ್ದರೆ ಬದುಕೇ ಇಲ್ಲ.... ನಾವೆಲ್ಲರೂ ಬದುಕುತ್ತಿರುವುದು ಈ ವಿಶ್ವಾಸದಿಂದಲೇ

ಎನ್ನುವಂತೆ, ಪ್ರಕಾಶನ ಆಸೆಯಂತೆ ಮಗುವನ್ನು ವಿಶ್ವಾಸನೆಂಬ ಹೆಸರಿನಿಂದ ಕರೆಯಲು ಪ್ರಾರಂಭಿಸಿದ್ದರು. ವಿಶ್ವಾಸ, ಎಲ್ಲರ ಮುದ್ದಿನ ವಿಶೂ ಆಗಿ ಅಂಬೆಗಾಲಿಟ್ಟ...... ಚಿಕ್ಕಪ್ಪನ ಕೈ ಹಿಡಿದು ಪುಟ್ಟ ಪುಟ್ಟ ಹೆಜ್ಜೆಗಳನ್ನಿಟ್ಟ. ಅಜ್ಜಿಯ ಮುದ್ದು ಮಾತುಗಳಿಂದ ತೊದಲು ಮಾತನ್ನು ಕಲಿತ.

ಕೆಲಸಕ್ಕೆ ಹೋಗಲಾರಂಭಿಸಿದ ಮೇಲೆ, ರಮಾ ತನ್ನ ಮಗನನ್ನು ಎತ್ತಿ ಮುದ್ದಾಡಲು ಸಿಗುತ್ತಿದ್ದ ಸಮಯ ಸಾಯಂಕಾಲದ ಹೊತ್ತು ಮಾತ್ರ. ಆ ಸಮಯದಲ್ಲಿ ಅವಳಿಗೆ ಪ್ರಕಾಶನ ನೆನಪು ಬಹಳ ಕಾಡುತ್ತಿತ್ತು. ಎಂಥಾ ಮೋಸ ಮಾಡಿಬಿಟ್ಟೆಯಲ್ಲಾ ಪ್ರಕಾಶ.... ನಿನ್ನನ್ನೇ ನಂಬಿ, ನಿನಗಾಗಿ ಹೋರಾಡಿ ನಿನ್ನ ಪತ್ನಿಯಾಗಿ ಈ ಮನೆಗೆ ಬಂದೆ. ನಿನ್ನ ಮಗುವಿನ ತಾಯಿಯಾದೆ. ಆದರೆ ನೀನೆಷ್ಟು ನಿರ್ದಯಿಯಾದೆ. ನನಗೆ ಇವನ ಜವಾಬ್ದಾರಿಯನ್ನು ವಹಿಸಿ ಹೊರಟುಹೋದೆಯಲ್ಲಾ. ನಾನು ಒಬ್ಬಳೇ ಹೇಗಿರಲಿ. ಜೀವಮಾನವೆಲ್ಲಾ ಹೀಗೆ ಒಂಟಿಯಾಗಿ ಹೇಗೆ ಕಾಲ ಕಳೆಯಲಿ? ಮಗುವಿನ ಮುಖವನ್ನು ತನ್ನ ಮುಖಕ್ಕೆ ಒತ್ತಿಕೊಂಡು ರೋದಿಸುತ್ತಿದ್ದಳು.

"ಇದನ್ನು ಪಾರ್ವತಿ ಗಮನಿಸಿದರೂ, ಸೊಸೆಗೆ ಏನೆಂದು ಸಮಾಧಾನ ಹೇಳಿಯಾಳು? ನಾಲ್ಕು ದಿನ ನಿಮ್ಮ ತಾಯಿಯ ಮನೆಯಲ್ಲಿದ್ದು ಬಾ ಅಂತ ಕಳಿಸಿದರೂ, ಹೋಗುತ್ತಿರಲಿಲ್ಲ"

"ವಿಶೂನ ಬಿಟ್ಟು ಅವಳು ತಾನೇ ಅಲ್ಲಿ ಹೇಗೆ ಇರಲು ಸಾಧ್ಯ? ಎಂದಾದರೂ, ತಾಯಿ ಮನೆಗೆ ಅರ್ಧಗಂಟೆ ಸಮಯ ಹೋಗಿದ್ದು ಬಂದುಬಿಡುತ್ತಿದ್ದಳು. ಉಳಿದಂತೆ ಅಡಿಗೆ ಊಟ, ನಿದ್ರೆ, ಕೆಲಸ ಇತ್ಯಾದಿ ಯಾಂತ್ರಿಕವಾಗಿ ನಡೆದರೂ, ರಮಳ ಮನಸ್ಸಿನಲ್ಲಿ ಏನಿದೆ ಅಂತ ಶ್ರೀಕಾಂತನಿಗೆ ತಿಳಿಯುವುದಾದರೂ ಹೇಗೆ? ಮೊದಲಿನಂತೆ ಸ್ನೇಹದಿಂದ ಮಾತಾಡುತ್ತಿದ್ದ ತನಗೆ ಅಗತ್ಯ ಬಿದ್ದಾಗ ಅವಳಿಂದ ಹಣವನ್ನು ಸಾಲ ಪಡೆಯುತ್ತಿದ್ದ. ಅವಳಿಗೇನಾದರೂ ಸಹಾಯ ಬೇಕಾದರೆ ಮಾಡುತ್ತಿದ್ದ. ಇಷ್ಟು ವರ್ಷಗಳಲ್ಲಿ ಎಂದೂ ರೂಪಳ ಬಗ್ಗೆ ಯಾವ ಮಾತನ್ನು ಅವಳೊಡನೆ ಆಡಿರಲಿಲ್ಲ. ಅವಳು ಗಂಡನ ಜತೆ ಇರಲಾಗದೇ, ತಂದೆ ಮನೆಯಲ್ಲಿದ್ದಾಳೆ ಎನ್ನುವ ಗುಸು ಗುಸು ವಿಷಯ ಅವನ ಕಿವಿಗೆ ಬಿದ್ದಿದ್ದರೂ, ಅದರ ಬಗ್ಗೆ ಚಕಾರವೆತ್ತಿರಲಿಲ್ಲ"

ಈಗ ರೂಪ, ತಾನು ಒಂಟಿಯಾಗಿರಲಾರೆ, ಸಂಗಾತಿಯಿಲ್ಲದೇ ಇರಲಾರೆ ಎಂದಳು ಎನ್ನುವುದನ್ನು ರಮಳೊಡನೆ ಹೇಗೆ ಹೇಳಬಲ್ಲ? ಈಗ ರಮಾ ಸಹ ಒಂಟಿ. ಸಂಗಾತಿಯ ಸಂಗಡವಿಲ್ಲದೇ ಅವಳೂ ದಿನಗಳನ್ನು ತಳ್ಳುತ್ತಿದ್ದಾಳೆ.

ಹಾಗಾದರೆ ರಮಳ ಮನಸ್ಸಿನಲ್ಲೂ ಈ ರೀತಿ ಆಲೋಚನೆಗಳು ಇರಬಹುದೇ...... ಅವಳಿಗೂ ಮರು ಮದುವೆಯಾಗುವ ಆಸೆ ಇರಬಹುದೇ..... ಹಾಗೇನಾದರೂ ಅವಳಲ್ಲಿ ಆಸೆ ಇದ್ದರೆ ಅದು ತಪ್ಪೇನಲ್ಲ. ರಮಾ ಏನೂ ಮುದುಕಿಯಲ್ಲ. ಅವಳ ಆಸೆ ಸಹಜವೇ. ಆದರೆ ಅವಳಲ್ಲಿ ಆ ರೀತಿಯ ಆಸೆಗಳೇನಾದರೂ ಇದ್ದರೆ ತಮ್ಮ ಮನೆಯಲ್ಲಿ ಅದನ್ನು ಪ್ರಕಟಗೊಳಿಸುವಂತಿಲ್ಲ. ಪ್ರಕಟಗೊಳಿಸಿದರೆ ಖಂಡಿತಾ ಒಂದು ಹಗರಣವಾಗುತ್ತದೆ. ಆದ್ದರಿಂದಲೇ ಅವಳು ಸುಮ್ಮನಿರಬಹುದೇ......

ಹಾಗೇನಾದರೂ ರಮಳಲ್ಲಿ ಆಸೆ ಇದ್ದರೆ, ತಾನು ಅವಳಿಗೆ ಖಂಡಿತಾ ಸಹಾಯ ಮಾಡಬೇಕು. ಅವಳ ಬಾಳು ಮತ್ತೆ ಬೆಳಗುವಂತೆ ಮಾಡಬೇಕು ಅಥವಾ ಅವಳಿಗೆ ಮಾತ್ತೆ ಮದುವೆಯಾಗುವ ಆಸೆ ಇಲ್ಲದಿದ್ದರೂ ತಾನು ಅವಳಿಗೆ ಆ ಸಲಹೆ ನೀಡಬೇಕು. ಅದು ನನ್ನ ಕರ್ತವ್ಯ. ಜೀವಮಾನವೆಲ್ಲಾ ಅವಳು ಒಂಟಿಯಾಗಿ, ಮಗನನ್ನು ಮುಂದೆ ತರುವುದಕ್ಕೆ ಸಿದ್ಧಳಾಗಿ ಎಲ್ಲವನ್ನು ತ್ಯಾಗ ಮಾಡಿ ವಿರಾಗಿಯಂತೆ ಬಾಳಲಿ ಎಂದು ತಾನಂತೂ ಖಂಡಿತಾ ಆಶಿಸುವುದಿಲ್ಲ. ಅಮ್ಮ ಅಪ್ಪ ಏನಾದರೂ ತಕರಾರು ಎತ್ತಿದರೂನಾನು ಅವಳ ಪರವಾಗಿ ಮಾತನಾಡಿ, ಅವಳು ಸುಖವಾಗಿರುವಂತೆ ಮಾಡಬೇಕು ಎಂದು ತನ್ನಲ್ಲೇ ನಿರ್ಧರಿಸಿದ. ಮಾತನಾಡಲು ತಕ್ಕ ಸಮಯವನ್ನು ಹುಡುಕಿದ.

ನಾಲ್ಕಾರು ದಿನಗಳು ಕಳೆದರೂ ಅವಳೊಡನೆ ಮಾತನಾಡಲು ಆಗಿರಲಿಲ್ಲ. ಮೆಡಿಸಿನ್‌ಗಳಿಗೆ ಸಂಬಂಧಪಟ್ಟಂತೆ ಒಂದು ಮೀಟಿಂಗ್‌ಗೆ ಹೋಗಬೇಕಾಗಿತ್ತು. ಫಾರ್ಮಸಿಸ್ಟ್ ಅಸೋಸಿಯೇಷನ್ ಮೆಂಬರು ಅವನು. ಅವನ ಪಕ್ಕದ ನಾವೆಲ್ಟಿ ಸ್ಟೋರ್‌ನ ಮಗನ ಮದುವೆ. ಬಹಳ ಬಲವಂತ ಮಾಡಿ ಕರೆದಿದ್ದ. ಮದುವೆ ರಿಸೆಪ್ಶನ್‌ಗಾದರೂ ಹೋಗಲೇಬೇಕಾಗಿತ್ತು. ಅವನು ಮಹೇಶ ಇಬ್ಬರೂ ರಿಸೆಪ್ಶನ್ ಊಟ ಮುಗಿಸಿ ಮನೆಗೆ ಬರುವ ಹೊತ್ತಿಗೆ ಸಾಕಷ್ಟು ಕತ್ತಲಾಗಿತ್ತು. ಮಹೇಶನ ಸ್ಕೂಟರ್ ಕೆಟ್ಟು ಹೋಗಿದ್ದರಿಂದ, ಅವನನ್ನು ಅವನ ಮನೆಯ ಹತ್ತಿರ ಇಳಿಸಿ ಬರುವ ಹೊತ್ತಿಗೆ ಹನ್ನೊಂದು ಗಂಟೆಯಾಗುತ್ತಾ ಬಂದಿತ್ತು.

ತಾಯಿಗೆ ಹುಶಾರಿಲ್ಲವೆಂದು ರಮಾ ಒಂದೆರಡು ದಿನಗಳು ತಾಯಿಗೆ ಸಹಾಯವಾಗಲೆಂದು ಅವರ ಮನೆಗೆ ಹೋಗಿದ್ದಳು.

"ವಿಶೂನೂ ಮನೇಲಿಲ್ಲ. ನೀನೂ ಆದೆಷ್ಟು ಹೊತ್ತು ಮಾಡಿದೆಯಪ್ಪಾ. ನನಗೆ ಕೂತು ಕೂತು ತೂಕಡಿಕೆ ಬರ್ತಾ ಇತ್ತು" ಎಂದಳು ತಾಯಿ

ಬಾಗಿಲು ತೆಗೆದು.

"ರಮಾ ಇವತ್ತೂ ಬಂದಿಲ್ವಾ? ನಾನು ಹೋಗಿ ಈಗಲೇ ಕರೆದುಕೊಂಡು ಬರ್ತೀನಿ ಎಂದು ಹೊರಟವನನ್ನು ತಾಯಿ ತಡೆದಳು"

"ಇಷ್ಟು ಹೊತ್ನಲ್ಲಿ ನೀನು ಹೋಗಿ ಕರೆದರೆ, ನೋಡಿದವರು ಏನಂದು ಕೊಂಡಾರು....... ಬೇಡ ಸುಮ್ಮನಿರು"

"ವಿಶೂನ ನೋಡದೇ ಎರಡು ದಿನ ಆಯ್ತು. ಅವಳೇಕೆ, ಅವನನ್ನು ಇಲ್ಲಿಯೇ ಬಿಟ್ಟು ಹೋಗಬಾರದಾಗಿತ್ತು?"

"ನನ್ನ ಕೈಲಿ ಅವನನ್ನು ಸುಧಾರಿಸೊಕ್ಕೆ ಆಗೊಲ್ಲಪ್ಪಾ. ನಿಮ್ಮಪ್ಪನ ಕೈಲೂ ಆಗೊಲ್ಲ. ನಾನೇ ಕರೆದುಕೊಂಡು ಹೋಗು ಅಂತಂದೆ...... "

ಅಮ್ಮ ನೀನು ತಪ್ಪು ಮಾಡಿದೆ ಎಂದು ಹೇಳಹೊರಟವನು ಸುಮ್ಮನಾದ. ತಾಯಿ ದೀಪಗಳನ್ನಾರಿಸಿದಳು. ಇವನು ಮಲಗಿದ. ಹಾಗೇ ಆ ದಿನ ರಿಸೆಪ್ಶನ್ ಸಮಯದಲ್ಲಿ ತನಗೆ ಕಂಡು ಬಂದ ಪರಿಚಯದ ಮುಖಗಳನ್ನು ನೆನೆಸಿಕೊಂಡ. ಮಧು ಮಕ್ಕಳನ್ನು ಪರಿಚಯಿಸಿಕೊಟ್ಟಾಗ, ಆ ಹುಡುಗಿಯನ್ನು ಈ ಮುಂಚೆ ತಾನೆಲ್ಲೋ ನೋಡಿರುವಂತೆ ಆ ಕ್ಷಣದಲ್ಲಿ ಅವನಿಗೆ ಅನ್ನಿಸಿತ್ತು. ಈಗ ಮತ್ತೆ ಹಾಗೇ ಅನ್ನಿಸಿತು. ಯಾರಿರಬಹುದು..... ಮತ್ತೆ ಮತ್ತೆ ತನ್ನ ನೆನಪಿನ ಶಕ್ತಿಗೆ ಕೆಲಸ ಕೊಟ್ಟ..... ಹ್ಲಾಂ..... ಗೊತ್ತಾಯಿತು. ವಸುಧಾ...... ವಸುಧಾಳಂತೆಯೇ ಆ ಹುಡುಗಿ ತನಗೆ ಕಂಡು ಬಂದಳು ಅಂತನ್ನಿಸಿತ್ತು. ತನ್ನ ಅನಿಸಿಕೆಗೆ ನಗುವೂ ಬಂತು. ಹುಡುಗಿ ತೆಳ್ಳಗೆ, ಬೆಳ್ಳಗೆ, ಮೇಕಪ್ ಮಾಡಿಕೊಂಡು, ಕೂದಲನ್ನು ಎತ್ತಿ ಕಟ್ಟಿ ಸಿಂಗರಿಸಿಕೊಂಡಿದ್ದ ಮಾತ್ರಕ್ಕೆ ವಸುಧಳಂತೆ ಇರಲು ಸಾಧ್ಯವೇ ಅಂತಂದು ಕೊಂಡರೂ, ಆ ರಾತ್ರಿಯಲ್ಲಿ ಅವನಿಗೆ ವಸುಧಾ ನೆನಪಿಗೆ ಬಂದದ್ದು ಏನೋ ಒಂದು ರೀತಿಯ ಮುದವನ್ನು ನೀಡಿತು. ಪಾಪ ನನ್ನನ್ನು ಮಾವ ಅಂತ ತಿಳಿದುಕೊಂಡಿದ್ದಾಳೆ ಅಲ್ಲವೇ....... ನಾಳೆ ಹೋಗಿ ಮಾತನಾಡಿಸಿ ಬರಬೇಕು. ಅವಳು ಆಸ್ಪತ್ರೆಯಲ್ಲಿ ಇರುವವರೆಗೂ ಆಗಾಗ್ಗೆ ಹೋಗಿ ಮಾತನಾಡಿಸಿಕೊಂಡು ಬರಬೇಕು ಎಂದು ನಿರ್ಧರಿಸಿದ. ಅಂತೂ ಅವನಿಗೆ ಅರಿವಿಲ್ಲದೆಯೇ ಅವಳ ಮೇಲೆ ಆಸಕ್ತಿ ಮೂಡಿತ್ತು.

* * * *

ತಾಯಿಗೆ ಕಷ್ಟವಾಗಬಹುದೆಂದು ಊಹಿಸಿ, "ನನಗೋಸ್ಕರ ತಿಂಡಿ ಮಾಡಬೇಡ. ನಾನು ಹೊರಗೇ ಎಲ್ಲಾದ್ರೂ ತಿಂತೀನಿ" ಅಂತಂದ ಶ್ರೀಕಾಂತ.

"ನಿಮ್ಮಪ್ಪನಿಗೂ ತಿಂಡಿ ಆಗಬೇಕಲ್ಲೋ..... ಹಾಗಾದರೆ ಅವರಿಗೆ ಬ್ರೆಡ್

ತಂದು ಬಿಡು. ನನಗೂ ಒಳ್ಳೇದೇ ಆಯ್ತು"

ಶ್ರೀಕಾಂತ ಬೇಕರಿಗೆ ಹೋಗಿ ಬ್ರೆಡ್ ಕೊಂಡು ಕೊಂಡ. ಹಾಗೇ ಮರೆಯದೇ ವಸುಧಾಳಿಗೆಂದು ಚಾಕಲೇಟ್ ಬಾರ್‌ಗಳನ್ನು ಕೊಂಡ. ಅವನಿಗೇ ನಗು. ಚಿಕ್ಕ ಹುಡುಗಿಗೆ ಕೊಡುವಂತೆ ಚಾಕಲೇಟ್ ತಗೊಳ್ತಿದೀನಿ ಅಂತ. ತಾಯಿಯ ಕೈಗೆ ಬ್ರೆಡ್ ಕೊಟ್ಟು, ಹಾಗೇ ನರ್ಸಿಂಗ್ ಹೋಂ ಕಡೆಗೆ ಗಾಡಿಯನ್ನು ಓಡಿಸಿದ. ಎದುರಿಗಿದ್ದ ಹೂವಿನ ಅಂಗಡಿಯಲ್ಲಿ ಮರೆಯದೇ ಗುಲಾಬಿ ಹೂಗಳನ್ನು ಕೊಂಡ.

ಮಂಚದ ಮೇಲೆ ಮೊಣಕಾಲುಗಳನ್ನು ಮಡಿಚಿ, ಗಲ್ಲಕ್ಕೆ ಕೈಯೂರಿ ಕುಳಿತಿದ್ದ ವಸುಧಾ, ಬಾಗಿಲ ಬಳಿ ಸದ್ದಾದರೂ ತಿರುಗಿ ನೋಡಲಿಲ್ಲ. "ಹಲೋ! ವಸುಧಾ ಹೇಗಿದೀಯ" ಎನ್ನುತ್ತಾ ಅವಳ ಮುಂದೆ ಬಂದು ನಿಂತರೂ ಅವಳು ಕತ್ತೆತ್ತಿ ನೋಡಲಿಲ್ಲ. ಅವಳಿಗೆ ಕೋಪ ಬಂದಿದೆಯೆಂದು ಅರಿತ.... "ಓ.....ಕೋಪ ಬಂದಿದೆ" ಎನ್ನುತ್ತಾ ಅವಳ ಮುಂದೆ ಗುಲಾಬಿ ಹೂಗಳನ್ನು ಹಿಡಿದ. ಅವಳು ಕೈಗೆ ಎತ್ತಿಕೊಳ್ಳಲಿಲ್ಲ. ಪಕ್ಕದ ಮೇಜಿನ ಮೇಲಿಟ್ಟ.

"ಹೋಗಲಿ. ಚಾಕಲೇಟ್ ತಿಂತೀಯಾ...... " ಎನುತ್ತಾ ಜೇಬಿನಿಂದ ಚಾಕಲೇಟ್ ಬಾರ್ ತೆಗೆದು ಅವಳ ಮುಂದೆ ಹಿಡಿದ.

"ನಂಗೆ ಬೇಡ" ಎಂದಳು ಮುನಿಸಿನಿಂದ.

"ನಿಂಗೆ ಬೇಡವಾದರೆ ನಾನೇ ತಿಂತೀನಿ. ನಾನು ತಿಂಡಿ ಸಹ ತಿಂದಿಲ್ಲ" ಎನ್ನುತ್ತಾ ಮೇಲಿನ ಕಾಗದವನ್ನು ಬಿಚ್ಚಿದಾಗ, ಸರ‍್ರನೆ ಅವನ ಕೈಯಿಂದ ಕಿತ್ತುಕೊಂಡಳು. ಅವನು ನಕ್ಕ.

"ಎರಡು ದಿನದಿಂದ ಬರಲೇ ಇಲ್ಲ. ನನ್ನನ್ನು ಇಲ್ಲಿಗೆ ಸೇರಿಸಿದ ಮೇಲೆ ನಾನು ಹೇಗಿದೀನಿ ಅಂತ ನೋಡೋ ಜವಾಬ್ದಾರಿ ನಿಮಗೆ ಬೇಡವಾ?"

"ಸಾರಿ ವಸುಧಾ..... ಅದಕ್ಕೆ ಕೋಪಾನಾ? ನನಗೆ ಏನೋ ಬೇರೆ ಕೆಲಸ ಇತ್ತು. ಆದರೂ ನಾನು ಫೋನು ಮಾಡಿ ವಿಚಾರಿಸಿದೆ"

"ಸುಳ್ಳು..... ಮಾಡೋದು ಬರೀ ತಪ್ಪು. ಸಾರಿ ಕೇಳೋದು, ಸುಳ್ಳು ಹೇಳೋದು ನನಗೆ ಇದೆಲ್ಲ ಇಷ್ಟವಿಲ್ಲ. ನಾನು ಇನ್ನು ಎಷ್ಟು ದಿನ ಇಲ್ಲಿರಬೇಕು? ನನಗಂತೂ ಸಾಕಾಗಿ ಹೋಗಿದೆ.... ಇಲ್ಲಿಂದ ಓಡಿ ಹೊರಟು ಹೋಗ್ತೀನಿ ಅಷ್ಟೇ....."

"ಅಂಥಾ ಕೆಲಸ ಮಾತ್ರ ಮಾಡಬೇಡ ವಸುಧಾ..... ಮತ್ತೆ ನಿನ್ನನ್ನು

ಹುಡುಕೋ ಕೆಲಸ ನನಗೇ ಬೀಳುತ್ತೆ" ಎನ್ನುತ್ತಾ ಮುಗುಳ್ನಕ್ಕ.

"ಈ ಆಸ್ಪತ್ರೆಗಿಂತ, ಆ ಹಾಸ್ಟೆಲ್ಲು ಲೈಫ್ ಎಷ್ಟೋ ಚೆನ್ನಾಗಿತ್ತು. ನನ್ನನ್ನು ಮತ್ತೆ ಅಲ್ಲಿಗೇ ಕಳಿಸಿಬಿಡಿ. ನನಗೆ ಅದೇ ಸರಿ"

"ಆ ಬದುಕು ನಿನಗೆ ಚೆನ್ನ ಅಂತ ಅನ್ನಿಸುತ್ತಾ ವಸುಧಾ..... ಆ ಜೀವನದಲ್ಲಿ ಏನಾದರೂ ಅರ್ಥ ಇದೆಯಾ? ಒಂದೆರಡು ದಿನ ನಾವ್ಯಾರೂ ಬರದಿದ್ದ ಮಾತ್ರಕ್ಕೆ ನಿನ್ನ ಜೀವನವೇ ಹಾಳಾಯ್ತು ಅಂತೇನೂ ಅಲ್ಲ"

"ಹೊಸದಾಗಿ ನನ್ನ ಬಾಳು ಹಾಳಾಗ ಬೇಕಾಗಿಲ್ಲ. ಎಂದೋ ಹಾಳಾಗಿಹೋಗಿದೆ. ನಡೆದದ್ದನ್ನೆಲ್ಲ ನನ್ನಿಂದ ಮರೆಯಲಾಗುತ್ತಿಲ್ಲ"

"ನೀನು ಮರೆಯಲೇಬೇಕು. ಇಲ್ಲದಿದ್ದರೆ ಏನು ಪ್ರಯೋಜನ?"

"ನನ್ನಿಂದ ಯಾರಿಗೆ ಪ್ರಯೋಜನ? ನಾನು ಯಾರಿಗೂ ಬೇಡವಾದ ಮೇಲೆ ಆ ಬದುಕೇ ನನಗೆ ಹಿತವಾಗಿ ಕಾಣಿಸುತ್ತೆ. ಈ ಪ್ರಪಂಚದಲ್ಲಿ ಸಿಗದಿರುವ ಸುಖಜೀವನಕ್ಕೆ ಅರ್ಥವನ್ನು ಹುಡುಕುವ ಆಸೆ ನನಗಿಲ್ಲ"

"ದೊಡ್ಡ ನಿರಾಶಾವಾದಿಯ ತರಹ ಮಾತನಾಡಬೇಡ, ಪ್ರಪಂಚದಲ್ಲಿ ನಿನ್ನಂತಹ ಹುಡುಗಿಯರು ಬೇಕಾದಷ್ಟು ಜನ ಇದ್ದಾರೆ. ಅವರೆಲ್ಲಾ ಅವರವರ ಬಾಳನ್ನು ಅವರೇ ರೂಪಿಸಿಕೊಂಡು ಸುಖವಾಗಿರಲು ಪ್ರಯತ್ನಿಸುತ್ತಾರೆ"

"ನನಗೆ ಅಂತಹ ಅವಕಾಶವೇ ಇಲ್ಲದ ಹಾಗೆ ಮಾಡಿಬಿಟ್ಟರು ನಮ್ಮ ತಂದೆ. ನನ್ನ ಬಾಳು ಹಾಳಾಗಲು ಅವರೇ ಕಾರಣ"

"ಅದು ನಿನ್ನ ಅನಿಸಿಕೆ. ಈ ಪ್ರಪಂಚದಲ್ಲಿ ಹುಟ್ಟಿ ಬೆಳೆದವರಿಗೆಲ್ಲ ಸರಿಯಾಗಿ ಬಾಳುವ ಅಧಿಕಾರವಿದೆ. ಯಾರ ಬಾಳನ್ನು ಯಾರೂ ಹಾಳು ಮಾಡುವುದಿಲ್ಲ. ಅದು ನಿನ್ನ ಭ್ರಮೆ. ನಿನ್ನ ತಪ್ಪನ್ನು ಮುಚ್ಚಲು ನಿನ್ನ ತಂದೆ ಮೇಲೆ ಆರೋಪ ಹೊರಿಸ್ತಿದೀಯ ಅಷ್ಟೇ."

"ನಿಮಗೇನು ಗೊತ್ತು ನಮ್ಮ ಮನೆ ವಿಚಾರ? ನಮ್ಮಪ್ಪ ಮತ್ತೆ ಮದುವೆಯಾದ್ದರಿಂದಲೇ ಇಷ್ಟೆಲ್ಲಾ ಆದದ್ದು. ಅದು ಅವರ ತಪ್ಪಲ್ಲವೇ?"

"ಏನಂದೆ? ನಿನ್ನ ತಂದೆ ಮತ್ತೆ ಮದುವೆಯಾಗಿದಾರಾ! ಸುಳ್ಳು..... ನಿನಗ್ಯಾರೋ ಸುಳ್ಳು ಹೇಳಿದಾರೆ"

"ನಾನೇಕೆ ಸುಳ್ಳು ಹೇಳಲಿ? ನಾನು ಅವಳನ್ನು ಕಣ್ಣಾರೆ ನೋಡಿದೀನಿ"

"ಇಲ್ಲ, ವಸುಧಾ ನೀನು ತಪ್ಪು ತಿಳಿದುಕೊಂಡಿದೀಯ. ಈಗ ಒಂದು ತಿಂಗಳ ಹಿಂದೆ ನಿನ್ನ ತಂದೆ ನನ್ನ ಮೆಡಿಕಲ್ ಶಾಪ್‌ಗೆ ಬಂದಿದ್ದರು. ಇದ್ದಕ್ಕಿದ್ದಂತೆ ಹುಶಾರಿಲ್ಲದೇ ಕುಸಿದುಬಿದ್ದರು. ನಾನೇ ಅವರನ್ನು ನರ್ಸಿಂಗ್

ಹೋಂಗೆ ಸೇರಿಸಿದೆ. ನಿಮ್ಮ ಮನೆಗೆ ವಿಷಯ ತಿಳಿಸಲೆಂದು ಹೋದಾಗ, ಅಲ್ಲಿ ಅಡಿಗೆಯವರ ಹೊರತು ಬೇರೆ ಯಾರೂ ಇರಲಿಲ್ಲ" ವಸುಧಾ ಅವನ ಮಾತನ್ನು ನಂಬದವಳಂತೆ ತಲೆಯಾಡಿಸಿದಳು.

"ಎಲ್ಲಿ ತಿರುಗೋಕ್ಕೆ ಹೋಗಿದ್ದಳೋ?"

"ಹಾಗೆಲ್ಲ ಮಾತನಾಡಬೇಡ ವಸುಧಾ...... ಹಾಗೆ ನಿಮ್ಮ ಚಿಕ್ಕಮ್ಮ ಇದ್ದಿದ್ದರೆ ಅಡಿಗೆಯವರು ಹೇಳದೇ ಇರುತ್ತಿದ್ದರಾ? ಅವರು ನಿಮ್ಮ ತಂದೆಯನ್ನು ನೋಡಲು ಬರುತ್ತಿರಲಿಲ್ವಾ?"

"ಅವಳು ನನ್ನ ಚಿಕ್ಕಮ್ಮ ಅಲ್ಲ, ನನಗೆ ಚಿಕ್ಕಮ್ಮ ಬೇಕಾಗಿಲ್ಲ"

"ಓ.ಕೆ. ಬೇಡವಾದರೆ ಬೇಡ. ಈಗಂತೂ ಅಲ್ಲಿ ಯಾರೂ ಇಲ್ಲ. ಆ ಮನೆಯಲ್ಲಿ ನಿಮ್ಮ ತಂದೆ ಒಂಟಿಯಾಗಿದ್ದಾರೆ, ನಾನೇ ನೋಡಿದೀನಿ. ಅದು ನಿಜ."

"ನಿಮ್ಮ ಮಾತಿನ ಮೇಲೆ ನನಗೆ ನಂಬಿಕೆ ಬರುತ್ತಿಲ್ಲ"

"ಹೋಗಲಿ ಬಿಡು. ಒಂದಲ್ಲ ಒಂದು ದಿನ ನನ್ನ ಮಾತಿನ ಮೇಲೆ ನಿನಗೆ ನಂಬಿಕೆ ಬರುತ್ತೆ. ಈಗ ಹೊರಗೆ ಹೋಗಿ ತಿಂಡಿ ತಿಂದು ಬರೋಣ ಬರ್ತೀಯಾ"

"ಓ.ಕೇ." ಎನ್ನುತ್ತಾ ಅವಳು ಎದ್ದಾಗ ಅವನು ಅಚ್ಚರಿಗೊಂಡ. ತೀರ ಎಳಸು, ತಿಳುವಳಿಕೆ ಸಾಲದು ಎಂದು ನಿಶ್ಚಯಿಸಿದ. ಹತ್ತಿರದ ಹೋಟೆಲ್ಲಿನಲ್ಲಿ ಇಬ್ಬರೂ, ಪೂರಿ ಪಲ್ಯ ತಿಂದರು. ಅವನು ಕಾಫಿ ಕುಡಿದ. ಅವಳು ಐಸ್‌ಕ್ರೀಂ ತಿಂದಳು. ಪಕ್ಕದ ಬೀಡಾ ಸ್ಟಾಲಿನಲ್ಲಿ ತೂಗು ಹಾಕಿದ್ದ ಕಾಮಿಕ್ಸ್‌ಗಳನ್ನು ಕಂಡು ಕಾಮಿಕ್ಸ್ ಬೇಕು ಅಂತ ಕೇಳಿ ತೆಗೆಸಿಕೊಂಡಳು. ಮತ್ತೆ ಅವಳನ್ನು ಕ್ಷೇಮವಾಗಿ ನರ್ಸಿಂಗ್ ಹೋಂ ನ ವಾರ್ಡ್ ತಲುಪಿಸಿ, ಬೈ ಬೈ ಮಾಡಿ ಹೊರಟ. ಅವಳಾಗಲೇ ಕಾಮಿಕ್ಸ್‌ನ ಹಾಳೆಗಳನ್ನು ತಿರುವುತ್ತಿದ್ದಳು. ಮಗುವಿನಂತಹ ವರ್ತನೆ ಎಂದು ತನ್ನಲ್ಲೇ ಹೇಳಿಕೊಂಡ. ಆದರೆ ಅವಳು ತಂದೆಯನ್ನು ದ್ವೇಷಿಸುತ್ತಿದ್ದ ರೀತಿ ಅವನಿಗೆ ಆತಂಕವನ್ನುಂಟುಮಾಡಿತ್ತು. ಹೀಗೇ ಮುಂದುವರೆದರೆ ಇವಳನ್ನು ತಂದೆ ಮನೆಗೆ ಸೇರಿಸುವುದಾದರೂ ಹೇಗೆ? ಆತನು ಅಷ್ಟೆ. ತನಗೆ ಸಂಬಂಧಿಸಿದ ವಿಷಯವೇ ಅಲ್ಲವೆನ್ನುವಂತೆ ನಿರಾಳವಾಗಿದ್ದಾರೆ. ಇವಳ ಚಿಕಿತ್ಸೆಗೆ ಹಣ ಎಷ್ಟು ಖರ್ಚಾಗಿದೆಯೋ..... ಆತ ಕೊಡದಿದ್ದರೆ ಏನು ಗತಿ? ಇದುವರೆಗೆ ನನಗಿರುವ ಒಳ್ಳೆಯ ಹೆಸರು ಹೊರಟು ಹೋಗುತ್ತದೆ ಅಷ್ಟೇ ಅಂತಂದುಕೊಂಡಾಗ ಬೇಸರವಾಯಿತು. ಆದಷ್ಟು ಬೇಗ ಆತನ

ಹತ್ತಿರ ಮಾತನಾಡಿ ಇತ್ಯರ್ಥ ಮಾಡಬೇಕು ಅಂತಂದುಕೊಂಡ.

ಅಂಗಡಿಗೆ ಹೋಗುವ ಮೊದಲು ಮಹೇಶನ ಸ್ಟುಡಿಯೋ ಕಡೆಗೆ ತಿರುಗಿದ. ಯಾರ ಬಳಿಯೋ ಮಾತನಾಡುತ್ತಿದ್ದ ಮಹೇಶ ಇವನನ್ನು ಕಂಡು ಇವನ ಬಳಿಗೆ ಬಂದ. ಇವನು ವಸುಧಾಳ ಬಗ್ಗೆ ಹೇಳಿದ.

"ಆತ ಯಾಕೆ ಹೀಗೆ ಮಾಡ್ತಿದಾರೆ ಅಂತ ನನಗೆ ಅರ್ಥವಾಗ್ತಿಲ್ಲ. ಒಂದು ಸಾರಿ ಅವರು ಬಂದು ಮಗಳನ್ನು ನೋಡಿ ಮಾತಾಡಿದರೆ, ಎಲ್ಲಾ ಸರಿ ಹೋಗುತ್ತದೆ. ಆದರೆ ಯಾಕೋ ಸುಮ್ಮನಿದ್ದು ಬಿಟ್ಟದರಲ್ಲಾ..... ಆ ಮನುಷ್ಯ"

"ಮತ್ತೇನು ಮಾಡ್ತೀಯಾ? ಹಣಕ್ಕೇನು ಮಾಡ್ತೀಯಾ?"

"ಇವತ್ತು ನಾವು ಮತ್ತೆ ಅವರ ಮನೆಗೆ ಹೋಗಿ ಮಾತನಾಡೋಣ ನನ್ನ ಜತೆಗೆ ಬರ್ತೀಯಾ?"

"ಸರಿ. ಬರ್ತೀನಿ. ಮಧ್ಯಾಹ್ನ ಹೋಗೋಣ್ವಾ?" ಹುಂ ಎಂದ.

ಇಬ್ಬರೂ ಅವರ ಮನೆಗೆ ಬಂದಾಗ, ಆತ ಇವರಿಗಾಗಿಯೇ ಕಾದಿದ್ದವರಂತೆ ಕಂಡರು. ಆದರೆ ಮಗಳು ಹೇಗಿದಾಳೆಂದು ಕೇಳಲಿಲ್ಲ. ಅವನ ಕೈಗೆ ಸಹಿ ಹಾಕಿದ್ದ ಒಂದು ಚೆಕ್‌ನ್ನಿತ್ತು ನುಡಿದರು.

"ನಮಗೋಸ್ಕರ ನಿಮಗೆಷ್ಟು ತೊಂದರೆ? ನರ್ಸಿಂಗ್‌ಹೋಂಗೆ ಹಣವನ್ನು ಕಟ್ಟಿಬಿಡಿ. ಇನ್ನು ಬೇಕಾಗಿದ್ದರೆ ನಾನು ಕೊಡ್ತೀನಿ..... "

"ಆದರೆ ನೀವು ಒಂದು ಸಲ ಬಂದಿದ್ರೆ ಚೆನ್ನಾಗಿತ್ತು"

"ಬರ್ತೀನಿ, ಅವಳಿಗೆ ನಾನು ಬೇಕಾದ ದಿನ ನಾನು ಖಂಡಿತಾ ಬರ್ತೀನಿ"

"ದೊಡ್ಡೋರು ನೀವು ಹೀಗೆ ಆಡಿದರೆ ಹೇಗೆ ಸಾರ್? ಅವಳಿನ್ನು ಚಿಕ್ಕವಳು, ತಿಳುವಳಿಕೆ ಸಾಲದು..... "

"ಅವಳು ಚಿಕ್ಕವಳು ನಿಜ. ಆದರೆ ಅವಳ ತಿಳುವಳಿಕೆ ಜಾಸ್ತಿ. ಅವಳಿಗೆ ಬೇಕಾಗಿರುವುದು ನಾನಲ್ಲ. ನನ್ನ ಹಣ ಅಷ್ಟೇ" ಆತ ಕೆಟ್ಟ ಮುಖ ಮಾಡಿ ಮಾತನಾಡಿದಾಗ ಇಬ್ಬರಿಗೂ ವ್ಯಥೆಯಾಯಿತು.

ಇಬ್ಬರೂ ಅಲ್ಲಿಂದ ಹೊರಟರು. ದಾರಿಯಲ್ಲಿ ಮಹೇಶ ನುಡಿದ.

"ಈಗ ಏನು ಮಾಡ್ತೀಯಪ್ಪಾ...... ಅವರ ಸಮಸ್ಯೆ ಬಗೆಹರಿಯು ವಂತೆಯೇ ಕಾಣ್ತೊಲ್ಲ"

"ನಂಗೂ ಗೊತ್ತಾಗ್ತಾ ಇಲ್ಲ. ನಾನ್ಯಾಕೆ ಸಿಕ್ಕಿಬಿದ್ದೆನೋ?"

"ಎಲ್ಲಾ ನಿನ್ನ ಗ್ರಹಚಾರ ಶ್ರೀಕಾಂತ. ಆತ ನಿನ್ನ ಅಂಗಡಿಯ ಮುಂದೇನೇ ಯಾಕೆ ಬೀಳಬೇಕಾಗಿತ್ತು?"

"ಇರಬಹುದು..... ಏನೋ ಉಪಕಾರ ಮಾಡೋಕೆ ಹೋದೆ. ಇನ್ನಾದರೂ ಸರಿ ಹೋಗಬಾರದಾ?"

"ಇವರಂತೂ ತಮ್ಮ ಹಠದಲ್ಲೇ ಇದ್ದಾರೆ. ಹೇಗಾದರೂ ಮಾಡಿ ಅವಳು ತನ್ನ ಹಠ ಬಿಡುವಂತೆ ಮಾಡಬೇಕು..... "

"ಹೇಗೆ ಮಾಡ್ತೀಯ...... ?" ಗೊತ್ತಿಲ್ಲ ಎನ್ನುವಂತೆ ತಲೆಯಾಡಿಸಿದ.

"ಚಾಕಲೇಟು, ಕಾಮಿಕ್ಸ್, ತಿಂಡಿ, ಅದೂ ಇದು ಕೊಡಿಸಿ ಪೂಸಿ ಹೊಡೆದು ಬುದ್ದಿ ಕಲಿಸಬೇಕು. ಆದರೆ ದುಡ್ಡು ಖರ್ಚಾಗುತ್ತಲ್ಲ"

"ಅವಳ ತಂದೆ ಕೊಡೋಕೆ ರೆಡಿಯಾಗಿದಾರಲ್ಲ. ಆದಷ್ಟು ಬೇಗ ಅವಳು ಈ ಮನೆಗೆ ಬರುವಂತೆ ಮಾಡಬೇಕು. ಇಲ್ಲದಿದ್ದರೆ ಅವಳು ಮತ್ತೆ ಏನಾಗ್ತಾಳೋ ಹೇಳಕ್ಕಾಗುಲ್ಲ ಅಂತ ಏನೇನೋ ಆಡ್ತಾಳೆ.... ಈತನಿಗೆ ಯಾಕೆ ಅರ್ಥ ವಾಗೊಲ್ಲವೋ?"

"ಹೌದು. ಅವಳನ್ನು ಆದಷ್ಟು ಬೇಗ ದಾರಿಗೆ ತರಬೇಕು. ಇಲ್ಲದಿದ್ದರೆ ನಮಗೇ ಕೆಟ್ಟ ಹೆಸರು" ಎಂದು ಮಹೇಶ ತಲೆಯಾಡಿಸಿದ.

ಮಧ್ಯಾಹ್ನ ಊಟಕ್ಕೆ ಬಂದಾಗ, ತಾಯಿ ಇನ್ನು ಅಡಿಗೆ ಮಾಡಿ ಮುಗಿಸಿರಲಿಲ್ಲ. "ನಾನು ಹೋಗಿ ವಿಶೂನ ಮಾತನಾಡಿಸಿಕೊಂಡು ಬಂದು ಬಿಡ್ತೀನಿ" ಎನ್ನುತ್ತಾ ರಮಳ ಮನೆ ಕಡೆ ಹೊರಟಾಗ ತಾಯಿ ಪ್ರಶ್ನಾರ್ಥಕವಾಗಿ ಅವನನ್ನೇ ನೋಡಿದಳು. ಅವನು ಗಮನಿಸದವನಂತೆ ತನ್ನ ಪಾಡಿಗೆ ತಾನು ಹೊರಟ.

"ರಮಾ, ಇವನು ಮನೇಲಿಲ್ಲದೇ ಎಷ್ಟು ಬೇಜಾರಾಗ್ತಿದೆ ಗೊತ್ತಾ? ಯಾವಾಗ ಬರ್ತಿದೀಯ?" ಅಂತ ಕೇಳಿದ.

"ಯಾಕೋ ತುಂಬಾ ಬೇಜಾರು ಶ್ರೀಕಾಂತ.... ಅಮ್ಮನಿಗೆ ಹುಶಾರಿಲ್ಲ. ಇನ್ನು ಒಂದೆರಡು ದಿನ ಇಲ್ಲಿರಬೇಕಾಗಬಹುದು"

"ಸರಿ. ಹಾಗಾದ್ರೆ ನಾನು ವಿಶೂನ ಕರೆದುಕೊಂಡು ಹೋಗ್ಲಾ?"

"ಅವನು ನನ್ನನ್ನು ಬಿಟ್ಟು ಇರೊಲ್ಲ.... ನನಗೂ ಅವನನ್ನು ಬಿಟ್ಟು ಇರೊಕ್ಕೆ ಆಗೊಲ್ಲ. ಏನು ಮಾಡಲಿ?"

"ನನಗೂ ಅವನನ್ನು ನೋಡದೇ ಇದ್ದರೆ ಸಮಾಧಾನವಿರುವುದಿಲ್ಲ.. ನಾನೇ ಬಂದು ಮಾತನಾಡಿಸಿಕೊಂಡು ಹೋಗ್ತೀನಿ"

"ನಿನ್ನನ್ನ ಒಂದು ವಿಷಯ ಕೇಳಬೇಕೂಂತ ಅಂದುಕೊಂಡಿದ್ದೆ. ಅತ್ತೆ ಎದುರಿಗೆ ಹೇಗೆ ಕೇಳೋದು ಅಂತ ಸುಮ್ಮನಿದ್ದೆ"

"ಏನು ವಿಷಯ? ಎನ್ನುತ್ತಾ ವಿಶೂನ ಎತ್ತಿಕೊಂಡು ಮುದ್ದಾಡಿದ ಶ್ರೀಕಾಂತ. ರಮಾ ಅವನನ್ನೇ ನೋಡಿ ಮುಗುಳ್ನಗೆ ಬೀರಿದಳು"

"ಏನು ವಿಷಯ ಬೇಗ ಹೇಳು. ನಂದಿನ್ನು ಊಟ ಆಗಿಲ್ಲ"

"ವಿಷಯ ಸ್ವಲ್ಪ ದೊಡ್ಡದೇ. ಇನ್ನೊಂದು ದಿನ ಹೇಳ್ತೀನಿ ಬಿಡು"

"ಪರವಾಗಿಲ್ಲ ಹೇಳು. ನನ್ನಿಂದ ಏನಾದರೂ ಸಹಾಯವಾಗಬೇಕಾಗಿದ್ದರೆ ನಿಸ್ಸಂಕೋಚವಾಗಿ ಹೇಳು"

"ನಿನಗಲ್ಲದೇ ಇನ್ಯಾರಿಗೆ ಹೇಳಲಿ ಶ್ರೀಕಾಂತ? ಹೇಳ್ತೀನಿ"

"ಹಾಗಾದರೆ ಬೇಗ ಹೇಳು" ಎನ್ನುತ್ತಾ ಅಲ್ಲಿದ್ದ ಕಲ್ಲು ಬೆಂಚಿನ ಮೇಲೆ ಕೂತ. ವಿಶೂನ ತೊಡೆಯ ಮೇಲೆ ಕೂರಿಸಿಕೊಂಡ.

"ರೂಪ, ನಿನ್ನ ಅಂಗಡಿಗೆ ಬಂದಿದ್ದಳಂತೆ. ನಿನ್ನ ಹತ್ತಿರ ಮಾತನಾಡಿದಳಂತೆ"

"ಯಾವ ವಿಷಯ? ನನಗೆ ನೆನಪಿಲ್ಲ" ಅಂತಂದ.

"ನನ್ನ ಹತ್ತಿರವೂ ಗುಟ್ಟಾ? ಅವಳು ಅವಳ ಗಂಡನಿಂದ ಡೈವೋರ್ಸ್ ತೆಗೆದುಕೊಂಡಿದಾಳಂತೆ. ನೀನು ಒಪ್ಪಿದರೆ ನಿನ್ನನ್ನ ಮದುವೆಯಾಗುವುದಾಗಿ ಹೇಳಿದಳು. ನೀನೇನಂದೆ?"

"ಅದನ್ನೆಲ್ಲಾ ನಿನ್ನ ಹತ್ತಿರ ಏಕೆ ಹೇಳಿದಳು?"

"ನಾನು ನಿನ್ನನ್ನು ಒಪ್ಪಿಸಬೇಕು ಎನ್ನುವ ತರಹ ಮಾತನಾಡಿದಳು"

"ನೀನು ಏನು ಹೇಳಿದೆ?"

"ಅದು ಅವನ ಸ್ವಂತ ವಿಷಯ. ನಾನು ಹೇಳೊಕ್ಕಾಗೊಲ್ಲ ಅಂತಂದೆ"

"ಒಳ್ಳೆ ಕೆಲಸ ಮಾಡಿದೆ....."

"ನೀನ್ಯಾಕೆ ಇನ್ನು ಮದುವೆಯಾಗಿಲ್ಲ ಅಂತ ಕೇಳಿದಳು...... "

"ನಾನ್ಸೆನ್ಸ್. ಅವಳಿಗೇಕೆ ಅದೆಲ್ಲ? ಮತ್ತೆ ನಿನ್ನ ಹತ್ತಿರ ಮಾತನಾಡಿದರೆ, ನನ್ನ ಹತ್ತಿರ ಕಳಿಸು, ನಾನು ಸರಿಯಾಗಿ ಹೇಳ್ತೀನಿ"

"ಅದಕ್ಯಾಕೆ ಅಷ್ಟು ಎಕ್ಸೈಟ್ ಆಗ್ತೀಯಾ..... ಈ ವಿಷಯದಲ್ಲಿ ನಿನ್ನನ್ನು ಯಾರೂ ಬಲವಂತ ಮಾಡುವುದಿಲ್ಲ"

"ಓ.ಕೇ. ರಮಾ. ಅಮ್ಮ ಕಾಯ್ತಾ ಇರ್ತಾಳೆ ನಾನು ಹೋಗ್ತೀನಿ" ಎನ್ನುತ್ತಾ ವಿಶೂನ ಅವಳ ಕೈಗೊಪ್ಪಿಸಿದ. ವಿಶ್ವಾಸನಿಗೆ ಮುದ್ದಿಟ್ಟು, ಕೈಯಾಡಿಸುತ್ತಾ ಹೋದವನನ್ನೇ ರಮ ನೋಡುತ್ತಾ ನಿಂತಳು.

*    *    *    *

ಊಟ ಮಾಡುತ್ತಿದ್ದವನು ಇದ್ದಕ್ಕಿದ್ದಂತೆ ತಾಯಿಗೆ ಹೇಳಿದ.

"ಅಮ್ಮಾ.... ರಮಂಗೆ ಮತ್ತೆ ಮದುವೆ ಮಾಡೋಣ"

"ಆ..... ಏನಂದೆ? ಏನಿದು ತಮಾಷೆ?"

"ತಮಾಷೆ ಅಲ್ಲಮ್ಮ ನಿಜಾನೇ ಹೇಳ್ತಿದೀನಿ. ಅವಳಿಗೆ ಇನ್ನೂ ಚಿಕ್ಕ ವಯಸ್ಸು. ಅವಳು ಜೀವಮಾನವೆಲ್ಲಾ ಹೀಗೇ ಇರುವುದು ಸರಿಯಾ?"

"ಸರಿಯೋ, ತಪ್ಪೋ, ನಿನಗೇಕೆ? ಅವಳು ಪಡೆದು ಬಂದದ್ದು.... ಅದು ಅವಳ ಹಣೇ ಬರಹ"

"ಅಮ್ಮ ಹೆಣ್ಣಾಗಿ, ನೀನು ಹೀಗೆ ಹೇಳೋದು ಸರಿಯಲ್ಲ. ಅವಳು ಮುದುಕಿಯಲ್ಲ, ವಿರಾಗಿನಿಯಂತೆ ಇರೋಕೆ......"

"ವಿರಾಗಿನಿಯಂತೆ ಇರದಿದ್ದರೆ, ಇನ್ನು ಹೇಗೆ ಇರ್ತಾಳಂತೆ? ನಮ್ಮ ಮನೆಗೆ ಮಸಿ ಬಳಿಯುವಂಥ ಕೆಲಸ ಮಾಡಿಯಾಳು ಜೋಕೆ!"

"ಛೇ, ಅವಳು ಅಂತಹವಳು ಅಂತ ಅನ್ನಿಸುತ್ತಾ?"

"ಯಾಕಿರಬಾರದು? ಪ್ರಕಾಶನ್ನ ಬುಟ್ಟಿಗೆ ಹಾಕಿಕೊಂಡದ್ದು ಹಾಗೇ ತಾನೇ..... ಅವಳನ್ನು ಹೇಗೆ ನಂಬೋದು?"

"ಆ ಹಳೇ ಸಿಟ್ಟಿಗೆ ಅವಳನ್ನು ದೂಷಿಸಬೇಡ. ಅವಳು ವಿಧವೆಯ ಬಾಳನ್ನು ಯಾಕೆ ಬಾಳಬೇಕು ಅಂತ ನಾನು ಕೇಳಿದೆ"

"ಸಧ್ಯ ಮಾರಾಯ.... ಅವಳೆದುರಿಗೆ ಈ ಮಾತನ್ನು ಎತ್ತಬೇಡ"

"ಯಾಕಮ್ಮ, ತಪ್ಪೇನು? ವಿಧವೆಯರ ಪಾಡು ಎಷ್ಟು ಕಷ್ಟ ಅಂತ ನೀನೇ ಹೇಳ್ತಿದ್ದೆ..... " ಸೀತತ್ತೆಯ ಕಷ್ಟಗಳನ್ನು ಮರೆತು ಬಿಟ್ಯಾ?

"ಅಂತ ಕಷ್ಟ ಇವಳಿಗೇನಿದೆ? ಒಂದು ಮಗು ಇದೆ. ಕಾಲ ಕಳೆಯೋಕೆ ಅಂತ ಕೆಲಸಕ್ಕೆ ಹೋಗ್ತಾಳೆ. ಎರಡು ಹೊತ್ತು ಊಟ ಮಾಡ್ತಾಳೆ. ಇನ್ನೇನು ಬೇಕು?"

"ಯಾಕಮ್ಮ. ಪ್ರಕಾಶನಿಲ್ಲದ ಕೊರತೆಗಿಂತ ಇನ್ನೇನು ಬೇಕು?"

"ಹಾಗಂತ, ಅವನ ಬದಲಿಗೆ ಇನ್ನೊಬ್ಬ ಗಂಡನ್ನ ತರೋಕೆ ಆಗುತ್ತಾ? ಚೆನ್ನಾಗಿದೆ. ನನ್ನ ಎದುರಿಗೆ ಆಡಿದ್ದಕ್ಕೆ ಸರಿಹೋಯ್ತು. ಇನ್ನಾರ ಎದುರಿಗಾದರ ಆಡೀಯ...... "

"ಇದರಲ್ಲಿ ಯಾವ ತಪ್ಪೂ ಇಲ್ಲ. ಅವಳು ಒಂಟಿಯಾಗಿ ಯಾಕೆ ಇರಬೇಕು ಅಂತ....... ಅವಳಿಗೆ ಆಸೆ ಇದ್ದರೆ ಅವಳಿಗೆ ಮತ್ತೆ ಮದುವೆ

ಮಾಡೋಣ.... ನೀನೇನು ಬೇಡ ಅನ್ನಬೇಡ"

"ಅವಳ ಪರವಾಗಿ ಎಷ್ಟು ಮಾತನಾಡ್ತೀದೀಯ. ಅವಳೇ ನಿನಗೆ ಹೇಳಿರಬೇಕು. ಇಲ್ಲದಿದ್ದರೆ ನಿನಗೆ ತಿಳಿಯುವುದು ಹೇಗೆ?"

"ಸುಮ್ಮನೇ ಅವಳನ್ನು ಅನ್ನಬೇಡಮ್ಮ. ಅವಳು ಪ್ರಕಾಶನ್ನ ಪ್ರೀತಿಸಿದ್ದೇ ತಪ್ಪೇ ಹಾಗಾದರೆ..... ಕೆಲಸಕ್ಕೆ ಸೇರುವುದು ಬೇಡ ಅಂತ ಎಷ್ಟು ಗಲಾಟೆ ಮಾಡಿದೆ ನೀನು"

"ಆಗಲೂ ನೀನು ಅವಳಿಗೋಸ್ಕರ ನನ್ನ ಜತೆ ಕಾದಾಡಿದೆ. ಹೋಗಲಿ ಪ್ರಕಾಶನ ಕಂಪನಿಯವರೇ ಕೆಲಸ ಕೊಟ್ಟಿದ್ದಾರಲ್ಲ. ಹೋಗಿ ಬರಲಿ, ಬೇಜಾರು ಕಳೆಯುತ್ತೆ ಅಂತ ಸುಮ್ಮನಾದೆ. ಈಗ ನೋಡಿದರೆ ಈ ಸಂಧಾನ...... ಸಾಕು. ಸುಮ್ಮನೆ ಊಟ ಮಾಡು. ಅವಳ ಪಾಡಿಗೆ ಅವಳು ಹಾಯಾಗಿದಾಳೆ. ಅವಳ ತಲೆಗೆ ಏನೇನೋ ತುಂಬಬೇಡ. ಮತ್ತೆ ಮತ್ತೆ ನನ್ನನ್ನು ಕೆಟ್ಟವಳನ್ನಾಗಿ ಮಾಡಬೇಡ"

ಶ್ರೀಕಾಂತನ ಊಟ ಮುಗಿದಿತ್ತು. ಆದರೆ ಅವನು ತನ್ನ ಮನಸ್ಸಿಗೆ ಅನ್ನಿಸಿದ್ದನ್ನು ಕಾರ್ಯಗತ ಮಾಡುವ ಆಲೋಚನೆ ಮಾಡಿದ್ದ.

ಅವನು ಎದ್ದು ಹೋದರೂ, ಪಾರ್ವತಿಯ ಆಲೋಚನೆ ಮುಂದುವರೆದಿತ್ತು. ಇವನೆಂತಹವನು? ತಾನು ಮದುವೆಯಾಗಲು ಒಪ್ಪುತ್ತಿಲ್ಲ. ಅವಳಿಗೆ ಮತ್ತೆ ಮದುವೆ ಮಾಡುವ ಆಸೆ.... ಇದ್ದಕ್ಕಿದ್ದಂತೆ ಇವನೇನಾದರೂ ಅವಳನ್ನೆ ಮದುವೆಯಾಗುವ ಮನಸ್ಸು ಮಾಡಿರಬಹುದೇ ಅಂತ ಅನ್ನಿಸಿದಾಗ ಬೆವತು ಹೋದಳು. ಇವರಿಬ್ಬರಲ್ಲಿ ಅಗತ್ಯಕ್ಕಿಂತ ಹೆಚ್ಚಿನ ಸಲುಗೆ ಇದೆ. ಒಂದೆರಡು ಸಾರಿ ತನಗೆ ಅವರಿಬ್ಬರ ಮಾತುಕತೆ ಸರಿಹೋಗದಿದ್ದರೂ, ತನಗೆ ಎರಡೂ ಇಂಥ ಅನುಮಾನ ಬಂದಿರಲಿಲ್ಲ. ಹಾಗೇನಾದರೂ ಶ್ರೀಕಾಂತನ ಮನಸ್ಸಿನಲ್ಲಿ ಆಸೆ ಇದ್ದರೆ ತಾನು ಅದನ್ನು ನಡೆಯಲು ಖಂಡಿತ ಬಿಡಬಾರದು. ಅವಳಿಗೇನಾದರೂ ಮತ್ತೆ ಮದುವೆಯಾಗುವ ಆಸೆ ಇದ್ದರೆ, ಶ್ರಿಕಾಂತನ ಜತೆ ಮಾತ್ರ ಮದುವೆ ನೆರವೇರಬಾರದು. ಬೇರೆ ಯಾರನ್ನೇ ಆದರೂ ನಾನು ಸಹಿಸಬಲ್ಲೆ. ಈ ಶ್ರೀಕಾಂತ ಬ್ರಹ್ಮಚಾರಿಯಾಗಿದ್ದರೂ ಪರವಾಗಿಲ್ಲ. ಅವಳನ್ನು ಮಾತ್ರ ಮದುವೆಯಾಗಬಾರದು. ನಾನಾ ಆಲೋಚನೆಗಳಿಂದ ಅವಳಿಗೆ ಊಟ ಸೇರಲಿಲ್ಲ. ನಿದ್ದೆ ಬರಲಿಲ್ಲ ಸೀತತ್ತೆ ಎಷ್ಟು ಪವಿತ್ರವಾಗಿದ್ದರು. ಅವರಿಗೆ ಇವಳನ್ನು ಹೋಲಿಸಿದನಲ್ಲ. ಅವರೆಲ್ಲಿ, ಇವಳೆಲ್ಲಿ! ಅಂತಂದುಕೊಂಡಾಗ ಆಕೆಯನ್ನು ನೆನೆದು, ನಿಟ್ಟುಸಿರುಬಿಟ್ಟಳು.

*　　　*　　　*　　　*

ಸೀತತ್ತೆ ಪಾರ್ವತಿಯ ಸೋದರತ್ತೆ. ಒಂಭತ್ತು ವರ್ಷದವಳಾಗಿದ್ದಾಗ, ಕುಂಟೆಬಿಲ್ಲೆ ಆಟ ಆಡುತ್ತಿದ್ದವಳನ್ನು ಎಳೆತಂದು, ಹಸೆಯಮಣೆ ಮೇಲೆ ಕೂರಿಸಿ ತಾಳಿ ಕಟ್ಟಿಸಿದ್ದರಂತೆ. ಮದುವೆ ಎಂದರೇನು ಅಂತ ಅರಿಯದ ಹುಡುಗಿ ಕೋಪ ಮಾಡಿಕೊಂಡು, ಗಂಡನ ಮುಖ ಸಹ ಸರಿಯಾಗಿ ನೋಡಿರಲಿಲ್ಲವಂತೆ. ಅಷ್ಟೆ ಆಮೇಲೆ ಸಿಕ್ಕಿದ್ದು ವೈಧ್ಯವ್ಯದ ಪಟ್ಟ. ಸಂಪ್ರದಾಯಸ್ಥರ ಮನೆಯಲ್ಲಿ ವಿಧವೆ ಹೆಂಗಸು ಸಕೇಶಿಯಾಗಿರುವುದು ಸಲ್ಲದು ಎಂಬ ಅಗ್ರಹದ ಮೇರೆಗೆ, ಸೀತತ್ತೆ ಹದಿನೆಂಟು ವರ್ಷದವಳಾಗಿದ್ದಾಗ, ಕೇಶ ಮುಂಡನ ಮಾಡಿಸಿ ಕೆಂಪು ಸೀರೆಯನ್ನು ಉಡಿಸಿ, ಮಡಿ ಹೆಂಗಸು ಎಂದು ಅಗ್ರಹಾರದವರಿಗೆಲ್ಲ ಸಾರಿದ್ದಾಯಿತು. ನೀಳ ಜಡೆಯನ್ನು ನೆನೆಸಿಕೊಂಡು ಸೀತತ್ತೆ ಅಳುತ್ತಿದ್ದುದನ್ನು ಪಾರ್ವತಿ ಸಹ ನೋಡಿದ್ದಳು. ತನಗೆ ಕೊಟ್ಟ ಒಡವೆಗಳನ್ನೆಲ್ಲ ಪಾರ್ವತಿಯ ತಾಯಿಯ ಕೈಗೆ ಕೊಟ್ಟು ನಂಗಂತೂ ಈ ಒಡವೆಗಳನ್ನು ಧರಿಸುವ ಭಾಗ್ಯವನ್ನು ಭಗವಂತ ಕೊಡಲಿಲ್ಲ. ಇದನ್ನೆಲ್ಲಾ ಅಳಿಸಿ, ನಿನಗೆ ಬೇಕಾದ ಒಡವೆಗಳನ್ನು ಮಾಡಿಸಿ ಹಾಕ್ಕೋ ಎಂದಿದ್ದರು. ಅದರಲ್ಲಿ ಕೆಲವು ಒಡವೆಗಳನ್ನು ಪಾರ್ವತಿ ಈಗಲೂ ಧರಿಸುತ್ತಾಳೆ. ಏಕೋ ಮನಸ್ಸಿಗೆ ಮುಜುಗರವೆನಿಸಿತು.

"ಸೀತತ್ತೆಗೆ ಬಾರದ ಕೆಲಸವಿಲ್ಲ. ಕೆಲಸ ಮಾಡಲು ಬೇಸರವಿಲ್ಲ. ಬಾಳೆನಾರನ್ನು ಸೀಳಿ ಉಂಡೆ ಸುತ್ತಿಟ್ಟುಕೊಂಡು, ಅದರಲ್ಲೇ ಹೂ ಕಟ್ಟುವುದು, ಹೂಬತ್ತಿ, ಗೆಜ್ಜೆವಸ್ತ್ರಗಳನ್ನು ಮಾಡುವವರು ಅವರೇ. ಕ್ರೋಶಾ ಹೆಣೆಗೆ ಕಲಿತು, ಮಕ್ಕಳ ಲಂಗಗಳಿಗೆ ಲೇಸ್ ಹಾಕಿಕೊಡುವುದು, ಚೀಲಗಳಿಗೆ ಕಸೂತಿ ಹಾಕುವುದು...... ಕೆಲವೊಮ್ಮೆ ಖುಷಿಯಿದ್ದಾಗ ಪಗಡೆ ಆಡುತ್ತಿದ್ದರು. ಪಗಡೆ ಹಾಸನ್ನು ಚೂರು ಬಟ್ಟೆಗಳನ್ನು ಸೇರಿಸಿ ಕೇಳಿದವರಿಗೆಲ್ಲ ಹೊಲಿದು ಕೊಟ್ಟಿದ್ದರು. ಹಳೆಯ ಸೀರೆಗಳನ್ನು ಹರಿದು, ಮಕ್ಕಳಿಗೆ ಲಂಗವನ್ನು ಕೈ ಹೊಲಿಗೆಯಲ್ಲಿ ಹೊಲಿದು ಹಾಕುವುದು, ಇದೆಲ್ಲ ಕುಶಲತೆಯ ಕೆಲಸವಾದರೆ ಅಡಿಗೆ ಮನೆಯ ಕೆಲಸವೆಲ್ಲಾ ಅವರಿಗೆ ಸಲೀಸು. ಹಬ್ಬಗಳಲ್ಲಿ ಎಷ್ಟೇ ಕಷ್ಟವಾದರೂ ಸರಿ, ಆಯಾ ಹಬ್ಬಕ್ಕೆ ಅದೇ ಕಡ್ಡಾಯವಾಗಿ ಮಾಡಬೇಕಾದ ತಿಂಡಿ ತಿನಿಸುಗಳು..... ಹಬ್ಬ ಬಂತೆಂದರೆ, ಅದರಲ್ಲೂ ಗೋಕುಲಾಷ್ಟಮಿ ಬಂತೆಂದರೆ, ಡಬ್ಬ ಡಬ್ಬಗಳಲ್ಲಿ ಕರಿದ ತಿಂಡಿಗಳನ್ನು ಮಾಡಿ ಮುಚ್ಚಿಡುತ್ತಿದ್ದರು. ಯಾರಿಗೂ ಕಾಣದಂತೆ ಮಕ್ಕಳ ಕೈಗೆ ಕುರುಕಲು ತಿಂಡಿಗಳನ್ನು ಕೊಡುತ್ತಿದ್ದುದು, ಮಡಿಯಲ್ಲಿ ಭತ್ತವನ್ನು ಬಿಸಿ ನೀರಿನಲ್ಲಿ

ಕುದಿಸಿ ಅವಲಕ್ಕಿ ಕುಟ್ಟುವುದು, ಭತ್ತದ ಅರಳು ಹುರಿಯುವುದು, ಕಾಲಕಾಲದಲ್ಲಿ ಅರಳು ಸಂಡಿಗೆ ಇಡುವುದು, ಹುರುಳಿ ನೆನೆಸಿ, ಮೊಳಕೆ ಬರಿಸಿ, ಒಣಗಿಸಿ, ಬೀಸಿ, ಹಿಟ್ಟು ಮಾಡಿ, ಕಲಸಿ ಹಪ್ಪಳ ಮಾಡುವುದು– ಇವೆಲ್ಲ ಅವರ ಕೆಲಸವೇ. ಇದನ್ನೆಲ್ಲಾ ಪಾರ್ವತಿ ಆಗಾಗ್ಗೆ ನೆನೆಸಿಕೊಂಡು ಮಕ್ಕಳಿಗೆ ಹೇಳುತ್ತಿದ್ದಳು"

ಇವುಗಳ ಮಧ್ಯೆ ನೆನೆಸಿಕೊಳ್ಳಲು ಇಷ್ಟವಾಗದ ಘೋರ ವಿಷಯವೆಂದರೆ ಸೀತತ್ತೆಯ ಸಿಡಿಮಿಡಿ. ಅದಕ್ಕೆ ಕಾರಣ ಆ ಹಜಾಮ. ಎರಡು ತಿಂಗಳಿಗೊಮ್ಮೆ ಆ ಹಜಾಮ ಬಂದು ಹೋದ ದಿನ, ತನ್ನ ಮುಖವನ್ನೂ ತನ್ನ ಮಡಿ ಸೀರೆಗಿಂತ ಕೆಂಪು ಮಾಡಿಕೊಂಡು, ಉರಿ ಉರಿ ಎಂದು ಸಿಡುಕುವುದು. ತನ್ನನ್ನು ತಾನೇ ಹಳಿದುಕೊಂಡು ಅಳುವುದು..... ಆ ದಿನ ಮನೆಯವರಿಗೆಲ್ಲಾ ಬೇಸರವೇ......

ಮದುವೆಯಾಗಿ ಮಕ್ಕಳಾದ ಮೇಲೆ ಪಾರ್ವತಿಗೆ ಆ ನೋವು ಅರ್ಥವಾಗುತ್ತಿತ್ತು. ಗಂಡನ ಸಂಗಡ ಒಂದು ದಿನ ಜೀವನ ಮಾಡದವರು, ಆ ಕ್ಷೌರಿಕನ ಮುಂದೆ ತಲೆ ಕೊಟ್ಟು ಕುಳಿತಿರಬೇಕಾದ ಪರಿಸ್ಥಿತಿಗಿಂತ ಇನ್ನು ಹೇಯವಾದ ಸ್ಥಿತಿ ಯಾರಿಗೂ ಇರಲಾರದು ಅಂತನ್ನಿಸುತ್ತಿತ್ತು. ಕೊಟ್ಟಗೆಯಲ್ಲೋ ಮರದ ಕೆಳಗೋ, ಹಜಾಮನ ಮುಂದೆ ಮೈಯನ್ನೆಲ್ಲಾ ಮುದುರಿಕೆಂಡು ಕೂತಿದ್ದರೂ, ಊರ ಜನರೆದುರು ಮಾನ ಹೋದಂತೆ ಅಂತ ಅನ್ನಿಸುತ್ತಿತ್ತೋ ಏನೋ. ಆ ದಿನದ ಅವರ ತೊಳಲಾಟ ಅವರಿಗೇ ಗೊತ್ತು..... ಅಷ್ಟು ಹಿಂಸೆ.... ಇದನ್ನೆಲ್ಲಾ ಪಾರ್ವತಿಯ ತಾಯಿ ಗಮನಿಸುತ್ತಿದ್ದರು. ಅತ್ತಿಗೆ ನಾದಿನಿಗೆ ಎಷ್ಟೇ ಮನಸ್ತಾಪವಿದ್ದರೂ ಆ ದಿನ ಮಾತ್ರ, ಬಚ್ಚಲಲ್ಲಿ ಕೂರಿಸಿ ನೀರು ಹುಯ್ಯುವಾಗ ಆಕೆಗೆ ಅಳು ಬರುವಂತಾಗುತ್ತಿತ್ತು. ಯಾವ ಹೆಣ್ಣಿಗೂ ಇಂಥಾ ಶಿಕ್ಷೆಯನ್ನು ಕೊಡಬೇಡಪ್ಪಾ ಭಗವಂತ ಎಂದು ದೇವರಲ್ಲಿ ಬೇಡುತ್ತಿದ್ದಳು. ಇಂಥ ಕಷ್ಟವನ್ನು ಕಂಡೋ ಏನೋ ಮದುವೆಯಾದ ಹೆಣ್ಣುಮಕ್ಕಳು ಮುತ್ತೈದೆ ಭಾಗ್ಯ ಚಿರವಾಗಿರಲಿ ಎಂದು ಪ್ರಾರ್ಥಿಸುತ್ತಿದ್ದುದು. ಈ ವಿಷಯಗಳಲ್ಲಿ ಕೆಲವನ್ನು ಪಾರ್ವತಿಯ ತಾಯಿ ಹೇಳಿದ್ದರೂ ಈ ದಿನ ನೆನಪಿಗೆ ಬಂದಾಗ ಅತಿ ದುಃಖವಾಗಿತ್ತು.

ಈಗ ಕೆಲ ಎಷ್ಟೋ ಬದಲಾಗಿದೆ. ವಿಧವೆ ಹೆಂಡಸರು ಹಿಂದಿನಂತೆ ಬಾಗಿಲ ಹಿಂದೆಯೇ ನಿಂತಿರಬೇಕಿಲ್ಲ. ಎದುರಿಗೆ ಬಂದರೆ ಅಪಶಕುನ ಎಂದು ಜನರು ಬೈಯುವಂತಿಲ್ಲ..... ಕುಂಕುಮ ಇಟ್ಟುಕೊಳ್ಳುತ್ತಾರೆ. ಬಳೆ ತೊಡುತ್ತಾರೆ. ಬಣ್ಣ ಬಣ್ಣದ ಸೀರೆಗಳನ್ನು ಉಡುತ್ತಾರೆ. ಎಲ್ಲರೊಂದಿಗೆ ಬೆರೆಯುತ್ತಾರೆ.

ಒಪ್ಪತ್ತಿನ ಊಟದ ನಿಯಮವಿಲ್ಲ. ಮನಸ್ಸಿಗೆ ಬೇಕಾದಂತೆ ತಿನ್ನುತ್ತಾರೆ. ಯಾವ ಕಟ್ಟುಪಾಡುಗಳಿಲ್ಲ. ಕೆಲಸಕ್ಕೆ ಹೋಗುತ್ತಾರೆ. ಅವಕಾಶ ಸಿಕ್ಕರೆ ಮತ್ತೆ ಮದುವೆಯಾಗುತ್ತಾರೆ. ಇದೆಲ್ಲ ನನಗೂ ತಿಳಿಯದ್ದೇನಲ್ಲ. ಆದರೂ, ಪ್ರಕಾಶ ಇಲ್ಲವೆಂದ ಮಾತ್ರಕ್ಕೆ ಅವನ ಹೆಂಡತಿ, ಇನ್ನೊಬ್ಬನ ಹೆಂಡತಿಯಾಗುವುದನ್ನು ತಾನು ನೋಡಬೇಕೆ? ವಿಶೂ ಇನ್ಯಾರನ್ನೋ ಅಪ್ಪಾ ಅಂತ ಕರೆಯುವುದನ್ನು ನಾನು ಸಹಿಸಬೇಕೆ? ಸೀತತ್ತೆಯ ಪಾಡಿಗೆ ತಾನು ಮರುಗಿದ್ದುಂಟು, ಆದರೆ ರಮಳಿಗೆ ಅಂತಹ ಯಾವ ಕಷ್ಟವೂ ಇಲ್ಲವಲ್ಲ. ಯಾವ ಕೊರತೆಯೂ ಇಲ್ಲ. ಅಲ್ಲದೆ ಅವಳು ಪ್ರಕಾಶನ್ನ ಪ್ರೀತಿಸಿ ಮದುವೆಯಾದವಳು, ಅವನನ್ನು ಸುಲಭವಾಗಿ ಮರೆಯಲು ಸಾಧ್ಯವೇ? ಇದೆಲ್ಲ ಶ್ರೀಕಾಂತನದೇ ಕಿತಾಪತಿ..... ಅವಳಿಗೆ ಕಷ್ಟ ಹಾಗೆ ಹೀಗೆ ಅಂತ ಇವನೇ ಅವಳಿಗೆ ಹೇಳಿಕೊಡುತ್ತಾನೆ. ಇವನೇ ಅವಳಿಗೆ ಆಸೆ ಹುಟ್ಟಿಸಿರಬಹುದು. ಅವಳ ಮೇಲಿನ ಮರುಕದಿಂದ ತಾನೇ ಮದುವೆಯಾಗುವ ಆಸೆ ಹೊಂದಿರಬಹುದು. ನಾನು ಇದಕ್ಕೆ ಮಾತ್ರ ಒಪ್ಪಬಾರದು.... ಒಂದು ವೇಳೆ ಆಗಲೇಬೇಕಿದ್ದರೆ ಅವಳು ಬೇರೆ ಯಾರನ್ನಾದರೂ ಮದುವೆಯಾಗಿ ಈ ಮನೆಯಿಂದ ಹೊರಗೆ ಹೋಗಲಿ. ಶ್ರೀಕಾಂತನ ಹೆಂಡತಿಯಾಗಿ ಇಲ್ಲೇ ಉಳಿಯುವುದು ಮಾತ್ರ ಬೇಡ ಎಂದು ಮತ್ತೆ ಮತ್ತೆ ತಾನೇ ಹೇಳಿಕೊಂಡಳು. ಗಂಡನ ಮೇಲೆ ಕೋಪ ಬಂದಿತ್ತು. ಪುಣ್ಯಾತ್ಮರು, ಯಾವ ವಿಷಯಕ್ಕೂ ತಲೆಹಾಕುವುದಿಲ್ಲ. ಮಗ ಸೊಸೆ ಕಡೆ ಒಂದು ದಿನ ಅನುಮಾನದ ದೃಷ್ಟಿ ಸಹ ಹಾಕಿಲ್ಲ. ಎಲ್ಲಾ ಕಾಷ್ಠವ್ಯಸನವೂ ನನಗೇ ತಾನೇ ಎಂದು ತನ್ನನ್ನು ತಾನೇ ಹಳಿದುಕೊಂಡಳು. ಈ ಕಾರಣದಿಂದ ರಮಾ ತಾಯಿಯ ಮನೆಯಲ್ಲೇ ಎಷ್ಟು ದಿನ ಬೇಕಾದರೂ ಇರಲಿ ತನಗೆ ಒಳ್ಳೆಯದೇ ಎಂದುಕೊಂಡಿದ್ದಳು.

ಇದನ್ನೆಲ್ಲ ಅರಿಯದ ರಮ, ಮತ್ತೊಮ್ಮೆ ಶ್ರೀಕಾಂತ, ವಿಶ್ವಾಸನನ್ನು ಮಾತನಾಡಿಸಲೆಂದು ಹೋದಾಗ, ತನ್ನ ಆಸೆಯನ್ನು ಹೊರಗೆಡಹಿದ್ದಳು.

"ಶ್ರೀಕಾಂತ, ನನ್ನನ್ನು ಮದುವೆಯಾಗ್ತೀಯ" ಎಂದು ನೇರವಾಗಿ ಕೇಳಿದ್ದಳು ತಕ್ಷಣಕ್ಕೆ. ಇವನು ತತ್ತರಿಸಿಹೋಗಿದ್ದ. ಅವಳು ಇಂಥದೊಂದು ಪ್ರಶ್ನೆಯನ್ನು ಕೇಳಬಹುದು ಎಂದು ಅವನು ನಿರೀಕ್ಷಿಸಿರಲಿಲ್ಲ.

"ಹಿಂದೊಮ್ಮೆ ನೀನು ನನ್ನನ್ನು ಪ್ರೀತಿಸಿದ್ದೆ. ಅದೇ ಕಾರಣದಿಂದಲೋ ಏನೋ ನೀನು ಈಗಲೂ ಮದುವೆಯಾಗಿಲ್ಲ ಅಲ್ವಾ? ನಾನು ಸಾಕಷ್ಟು ಯೋಚಿಸಿ ಈ ತೀರ್ಮಾನಕ್ಕೆ ಬಂದಿದಿನಿ. ವಿಶೂ ಅಪ್ಪನಿಲ್ಲದೆ ಬೆಳೆಯುವುದು

ನನಗಿಷ್ಟವಿಲ್ಲ. ಈ ಮನೆಯಿಂದ ಹೊರಗೆ ಹೋಗಲೂ ನನಗಿಷ್ಟವಿಲ್ಲ"

ಶ್ರೀಕಾಂತ ಅವಳಿಗೆ ಬೆನ್ನು ಮಾಡಿ ನಿಂತಿದ್ದ. ಅವಳ ಮಾತುಗಳು ಅವನಿಗೆ ಸರಿ ಎನಿಸಲಿಲ್ಲ. ಆದರೆ ತನ್ನ ಭಾವನೆಗಳನ್ನು ಅವಳಿಗೆ ತೋರಲಾರ.

"ನೀನು ಬೇರೆ ಯಾರನ್ನು ಪ್ರೀತಿಸಿಲ್ಲ ಅಂತ ನನಗೆ ಗೊತ್ತು. ನೀನು ರೂಪನ್ನ ಸಹ ನಿರಾಕರಿಸಿದೆ. ಆದ್ದರಿಂದ ನನಗೂ ಧೈರ್ಯ ಬಂತು. ಯಾಕೆ ಶ್ರೀಕಾಂತ ನೀನು ಏನೂ ಹೇಳುತ್ತಿಲ್ಲ ಮಾತಾಡು...ಪ್ಲೀಸ್."

"ನಿನ್ನ ಮಾತಿನಿಂದ ನನಗೆ ದಃಖವಾಗ್ತಿದೆ ರಮಾ. ನಾನೆಂದೂ ನಿನ್ನನ್ನು ಪ್ರೀತಿಸಲೇ ಇಲ್ಲ. ಹಾಗಿದ್ದಿದ್ದರೆ ನಾನು ನಿಮ್ಮಿಬ್ಬರ ಮದುವೆಗೆ ಪ್ರಯತ್ನ ಮಾಡುತ್ತಿದ್ದೆನಾ? ನೀನು ಯಾವಾಗಲೂ ನನ್ನ ಆಪ್ತ ಸ್ನೇಹಿತೆಯೇ. ಅದೇ ಕಾರಣದಿಂದಲೇ ನಾನು ಈಗಲೂ ಸಲುಗೆಯಿಂದಿರುವುದು. ಅತ್ತಿಗೆ ತಾಯಿಗೆ ಸಮಾನ. ನಾನು ಇಂಥ ವಿಷಯಾನ ಮನಸ್ಸಿನಲ್ಲಿ ಯೋಚಿಸುವುದೂ ಮಹಾಪಾಪ. ನಿನಗೇಕೆ ಈ ದುರ್ಬುದ್ಧಿ ಬಂತೋ ತಿಳಿಯದು. ನಂಗೆ ಗೊತ್ತು ನಿನಗೆ ಮರುಮದುವೆಯಾಗುವ ಆಸೆ ಇದೆ. ಅದೇ ವಿಷಯವನ್ನು ನಿನ್ನ ಹತ್ತಿರ ಮಾತನಾಡಬೇಕೆಂದುಕೊಂಡಿದ್ದೆ. ನಿನ್ನ ಆಸೆ ತಪ್ಪಲ್ಲ. ನಿನಗೆ ಹೊಂದಿಕೆಯಾಗುವಂತಹವನನ್ನು ನಾನು ಹುಡುಕ್ತೀನಿ. ವಿಶೂ ಬಗ್ಗೆ ನಿನಗೆ ಆತಂಕ ಬೇಡ. ನಾನು ಅವನ ಚಿಕ್ಕಪ್ಪನಾದರೂ, ಅಪ್ಪನ ಪ್ರೀತಿ ತೋರಿಸಿ ಅವನನ್ನು ಬೆಳೆಸ್ತೀನಿ. ಇವತ್ತೇ ಕಡೆ, ಇನ್ನೆಂದೂ ನನ್ನ ಬಗ್ಗೆ ಇಂತಹ ಭಾವನೆಗಳನ್ನಿಟ್ಟು ಕೊಳ್ಳಬೇಡ "

ರಮಾ ಅಳಲು ಪ್ರಾರಂಭಿಸಿದಳು. ಅವಳಿಗೆ ಏನು ಸಮಾಧಾನ ಹೇಳಬೇಕೋ ಅವನಿಗೆ ತಿಳಿಯದಾಯಿತು. ತಾನೇ ಸಮಾಧಾನ ಮಾಡಿಕೊಳ್ಳುತ್ತಾಳೆ ಎಂದು ಕೊಂಡು, ವಿಶ್ವನನ್ನು ಎತ್ತಿಕೊಂಡು ತನ್ನ ಮನೆಗೆ ಬಂದ.

ಮಗನ ವಿಮನಸ್ಕತೆಯನ್ನು ತಾಯಿ ಗಮನಿಸಿದಳು. ಈಗ ಹೋಗಿ ವಿಶೂನ ಬೇರೆ ಎತ್ತಿಕೊಂಡು ಬಂದಿದಾನೆ. ಮಗುವಿನ ಮುಖ ನೋಡಿದರೆ, ನನ್ನ ಕರುಳೂ ಕುಯ್ದ ಹಾಗೆ ಆಗುತ್ತೆ. ಆದರೆ ಹಾಗಂತ ನಮ್ಮ ನಮ್ಮ ಜೀವನಾನೂ ಹಾಳು ಮಾಡಿಕೊಳ್ಳಕ್ಕೆ ಆಗುತ್ತಾ? ಈ ಮಗುವಿಗೆ ಅಪ್ಪನ ಸ್ಥಾನ ಕೊಡುವುದಕ್ಕಾಗಿ ಶ್ರೀಕಾಂತ ಮದುವೆಯಾಗದೆ ಇರಲಾರ. ಮೊದಲಿಂದ ಅವಳ ಮೇಲೆ ಸ್ನೇಹ ಅನುಕಂಪ ಎಲ್ಲಾ ಅತಿ ಅತಿ. ಆದಷ್ಟು ಬೇಗ ಒಂದು ಇತ್ಯರ್ಥ ಮಾಡಿಯೇ ಬಿಡಬೇಕು ಎಂದುಕೊಂಡು,

"ಈ ನಡುವೆ ನೀನ್ಯಾಕೋ, ಮೊದಲಿನಂತಿಲ್ಲ ಅಂತನ್ನಿಸುತ್ತೆ. ನಿನ್ನ ಕಷ್ಟ

ಏನೂಂತ ನಮ್ಮ ಕೈಲಿ ಹೇಳಿಕೊಳ್ಳಬಾರದೇ" ಎಂದು ಕೇಳಿದಳು.

"ಕಷ್ಟ ಏನಿಲ್ಲ. ಇದ್ದರೂ ಅದು ನಿನ್ನ ಕೈಲಿ ಹೇಳುವಂಥದ್ದಲ್ಲ"

"ಸರಿ. ನಿನಗಿಷ್ಟವಿಲ್ಲದಿದ್ದರೆ ಹೇಳಬೇಡ. ಅದಕ್ಕೆ ಮತ್ತೆ ಹೆಂಡತಿ ಬೇಕೂ ಅನ್ನೋದು. ನಿನ್ನ ಕಷ್ಟ ಸುಖಗಳಲ್ಲಿ ಭಾಗಿಯಾಗ್ತಾಳೆ"

"ಸರಿ. ಸರಿ. ಮತ್ತೆ ಬಂದೆಯಾ ನನ್ನ ಮದುವೆಯ ಮಾತಿಗೆ. ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು"

"ಹಾಗಂದ್ರೆ ಹೇಗಾಗುತ್ತೋ...... ನಿನ್ನ ಜವಾಬ್ದಾರಿಯೂ ನಮ್ಮದೇ ತಾನೇ. ನೀನು ಸಂಸಾರಸ್ಥನಾದರೆ ನಮಗೂ ನೆಮ್ಮದಿ. ನಮಗೂ ವಯಸ್ಸಾಗಲಿಲ್ಲವೇ?"

"ಅಪ್ಪ ಸುಮ್ಮನೇ ಇಲ್ಲವೆ? ಹಾಗೇ ನೀನೂ ಏಕೆ ಸುಮ್ಮನಿರಬಾರದು? ಪದೆ ಪದೇ ಕೇಳಿ ಬೇಜಾರು ಮಾಡ್ತೀಯಾ?"

"ಹೌದು. ನಾನು ಕೇಳಿದರೆ ನಿನಗೆ ಬೇಜಾರು. ಅದೇ ಆ ಮಾಯಾಂಗನೆ ಕೈಲಿ ಅದೆಷ್ಟೆಷ್ಟು ಮಾತನಾಡ್ತೀಯ..... ಅದಕ್ಕೆ ಬೇಜಾರಿಲ್ಲ" ತಾಯಿ ಹಂಗಿಸಿದಳು.

"ಮಾಯಾಂಗನೆ? ಯಾರಮ್ಮಾ ಅವಳು?" ಅವನಿಗೆ ಏನೂ ಅರ್ಥವಾಗಲಿಲ್ಲ.

"ಅದೇ.... ಇವನ ತಾಯಿ! " ಎನ್ನುತ್ತಾ ವಿಶೂನ ಕಡೆ ಕೈ ಮಾಡಿದಳು. ಶ್ರೀಕಾಂತನಿಗೆ ರೇಗಿತು.

"ಏನಮ್ಮಾ ಹೀಗೆಲ್ಲಾ ಮಾತಾಡ್ತೀಯಾ? ಅವಳಿಗೆ ನಾವಲ್ಲದೇ ಇನ್ಯಾರಿದಾರೆ? ಅವಳ ಕಷ್ಟ ಸುಖ ನಮ್ಮದೇ ಅಲ್ಲವೆ? ಪ್ರಕಾಶ ಇದ್ದಿದ್ದರೆ ಅವಳು ನನ್ನನ್ನು ಯಾವುದಕ್ಕೂ ಕರೆಯುತ್ತಿರಲಿಲ್ಲ. ಅವಳ ತಮ್ಮನೂ ಈ ಊರಿನಲ್ಲಿಲ್ಲ. ಅವಳಿಗೆ ಸಹಾಯಕರು ಯಾರಿದಾರೆ?" ನಮ್ಮ ಹತ್ತಿರ ಅಲ್ಲದೇ ಇನ್ನಾರ ಹತ್ತಿರ ಮಾತಾಡ್ತಾಳೆ.

"ಸಹಾಯ ಮಾಡ್ತೀನಿ ಅಂತ ಅವಳಿಗೆ ಅತಿ ಸಲುಗೆ ಕೊಡಬೇಡ. ಜನ ಅಪಾರ್ಥ ಕಲ್ಪಿಸುತ್ತಾರೆ" ತಾಯಿಯ ಮಾತು ಯಾವ ದಿಕ್ಕಿನಲ್ಲಿದೆ ಎಂದು ಈಗ ಅವನಿಗೆ ಅರ್ಥವಾಗಿತ್ತು.

"ಯಾರು ಏನಾದರೂ ಅನ್ನಲಿ. ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು" ಎಂದ ಒರಟಾಗಿ. ಪಾರ್ವತಿ ಹೆದರಿದಳು. ಈ ಮಗನೂ ತನ್ನನ್ನು ದೂರ ಮಾಡಿದರೆ, ತಮಗೆ ಕಡೆಗಾಲದಲ್ಲಿ ಗತಿಯಾರು ಎಂದುಕೊಂಡು ಆದಷ್ಟು ಸಮಾಧಾನವಾಗಿ ಹೇಳಿದಳು.

"ಮನಸ್ನಲ್ಲಿ ಏನೇನೋ ಕೆಟ್ಟ ಆಲೋಚನೆಗಳು ಬರುತ್ತವೆ ಕಣೋ.... ನೀನು ಹೇಳಿದೆಯಲ್ಲಾ ಹಾಗೇ...... ಯಾರಾದರೂ ಅವಳಿಗೆ ಸರಿ ಹೊಂದುವಂಥ

ವರ ಇದ್ದರೆ, ಆದಷ್ಟು ಬೇಗ ಅವಳಿಗೆ ಮದುವೆ ಮಾಡಿ ಕಳಿಸೋಣ. ಆದರೆ ಈ ವಿಶೂ ನಮ್ಮ ಮನೆಯಲ್ಲೇ ಇರಬೇಕು. ಇವನು ನಮ್ಮ ಪ್ರಕಾಶನ ಮಗ...... " ಪಾರ್ವತಿಯ ಕಣ್ಣಲ್ಲಿ ನೀರಾಡಿದಾಗ ಅವನು ಪೆಚ್ಚಾದ.

"ಸುಮ್ಮನೇ ಯಾರ್ಯಾರೋ ಏನೇನೋ ಆಡ್ತಾರೆ ಅಂತ ಊಹಿಸಿಕೊಂಡು ಕೊರಗಬೇಡ. ನಮ್ಮ ಕಷ್ಟಕ್ಕೆ ನಾವು ನಾವೇ. ರಮಂಗೆ ಮದುವೆ ಮಾಡಿ ಕಳಿಸೋಣ ಅಂತಂದಾಗ ಅವತ್ತೆಲ್ಲ ಏನೇನೋ ಆಡಿದೆ....... "

"ಹೌದು, ಆದರೆ ಆಮೇಲೆ ನಾನೂ ಯೋಚಿಸಿದೆ. ರಮಾ ಇನ್ನೂ ಚಿಕ್ಕವಳು. ಅಲ್ಲದೇ ಈಗಿನ ಕಾಲದಲ್ಲಿ ಆದರ್ಶ ಅದೂ ಇದು ಅಂತ ಹೊಸ ಹುರುಪಿನ ಉತ್ಸಾಹದ ತರುಣರು, ರಮನಂತಹವಳನ್ನು ಮದುವೆಯಾಗಲು ಮುಂದೆ ಬರುತ್ತಾರೆ. ಆ ಅವಕಾಶವನ್ನು ಉಪಯೋಗಿಸಿ ಕೊಳ್ಳೋಣ" ಏನು ನಮ್ಮ ಸೀತತ್ತೆಯ ಕಾಲ ಕೆಟ್ಟು ಹೋಯಿತೇ..... ಸಹಜ ರೂಪವನ್ನು ವಿರೂಪಗೊಳಿಸಿ, ಕಾಮುಕ ಗಂಡಸರ ಕಣ್ಣಿಂದ ದೂರ ಮಾಡಿದರೂ, ಎಂತೆಂಥದೋ ಅನರ್ಥಗಳು ನಡೆಯುತ್ತಿರಲಿಲ್ಲವೇ..... ಆ ಕಾಲದಲ್ಲೂ ಹೀಗೇ ಮರುಮದುವೆಗೆ ಅವಕಾಶವಿದ್ದಿದ್ದರೆ, ಸೀತತ್ತೆ ಎಷ್ಟು ಸುಖವಾಗಿ ಸಂಸಾರ ಮಾಡುತ್ತಿದ್ದರೋ, ಅವರಿಗಿದ್ದ ಆಸಕ್ತಿ, ಸಂಭ್ರಮ, ಉತ್ಸಾಹ ಈ ಕಾಲದಲ್ಲಿ ಯಾರಿಗೂ ಇಲ್ಲ. ಅವರಿಗೆ ಚಿಕ್ಕ ಮಕ್ಕಳು ಎಂದರೆ ಇಷ್ಟ. ಯಾರ್ಯಾರಿಗೋ ಬಾಣಂತನ ಮಾಡೋಕ್ಕೆ ಅಂತ ಹೋಗೋರು. ಅದನ್ನೆಲ್ಲ ನೆನೆಸಿಕೊಂಡರೆ, ಅವರ ಮನಃಸ್ಥಿತಿ ಹೇಗಿರಬಹುದು. ಅಂತ ಯೋಚಿಸುವುದಕ್ಕೇ ಬೇಜಾರಾಗುತ್ತೆ ತಾಯಿ ನಿಟ್ಟುಸಿರು ಬಿಟ್ಟಾಗ ಅವನು ನುಡಿದ.

"ಆಗಲಮ್ಮಾ.....ನೀನು ರಮಳಿಗೆ ಮದುವೆ ಮತ್ತೆ ಮಾಡುವುದು ಬೇಡ ಅಂತ ಹೇಳಿದ್ದರೂ, ನಾನು ಸುಮ್ಮನಿರುತ್ತಿರಲಿಲ್ಲ." ಈಗ ನಿನಗೇ ಒಪ್ಪಿಗೆ ಅಂದ ಮೇಲೆ ನಮ್ಮ ಕೆಲಸ ಸುಲಭ. ಪೇಪರಿನಲ್ಲಿ ವರ ಬೇಕಾಗಿದ್ದಾನೆ ಅಂತ ಪ್ರಕಟಣೆ ಹಾಕಿಸೋಣ. ಯಾರಾದ್ರೂ ಸಿಕ್ಕೇ ಸಿಗುತ್ತಾರೆ. ನಾನು ರಮಳಿಗೂ ಹೇಳಿದೀನಿ.

"ಇಷ್ಟು ಹೇಳಿದ ಮೇಲೆ ನನಗೂ ಸಮಾಧಾನವಾಯಿತು" ಎನ್ನುತ್ತಾ ಪಾರ್ವತಿ ವಿಶೂನ ಎತ್ತಿಕೊಂಡು ಮುದ್ದಾಡಿದಳು.

ಶ್ರೀಕಾಂತ ರಮಳ ಮಾತನ್ನೇ ಮೆಲಕು ಹಾಕುತ್ತಿದ್ದ. ಈ ಹೆಂಗಸರೆಲ್ಲಾ

ಹೆಚ್ಚು ಕಡಿಮೆ ಒಂದೇ ತರಹ.... ಸಲುಗೆ, ಸ್ನೇಹ ಇದ್ದ ಮಾತ್ರಕ್ಕೆ ಅದಕ್ಕೆ ಬೇರೆ ಅರ್ಥಾನೇ ಕಲ್ಪಿಸಿ ಬಿಡುವುದೇ? ಏನಾದರಾಗಲೀ ರಮಾ ಮದುವೆಯಾಗಿ ಸುಖವಾಗಿದ್ದರೆ ಸಾಕು ಎಂದುಕೊಂಡ.

"ಬೇಗ ಊಟ ಬಡಿಸು. ನಾನು ಪೇಪರ್ ಆಫೀಸಿಗೆ ಹೋಗಿ ಬರ್ತೀನಿ" ಎನ್ನುತ್ತಾ ಊಟಕ್ಕೆ ಕೂತ. ಪಾರ್ವತಿ ಮೊಮ್ಮಗನನ್ನು ತನ್ನ ಗಂಡನ ಕೈಗೆ ಕೊಟ್ಟು, "ಹಾಗೇ ತಟ್ತಾ ಇರಿ. ನಿದ್ದೆ ಮಾಡುತ್ತೆ ಮಗು" ಎಂದು ಹೇಳಿ, ಕೆಲಸ ಒಪ್ಪಿಸಿ ಬಂದಳು. ಊಟ ಮಾಡುತ್ತಾ ಏನು ಪ್ರಕಟಣೆ ಕೊಡಬೇಕು ಅಂತ ಯೋಚಿಸುತ್ತಿದ್ದ ಶ್ರೀಕಾಂತ.

ವಯಸ್ಸು, ಓದು, ಕೆಲಸ, ರೂಪದ ವಿವರಗಳ ಜತೆಗೆ ಒಂದು ಮಗು ಇದೆ ಅಂತ ಕೊಡಬೇಕೇ ಬೇಡವೇ..... ಕೊಟ್ಟರೆ.... ಆ ಮಗುವನ್ನು ಸಾಕಲು ಒಪ್ಪದಿರಬಹುದು. ಆದರೆ ಮಗುವನ್ನು ಬಿಟ್ಟು ಹೋಗಲು ರಮ ಒಪ್ಪದೇ ಇರಬಹುದು. ತಿಳಿಸಿದರೂ ಕಷ್ಟ, ತಿಳಿಸದಿದ್ದರೂ ಕಷ್ಟ. ಹೇಗಾದರಾಗಲಿ, ಮಹೇಶನನ್ನು ಸಲಹೆ ಕೇಳುವುದು ಸರಿ ಎಂದುಕೊಂಡ. ಊಟ ಮುಗಿಸಿ ಕೈ ತೊಳೆದು ಸಿದ್ಧನಾಗಿ ಸೀದಾ ಮಹೇಶನ ಮನೆಗೆ ಬಂದ.

ಸ್ಟುಡಿಯೋಗೆ ಸಂಬಂಧಿಸಿದ ಏನೋ ಕೆಲಸ ಮಾಡುತ್ತಿದ್ದ ಮಹೇಶ ಎಲ್ಲವನ್ನು ತೆಗೆದಿಟ್ಟು ಗೆಳೆಯನ ಎದುರಿಗೆ ಕೂತ. ಏನನ್ನೋ ಮಾತನಾಡಲು ಬಂದಿದ್ದಾನೆ ಎಂದು ಊಹಿಸಿದ್ದ. ಶ್ರೀಕಾಂತ ತನ್ನ ಆಲೋಚನೆಯನ್ನು ತಿಳಿಸಿ, ಸಲಹೆಯನ್ನು ಕೇಳಿದ. ಮಹೇಶ ಒಂದು ಗಳಿಗೆ ಆಲೋಚಿಸಿ, ನಿಧಾನವಾಗಿ ನುಡಿದ.

"ಈಗೇನೋ ವಿಶೂ ಚಿಕ್ಕವನು. ಅವನ ಹೊಸ ತಂದೆಗೆ ಸುಲಭವಾಗಿ ಹೊಂದಿಕೊಳ್ಳಬಲ್ಲ. ಆದರೆ ಅಂತಹ ತಂದೆ ಸಿಗಬೇಕಲ್ಲ"

"ಅದಕ್ಕೇ ಅವನನ್ನು ನಮ್ಮ ಜತೇಲೇ ಇಟ್ಟುಕೊಂಡರೇ....."

"ಅದಕ್ಕೆ ನಿಮ್ಮ ಅತ್ತಿಗೆ ಒಪ್ಪಬೇಕು..... ಎಷ್ಟಾಗಲೀ ತಾಯಿ. ಒಂದು ವೇಳೆ ನಿಮ್ಮ ಬಳಿಯೇ ಬಿಟ್ಟು ಹೋದರೂ ವಯಸ್ಸಾದ ನಿಮ್ಮ ತಾಯಿಗೆ ಕಷ್ಟವಾಗಬಹುದು..... ನಿನಗೂ ಸುಲಭವಲ್ಲ"

"ಅವನನ್ನು ನೋಡಿಕೊಳ್ಳಲು ಕೆಲಸದವರನ್ನು ಇಟ್ಟುಕೊಂಡರೆ....."

"ಆದರೆ ಬೆಳೀತಾ ಬೆಳೀತಾ.... ಆ ಮಗುವಿನ ಮನಸ್ಸಿನಲ್ಲಿ ಏನೇನು ಪರಿಣಾಮಗಳು ಮೂಡುತ್ತವೋ..... ಈಗ ವಸುಧಾ ಇಲ್ಲವೇ...... ಹಾಗೇ ನೀವೆಲ್ಲಾ ಸೇರಿ ಅವನಿಗೆ ಅನ್ಯಾಯ ಮಾಡಿದೀರಿ ಅಂತ ಅನ್ನಿಸಿದರೇ"

"ವಸುಧಾ..... ಬೆಳೆದು ಅರೆ ತಿಳುವಳಿಕೆಯವಳಾಗಿದ್ದಳು. ವಿಶೂ ತುಂಬಾ ಚಿಕ್ಕವನು. ಅವನನ್ನು ನಾನು ನನ್ನ ಸ್ವಂತ ಮಗನಂತೇ ಬೆಳೆಸ್ತೀನಿ. ಅವನಿಗೆ ಯಾವ ಕಷ್ಟ ಬರದ ಹಾಗೆ ನೋಡಿ ಕೊಳ್ತೀನಿ...."

"ಅವನಿಗೋಸ್ಕರ ನೀನು ಜೀವಮಾನವೆಲ್ಲಾ ಹೀಗೆ ಇರೋಕೆ ಆಗುತ್ತಾ..... ತನ್ನ ತಾಯಿಯಿಂದ ದೂರ ಮಾಡಿದೆ ಅಂತ ನಿನ್ನ ಮೇಲೆ ಆರೋಪ ಹೊರಿಸಿದರೆ....."

"ಅದಕ್ಕೆ ನನಗೀಗ ಏನು ಮಾಡಬೇಕೂಂತ ಗೊತ್ತಾಗ್ತಾ ಇಲ್ಲ. ನಿನ್ನ ಸಲಹೆ ಕೇಳ್ತಿದೀನಿ"

"ಮೊದಲು, ಎಲ್ಲಾ ವಿವರಗಳನ್ನು ಕೊಟ್ಟು ಪೇಪರಿನಲ್ಲಿ ಪ್ರಕಟಣೆ ಕೊಡು. ರಮಳಿಗೆ ಒಪ್ಪಿಗೆಯಾದವನನ್ನು ಮದುವೆ ಯಾಗಲಿ. ಆಗ ಯಾವುದೇ ಸಮಸ್ಯೆ ಎದುರಾದರೂ, ಅದನ್ನು ಬಗೆಹರಿಸುವುದಕ್ಕೆ ಸಿದ್ಧರಾಗಿರಬೇಕು. ವಿಶೂನ ಆ ಹೊಸತಂದೆ, ಮಗನಂತೆ ಸಾಕ್ತೀನಿ ಅಂತಂದರೆ ನೀವು ಅವನನ್ನು ಬಿಟ್ಟುಕೊಡಲು ಸಿದ್ಧರಾಗಿರಬೇಕು. ಇಲ್ಲವಾದರೆ, ನೀನೇ ಸಾಕಿ ಬೆಳೆಸ್ತೀನಿ ಅನ್ನೊದಾದ್ರೇ ಅವನಿಗೆ ಸರಿಯಾಗಿ ತಾಯಿಯಾಗು ವಂಥವಳನ್ನು ನೀನು ಮದುವೆಯಾಗ ಬೇಕು"

"ಇಲ್ಲಿ ನನ್ನ ಮದುವೆ ಪ್ರಶ್ನೆ ಎಲ್ಲಿಂದ ಬಂತು? ನೀನೊಳ್ಳೆ... ಚೆನ್ನಾಯ್ತು."

"ಮತ್ತೆ? ವಿಶೂಗೆ ತಾಯಿ ಬೇಡವಾ? ದೊಡ್ಡೋನಾದ ಮೇಲೆ ಅಮ್ಮ ಎಲ್ಲಿ ಅಂತ ಕೇಳಿದರೆ ಏನು ಹೇಳ್ತೀಯಾ?"

"ನಿನ್ನನ್ನು ಸಲಹೆ ಕೇಳಿದ್ದೇ ತಪ್ಪಾಯ್ತು. ನನಗೆ ಮದುವೆಯಾಗುವ ಆಸೇನೇ ಇಲ್ಲ"

"ನೀನು ಪ್ರಕಾಶನ ದುರಂತವನ್ನೇ ಮನಸ್ಸಿನಲ್ಲಿಟ್ಟುಕೊಂಡು ಕೊರಗ್ತಾ ಇದೀಯ. ಎಷ್ಟು ವರ್ಷ ಹೀಗೇ ಒಂಟಿಯಾಗಿರ್ತೀಯಾ? ಪ್ರಕಾಶನ ಹೆಂಡತಿಯೇ ಮರುಮದುವೆಯಾಗಲು ಸಿದ್ಧರಾಗಿರುವಾಗ ನಿನಗೇಕೆ ಇನ್ನು ಕೊರಗು? ರಮಂಗೆ ಕಷ್ಟ ಬಂತು ಅಂತ ಕೊರಗೋ ದಿನಗಳು ಹೋದ ಮೇಲಾದರೂ ನೀನು ಮದುವೆಯಾದರೆ, ನಿನ್ನ ತಾಯಿಗೆ ಸಂತೋಷವಾಗೊಲ್ಲವಾ? ಈ ವಯಸ್ನಲ್ಲಿ ಅವರು ಬಯಸುವುದು ಇದನ್ನೇ ತಾನೇ......"

"ಇದೆಲ್ಲಾ ನಿನಗೆ ಹೇಗೆ ಗೊತ್ತು?" ಅಮ್ಮ ಹೇಳಿದಳಾ?

"ನಿಮ್ಮ ತಾಯಿ ನನಗೆ ಎಷ್ಟೋ ಸಲ ಹೇಳಿದಾರೆ, ನಿನ್ನನ್ನು ಮದುವೆಯಾಗಲು ಒಪ್ಪಿಸುವಂತೆ. ನನಗೆ ನಿನ್ನ ಸ್ನೇಹ ಮುಖ್ಯ. ಆದ್ದರಿಂದ

ಈ ವಿಷಯದಲ್ಲಿ ನಾನು ಬಲವಂತ ಮಾಡಲಾರೆ"

"ಥ್ಯಾಂಕ್ಸ್ ಕಣಯ್ಯಾ. ನೀನೇ ನಿಜವಾದ ಸ್ನೇಹಿತ. ಆದರೆ ಸಲಹೆ ಕೊಡಯ್ಯ ಅಂತಂದರೆ, ತಲೆಗೆ ವಿಪರೀತ ಕೆಲಸ ಹಚ್ಚಿದೆಯಲ್ಲ"

"ಬರೀ, ಊಟ ತಿಂಡಿ, ತಿರುಗಾಟ, ಅದೂ ಇದು ಜೀವನವಲ್ಲ. ಬೇರೆಯವರ ಭಾವನೆಗಳಿಗೂ ಬೆಲೆ ಕೊಡಬೇಕು. ನಿಮ್ಮ ತಾಯಿ ಹೇಳುವುದರಲ್ಲಿ ತಪ್ಪೇನಿಲ್ಲ, ಆದಷ್ಟು ಬೇಗ ಮದುವೆಯಾಗು. ನಿನ್ನ ಹೆಂಡತಿಗೆ ವಿಶೂ ಹೊಂದಿಕೊಳ್ಳುತ್ತಾನೆ. ಆಗ ರಮ ಒಂದುವೇಳೆ, ವಿಶೂನ ನಿಮ್ಮ ಜತೆ ಬಿಟ್ಟು ಹೋದರೆ ಯಾರಿಗೂ ಕಷ್ಟವೆನಿಸುವುದಿಲ್ಲ.... ಅಥವಾ ನಿಮಗೇ ಒಂದು ಮಗುವಾಗಿ ಬಿಟ್ಟರೆ ನಿಮ್ಮ ತಾಯಿ ಹೊಸ ಮೊಮ್ಮಗನ ಆರೈಕೆಯಲ್ಲಿ ಹಳೆಯ ನೋವನ್ನೆಲ್ಲ ಮರೆಯಲು ಸಹಾಯಕವಾಗುತ್ತೆ"

" ಸಾಕು ಸಾಕು, ನನ್ನ ಮೇಲಿನ ಅಭಿಮಾನ ಜಾಸ್ತಿಯಾಯಿತು ನಿನಗೆ.... ಹೆಂಡತಿ, ಮಗು ಎಲ್ಲರನ್ನು ಕರೆಸ್ತಾ ಇದೀಯಲ್ಲ" ಶ್ರೀಕಾಂತ ತಡೆದ.

"ಈಗ ನಾನು ಇರುವ ದಾರಿ ಅದೇ ಅಲ್ಲವಾ? ಅದೇ ದಾರಿಗೆ ನಿನ್ನನ್ನು ಎಳೆಯುವ ಆಸೆ" ಮಹೇಶ ನಕ್ಕಾಗ, ಶ್ರೀಕಾಂತ ನಕ್ಕಂತೆ ಮಾಡಿದ.

ಸ್ನೇಹಿತನ ಸಲಹೆ ಸೂಕ್ತವಾಗಿ ಕಾಣಲಿಲ್ಲ. ಆದರೆ ತಕ್ಷಣವೇ ಅಲ್ಲಗಳೆಯುವಂತಿಲ್ಲ. "ಮೊದಲು ಪೇಪರಿಗೆ ಮಾಹಿತಿ ಕೊಟ್ಟುಬಿಡ್ತೀನಿ. ನಂತರ ಯೋಚಿಸಿದರಾಯ್ತು"

"ಏನಯ್ಯಾ ಹೇಗಿದಾಳೆ ನಿಮ್ಮ ರಾಯರ ಮಗಳು? ಎಲ್ಲೀವರೆಗೆ ಬಂತು ಅವರಿಬ್ಬರ ಸಂಧಾನ?"

"ಆಗಾಗ್ಗೆ ಅವರಿಬ್ಬರನ್ನು ಮಾತನಾಡಿಸಿ ಬರ್ತೀನಿ.... ಅಪ್ಪ ಮಗಳನ್ನು ನೋಡಿ ಕರೆತರಲು ಸಿದ್ಧರಿಲ್ಲ. ಅಪ್ಪ ಕರೆದರೂ ಮಗಳು ಹೋಗಲು ಸಿದ್ಧಳಿಲ್ಲ. ಇಂಥಾ ತಂದೆ ಮಗಳನ್ನು ನಾನು ಎಲ್ಲಿಯೂ ನೋಡಿಲ್ಲ, ಕೇಳಿಲ್ಲ."

"ಅಪರೂಪಕ್ಕೊಮ್ಮೆ ಇಂಥಾ ವಿಚಿತ್ರ ವ್ಯಕ್ತಿಗಳೂ ಸಿಗ್ತಾರೆ ಅಂತ ಗೊತ್ತಾಯ್ತಲ್ಲ" ಇಂಥೋರ ವಿಚಾರವನ್ನು ಪೇಪರಿನಲ್ಲಿ ಫೋಟೋ ಸಹಿತ ಬರೆಸಿ ಹಾಕಿಸಬೇಕು.

"ನೋಡೋಣ. ಕಾಲ ಬಂದಾಗ ಅದನ್ನು ಮಾಡಿದರಾಯ್ತು....... " ಎನ್ನುತ್ತಾ ನಾನು ಬರ್ತೀನಿ ಎಂದು ಎದ್ದ. ಅಲ್ಲಿಂದ ದಿನ ಪತ್ರಿಕೆಯ ಆಫೀಸಿಗೆ ಹೋಗಿ ರಮಳ ಸ್ವಂತ ವಿವರವನ್ನು ನೀಡಿ, ಪ್ರಕಟಣೆಗಾಗಿ

ಬರೆದುಕೊಟ್ಟ. ಅಲ್ಲಿಂದ ಸೀದಾ ನರ್ಸಿಂಗ್ ಹೋಂಗೆ ಬಂದ.

ಮಂಚದ ಮೇಲೆ ದಿಂಬಿಗೆ ಒರಗಿ ಕುಳಿತು, ಕಾಮಿಕ್ಸ್‌ಗಳ ಪುಟಗಳನ್ನು ತಿರುವಿ, ಖುಷಿಯಿಂದ ಓದುತ್ತಿದ್ದವಳನ್ನು ಕಂಡು, ಮುಗುಳ್ನಗೆ ಮೂಡಿತು. ಸದ್ದು ಮಾಡದೇ ಅವಳ ಬಳಿ ಹೋಗಿ ಅವಳನ್ನು ಹೆದರಿಸುವ ಮನಸ್ಸಾಯಿತು. ಆದರೆ ಅವಳು ಬೆಚ್ಚಿ ಕಿರುಚಿದರೆ ಅನುಚಿತವಾದೀತೆಂದು ಕೊಂಡು, "ಹಲೋ ವಸುಧಾ..... ಹೇಗಿದೀಯ?" ಕೇಳಿದ.

"ಓ ನೀವಾ? ನಾನು ಕಾಮಿಕ್ಸ್ ಓದುತ್ತಿದ್ದೆ ಗೂತ್ತಾಗಲೇ ಇಲ್ಲ" ಎಂದಳು.

"ಕಾಮಿಕ್ಸ್ ಎಂದರೆ ನಿನಗೆ ಅಷ್ಟು ಇಷ್ಟನಾ? ಬೇಕಾದರೆ ಇನ್ನೊಂದಿಷ್ಟು ತಂದುಕೊಡ್ತೀನಿ" ಎಂದ.

"ಬೇಡ..... ಇದನ್ನೇ ಓದ್ತೀನಿ ಸಾಕು. ಎಲ್ಲಾದಕ್ಕೂ ಕೊಡೋಕೆ ನನ್ನ ಹತ್ತಿರ ಹಣ ಎಲ್ಲಿದೆ?"

"ಹಣಕ್ಕಾಗಿ ನೀನು ಯೋಚಿಸಬೇಡ. ನಿಮ್ಮ ತಂದೆ ನಿನ್ನ ಖರ್ಚಿಗೆ ಅಂತ ಸಾಕಷ್ಟು ಹಣ ಕೊಟ್ಟಿದಾರೆ........ ಅಂತ ತಿಳಕೋ..... "

"ಇಲ್ಲ, ಅವರು ಇದಕ್ಕೆಲ್ಲ ಖರ್ಚು ಮಾಡುವುದಿಲ್ಲ. ನನಗೆ ಗೊತ್ತು. ನೀವೇ ಖರ್ಚು ಮಾಡಬೇಕು"

"ಮಾಡಿದರಾಯ್ತು ಎಷ್ಟು ಮಹಾ ಖರ್ಚಾಗುತ್ತೆ?"

"ನನಗಿಷ್ಟವಿಲ್ಲ ಶ್ರೀ..... ಮಾವ ಅಂತ ಎಂದೂ ನಮ್ಮ ಮನೆಗೆ ಬಂದಿರಲಿಲ್ಲ. ಈಗ ನನಗೋಸ್ಕರ ಯಾಕೆ ಖರ್ಚು ಮಾಡಬೇಕು?"

"ಯಾಕೆ ಏನಾಯ್ತು? ಏನೋ ಒಂದು ತರಹ ಮಾತನಾಡ್ತಿದೀಯಲ್ಲ. ನಿನಗೋಸ್ಕರ ಇಷ್ಟು ಖರ್ಚು ಮಾಡಿದರೆ ನಾನು ಬಡವನಾಗುವುದಿಲ್ಲ"

"ಇಲ್ಲ ಶ್ರೀ.... ಯಾಕೋ ನನ್ನ ಮನಸ್ಸು ಒಪ್ಪುವುದಿಲ್ಲ. ನನಗೋಸ್ಕರ ನಮ್ಮ ತಂದೆ ಖರ್ಚು ಮಾಡಬೇಕು. ಅದು ಅವರ ಕರ್ತವ್ಯ. ಈಗ ನನಗಾಗಿ ನೀವು ಮಾಡಿರುವ ಖರ್ಚನ್ನೆಲ್ಲಾ ನಾನು ನಿಮಗೆ ವಾಪಸ್ಸು ಕೊಡಿಸ್ತೀನಿ"

"ಕೊಡಿಸುವಂತೆ.... ಆತುರವೇನಿಲ್ಲ"

"ಇಲ್ಲ, ಆದಷ್ಟೂ ಬೇಗ ಕೊಡಿಸಲೇ ಬೇಕು....... " ಮೊಂಡುತನದಿಂದ ಅವಳು ತಲೆಯಾಡಿಸಿದಾಗ ಅವನು ಸುಮ್ಮನಾದ. ಇದ್ದಕ್ಕಿದ್ದಂತೆ ಅವಳು ಮತ್ತೆ ನುಡಿದಳು.

"ನಾನೇ ಯೋಚಿಸಿ ಒಂದು ತೀರ್ಮಾನಕ್ಕೆ ಬಂದಿದೀನಿ ಶ್ರೀ.... "

"ಏನದು ಎನ್ನುವಂತೆ ಅವಳ ಕಡೆ ನೋಡಿದ."

"ನಾನು ನನ್ನ ತಂದೆ ಮನೆಗೆ ಹೋಗ್ತೀನಿ. ಆದರೆ ಒಂದು ಕಂಡೀಷನ್ ಮೇಲೆ" ಅವಳ ನಿರ್ಧಾರ ಅವನಿಗೆ ಸಂತಸವನ್ನು ತಂದಿತು. ಜೊತೆಗೆ ಆತಂಕವನ್ನು ಉಂಟುಮಾಡಿತು.

"ನೀವು ಪ್ರಾಮಿಸ್ ಮಾಡಿದರೆ ನಾನು ಹೋಗ್ತೀನಿ. ಇಲ್ಲದಿದ್ದರೆ ನಾನು ಯಾರ ಕೈಗೂ ಸಿಗದಂತೆ ಓಡಿ ಹೋಗ್ತೀನಿ" ಇಲ್ಲಿಗೆ ಬರುವ ಮುಂಚೆ ಮಹೇಶನಾಡಿದ್ದ ಮಾತು ನೆನಪಾಗಿತ್ತು. ಈ ವಿಚಿತ್ರ ಹುಡುಗಿ ಏನೇನು ಮಾಡ್ತಾಳೋ ಎಂದುಕೊಂಡು,

"ಓ.ಕೆ. ಅದೇನು ನಿನ್ನ ಕಂಡೀಷನ್? ಬೇಗ ಹೇಳು." ಎಂದ.

"ಮೊದಲು ಪ್ರಾಮಿಸ್ ಮಾಡಿ" ಎನ್ನುತ್ತಾ ತನ್ನ ಹಸ್ತ ಚಾಚಿದಳು. ಅವನು ಅವಳ ಕಡೆ ನೋಡಿ ಮುಗುಳ್ನಕ್ಕ. ಅವಳೂ ಮಂದಹಾಸ ಬೀರಿದಳು. ಅವಳನ್ನು ಒಪ್ಪಿಸುವವನಂತೆ ಅವಳ ಹಸ್ತದ ಮೇಲೆ ತನ್ನ ಕೈಯನ್ನಿಟ್ಟು 'ಪ್ರಾಮಿಸ್' ಎಂದ.....

"ಥ್ಯಾಂಕ್ ಯೂ ಶ್ರೀ" ಎನ್ನುತ್ತಾ ಅವನೆಡೆಗೆ ಬಾಗಿ ಅವನ ಕೆನ್ನೆಗೆ ಮುತ್ತಿಟ್ಟಳು. ಶ್ರೀಕಾಂತ ಅನಿರೀಕ್ಷಿತ ಚುಂಬನದಿಂದ ಬೆವತು ಹೋದ. ಅವಳ ಕೈ ಬಿಟ್ಟು ಹಿಂದೆ ಸರಿದು ಅವಳನ್ನೇ ನೋಡಿದ. ಅವಳು ಕಿಲಕಿಲನೆ ನಕ್ಕಾಗ, ಅವನ ಮೈ ಬಿಸಿಯಾಯಿತು. ಈ ಹುಡುಗಿ ತಾನು ತಿಳಿದಂತೆ ಮುಗ್ಧೆ ಅಲ್ಲ ಎಂದುಕೊಂಡು, ತನ್ನ ಕೆನ್ನೆಯ ಮೇಲೆ ಕೈಯನ್ನಿಟ್ಟುಕೊಂಡು ಅತ್ತಿತ್ತ ನೋಡಿದ. ಸಧ್ಯ ಯಾರೂ ಇಲ್ಲವೆಂದು ಸಮಾಧಾನ ಗೊಂಡ.

ಅವಳು ಮತ್ತೆ ನಕ್ಕಳು. "ಯಾಕೆ ಶ್ರೀ ಹೆದರಿ ಬಿಟ್ರಾ?"

"ನೀನು ಬಲೇ ಘಾಟಿ ವಸುಧಾ..... ಯಾರಾದ್ರೂ ನೋಡಿದ್ರೇ....... "

"ಯಾರೂ ನೋಡಿಲ್ಲ. ಡೋಂಟ್ ವರಿ....." ಆದರೂ ಅವನು ಅವಳ ಬಗ್ಗೆಯೇ ಚಿಂತಿಸುತ್ತಿದ್ದ. ಇದ್ದಕ್ಕಿದ್ದಂತೆ ಈ ಹುಡುಗಿಗೇನಾಯ್ತು? ಹಾಸ್ಟೆಲ್ಲಿನಲ್ಲಿ ಫ್ರೀಯಾಗಿದ್ದವಳು, ಏನೇನೋ ದುರಭ್ಯಾಸಗಳನ್ನು ಬೆಳೆಸಿಕೊಂಡಿದ್ದವಳು. ಬಾಯ್ ಫ್ರೆಂಡ್ಸ್‌ಗಳ ಜತೆಯೂ ತಿರುಗಿರಬಹುದು ಅಂತಂದುಕೊಂಡಾಗ ಏನೋ ಒಂದು ರೀತಿಯ ಅಸಹ್ಯವುಂಟಾಯಿತು. ಆದರೆ ಅವಳ ನಿಷ್ಕಲ್ಮಷ ಮುಖ ನೋಡಿದಾಗ ಮನಸ್ಸು ಆ ಅಭಿಪ್ರಾಯವನ್ನು ತಿರಸ್ಕರಿಸಿತು. ಆದಷ್ಟು ಬೇಗ ಇವಳನ್ನು ಇವಳ ತಂದೆಯ ಮನೆಗೆ ತಲುಪಿಸಿ ಬಿಡುವುದು ಒಳ್ಳೆಯದು.

ಎಲ್ಲರಿಗೂ ಕ್ಷೇಮ. ಇಲ್ಲದಿದ್ದರೆ ಹೊಸ ಸಮಸ್ಯೆ ಶುರುವಾಗುತ್ತೆ ಎಂದುಕೊಂಡು, "ನಾನು ಡಾಕ್ಟರ ಹತ್ತಿರ ಮಾತನಾಡಿ ಬರ್ತೀನಿ. ಅವರು ಒಪ್ಪಿದರೆ ನಾನು ಈಗಲೆ ನಿಮ್ಮ ತಂದೆ ಮನೆ ನಿನ್ನನ್ನು ಕರೆದುಕೊಂಡು ಹೋಗಿಬಿಡ್ತೀನಿ" ಎಂದ.

"ಓ.ಕೇ..... ಆದರೆ ನನ್ನ ಕಂಡೀಷನ್ ಏನೂಂತ ನಾನಿನ್ನು ಹೇಳಿಲ್ಲವಲ್ಲ. ನೀವು ದಿನಾ ಬಂದು ನನ್ನನ್ನು ನೋಡಿ ಮಾತಾಡಿಸಿಕೊಂಡು ಹೋಗಬೇಕು. ಹಾಗಿದ್ರೆ ನಾನು ಇಲ್ಲಿಂದ ಅಲ್ಲಿಗೆ ಹೋಗ್ತೀನಿ"

ಶ್ರೀಕಾಂತ ಗೊಂದಲಕ್ಕೊಳಗಾದ. ಇದೆಂಥಾ ಕಂಡೀಷನ್? ಅವಳೇ ಮತ್ತೆ ನುಡಿದಳು.

"ನೀವು ಒಪ್ಪದಿದ್ದರೆ ನಾನು ಇಲ್ಲಿಂದ ಎಲ್ಲಿಗಾದ್ರೂ ಓಡಿಹೋಗ್ತೀನಿ. ನಿಮಗೆ ಕಷ್ಟವಾಗಬಾರದು ಅಂತ ನಾನು ಅಲ್ಲಿಗೆ ಹೋಗಲು ಒಪ್ಪಿಕೊಂಡಿರುವುದು. ಅಪ್ಪನ ಮೇಲಿನ ಪ್ರೀತಿಯಿಂದಲ್ಲ"

"ಏನೋ ಒಂದು. ಅಂತೂ ಇವಳು ತಂದೆಯ ಮನೆಗೆ ಹೋಗಲು ಒಪ್ಪಿಕೊಂಡಳಲ್ಲ ಅಂತ ಅನ್ನಿಸಿದರೂ, ನುಡಿದ" ದಿನಾ ನಾನೆಲ್ಲಿ ಬರೋಕೆ ಆಗುತ್ತೆ? ಅಂಗಡಿ ತೆಗೆಯದಿದ್ದರೆ ನನ್ನನ್ನೇ ನಂಬಿರುವ ರೋಗಿಗಳ ಗತಿ ಏನು? ನಗಲು ಪ್ರಯತ್ನಿಸಿದ.

"ಅದೆಲ್ಲಾ ನನಗೆ ಗೊತ್ತಿಲ್ಲ"

"ಹೀಗೆ ಹಠ ಮಾಡಿದರೆ ಹೇಗೆ? ಅಂಗಡಿ ಮುಚ್ಚಿದರೆ,.... ನನ್ನ ಗತಿ ಏನು? ನಾನು ಶ್ರೀಮಂತನಲ್ಲ ಕೂತು ತಿನ್ನೋಕೆ. ಒಂದು ಕೆಲಸ ಮಾಡು, ನಿನಗೆ ಆದಾಗ, ನೀನೇ ನಮ್ಮ ಅಂಗಡಿಗೆ ಬಂದುಬಿಡು..... ನಿನಗೂ ಹೊತ್ತು ಹೋಗುತ್ತೆ"

"ಓ.ಕೆ. ನಾಟ್ ಎ ಬ್ಯಾಡ್ ಐಡಿಯಾ..... " ಅಂತ ಅವಳು ಖುಷಿಯಿಂದ ಕುಣಿದಾಗ ಅವನ ಆತಂಕ ಹೆಚ್ಚಾಗಿತ್ತು. ಆದರೂ ಒಂದು ಸಾರಿ ಈಜಂಝಾಟ ಮುಗಿದರೆ ಸಾಕೆಂದುಕೊಂಡು ತಾನು ಡಾಕ್ಟರ ಹತ್ತಿರ ಮಾತನಾಡಿ ಬರುವುದಾಗಿ ಹೊರಟ.

ಅವಳು ತನ್ನ ತಂದೆಯ ಮನೆಗೆ ಹೊರಡುವ ಆಸೆಯನ್ನು ವ್ಯಕ್ತಪಡಿಸಿರುವುದನ್ನು ತಿಳಿಸಿದಾಗ ಡಾಕ್ಟರು ಸಹಾ ಸಂತಸಗೊಂಡರು.

"ಒಳ್ಳೇಯದೇ ಆಯ್ತು. ಮನೇಲೇ ಇದ್ದರೆ ಇನ್ನೂ ಬಹಳ ಬೇಗ ಬೇಗ ಸುಧಾರಿಸುತ್ತಾಳೆ. ಆದರೆ ಆದಷ್ಟು ಒಂಟಿಯಾಗಿರಬಾರದು. ಅವಳ

ಆಪ್ತರು ಆಗಾಗ್ಗೆ ಭೇಟಿಯಾಗುತ್ತಿದ್ದರೆ ಒಳ್ಳೆಯದು. ತಂದೆಯ ಜತೆ ಅವಳು ಸ್ನೇಹದಿಂದಿರುವಂತಹ ವಾತಾವರಣ ಇರಬೇಕು ಅದು ಮುಖ್ಯ"

"ನಾನು ಈ ವಿಷಯವನ್ನೆಲ್ಲ ಅವಳ ತಂದೆಯೊಡನೆ ಮಾತನಾಡಿ ಅವರೇ ಬಂದು ಕರೆದುಕೊಂಡು ಹೋಗುವ ಏರ್ಪಾಡು ಮಾಡುತ್ತೇನೆ. ಆಗ ಅವಳಿಗಿನ್ನು ಖುಷಿಯಾಗುತ್ತದೆ. ಹಾಗೆ ನಿಮಗೆ ನನ್ನ ಅನೇಕಾನೇಕ ಕೃತಜ್ಞತೆಗಳು. ನನ್ನ ಸ್ನೇಹಕ್ಕೆ ಬೆಲೆ ಕೊಟ್ಟು, ನನಗೂ ಪರಿಚಯವಿಲ್ಲದ ಹುಡುಗಿಗೆ ಶುಶ್ರೂಷೆ ಕೊಡಿಸಿ ಸಹಾಯ ಮಾಡಿದಿರಿ"

"ಇಂಥ ದಾರಿ ಬಿಟ್ಟು ಹೋಗುವ ಹುಡುಗಿಯರನ್ನು ಮತ್ತೆ ಸರಿದಾರಿಗೆ ತರುವ ಪ್ರಯತ್ನವೇ ನಮ್ಮ ಕೆಲಸ. ಹಾಗೆ ನೋಡಿದರೆ ವಸುಧಾ ಸಹ ಒಳ್ಳೆಯ ಹುಡುಗಿಯೇ. ಹಾಗೂ ಮಾದಕ ದ್ರವ್ಯ ಸೇವನೆ ಹೆಚ್ಚು ಮಾಡಿಲ್ಲದ್ದರಿಂದ ಹೆಚ್ಚು ದುಷ್ಪರಿಣಾಮಗಳಾಗಿರಲಿಲ್ಲ. ಆದ್ದರಿಂದ ಅವಳು ಬೇಗ ಗುಣಮುಖಳಾಗಲು ಸಾಧ್ಯವಾಯಿತು. ಆದರೆ ಬಲವಂತವಾಗಿ ತಂದೆ ಮನೆಗೆ ಕಳಿಸಿದ್ದರೆ ಅವಳ ಮನಸ್ಸು ಆಘಾತಕ್ಕೊಳಗಾಗುತ್ತಿತ್ತೋ ಏನೋ..... ಈ ದಿನಕ್ಕಾಗಿ ನಾವುಗಳು ಕಾದದ್ದು ನಿಜಕ್ಕೂ ಸಾರ್ಥಕವಾಯಿತು. ನ್ಯಾಯವಾಗಿ ಎಲ್ಲಾ ಕ್ರೆಡಿಟ್ ನಿಮಗೇ ಸೇರಬೇಕು. ಏಕೆಂದರೆ ಸಹನೆಯಿಂದ ತಂದೆ ಮಗಳು ಮತ್ತೆ ಒಂದಾಗುವಂತೆ ಮಾಡಿ ಪುಣ್ಯವಂತರಾಗಿದೀರಿ"

ಶ್ರೀಕಾಂತ "ಹ್ಞಾಂ ಹ್ಞಾಂ" ಎಂದು ಸುಮ್ಮನೆ ನಕ್ಕ. ಮತ್ತೊಮ್ಮೆ ಥ್ಯಾಂಕ್ಸ್ ಹೇಳಿ, ಶ್ರೀಕಾಂತ ಹೊರಬಂದ. ಸೀದಾ ಮಹೇಶನ ಸ್ಟುಡಿಯೋಗೆ ಬಂದು ಎಲ್ಲಾ ವಿಷಯವನ್ನು ತಿಳಿಸಿದ. ಅವನಿಗೂ ಆಶ್ಚರ್ಯವೇ.

"ಮ್ಯಾಂಡ್ರೇಕನ ಕಾಮಿಕ್ಸ್ ಏನೋ ಜಾದು ಮಾಡಿರಬೇಕು. ಇಲ್ಲದಿದ್ದರೆ ಈ ಹುಡುಗಿ ಇದ್ದಕ್ಕಿದ್ದಂತೆ ಬದಲಾಗಲು ಕಾರಣವೇನು?" ಮಹೇಶ ತನ್ನ ಸಂಶಯವನ್ನು ವ್ಯಕ್ತಪಡಿಸಿದ.

"ಏನೋ ನನಗೂ ನಂಬೊಕ್ಕೇ ಆಗ್ತಿಲ್ಲ. ಆದರೆ ಏನೇ ಆಗಲಿ ಎಲ್ಲಾ ಒಳ್ಳೇದಕ್ಕೆ ಅಂತ ಅಂದ್ಕೊಂಡು ಸುಮ್ಮನಾದೆ. ಬರ್ತೀಯ ಈಗಲೇ ನಾವು ಅವರ ಮನೆಗೆ ಹೋಗಿ ತಿಳಿಸೋಣ"

ಇಬ್ಬರೂ ಸುಧಾಕರರಾಯರ ಮನೆಗೆ ಬಂದಾಗ, ಅವರು ಅದೇ ತಾನೇ ವಿಶ್ರಾಂತಿ ಮುಗಿಸಿ ಎದ್ದು ಕಾಫಿ ಕುಡಿಯುತ್ತಿದ್ದರು. ಇಬ್ಬರನ್ನು ಒಟ್ಟಿಗೆ ಕಂಡು ಅವರಿಗೆ ಖುಷಿಯಾಗಲಿಲ್ಲ.

"ಮೂರ್ಖ ಮಗಳ ಹಿತಚಿಂತಕರಂತೆ ಓಡಾಡುತ್ತಿದಾರೆ..... ಅವಳು

ಸರಿ ಹೋಗುತ್ತಾಳೆಂಬ ನಂಬಿಕೆ ನನಗಂತೂ ಇಲ್ಲ" ಅಂತ ಅಂದು ಕೊಂಡರೂ, ನಗುವನ್ನು ತುಟಿಗೆ ಲೇಪಿಸಿಕೊಂಡು, ಬನ್ನಿ ಬನ್ನಿ ಎಂದರು.

ಶ್ರೀಕಾಂತ, ಅವರ ಮಗಳ ನಿರ್ಧಾರವನ್ನು ತಿಳಿಸಿದಾಗ ಅವರು ನಂಬದವರಂತೇ ತಲೆಆಡಿಸಿದರು. "ಕೇವಲ ಒಂದೆರಡು ದಿನಗಳಲ್ಲಿ ಈ ಆಕಸ್ಮಿಕ ಬದಲಾವಣೆ? ಖಂಡಿತಾ ಸಾಧ್ಯವಿಲ್ಲ. ನಿಮ್ಮ ಹತ್ತಿರ ಸುಳ್ಳು ಹೇಳಿದಾಳೆ."

"ಸುಳ್ಳು ಹೇಳಿ ಅವಳು ಇನ್ನೆಲ್ಲಿಗೇ ಹೋಗ್ತಾಳೆ ಸಾರ್?" ಮಹೇಶ ಪ್ರಶ್ನಿಸಿದ.

"ಬೇರೆ ಎಲ್ಲೂ ಜಾಗವಿಲ್ಲ. ಬ್ಯಾಂಕಿನ ಹಣವನ್ನು ಮುಟ್ಟುವಂತಿಲ್ಲ. ಈಗ ನಾನೇ ಆಪ್ತಾನಾಗಿಬಿಟ್ಟೆನೋ? ಇಲ್ಲಿಗೆ ಬಂದು ವಿನಾಕಾರಣ ಮನಸ್ತಾಪ ಮಾಡಿಕೊಂಡು ಮತ್ತೆ ಮನೆ ಬಿಟ್ಟು ಹೋಗುವ ಬದಲು ಅವಳು ಬರುವುದೇ ಬೇಡ. ಅಲ್ಲೇ ಎಲ್ಲಾದರೂ ಸುಖವಾಗಿರಲಿ"

"ಅವಳು ತನ್ನ ತಪ್ಪನ್ನು ಅರಿತು ಕೊಂಡಿರಬಹುದು. ತನ್ನ ತಪ್ಪನ್ನು ತಿದ್ದಿಕೊಂಡು ಸರಿಯಾಗಿ ಬಾಳಲು ನೀವು ಅವಕಾಶಮಾಡಿಕೊಡಬೇಕು. ಅದು ನಿಮ್ಮ ಜವಾಬ್ದಾರಿ, ನಿಮ್ಮ ಕರ್ತವ್ಯ" ಮತ್ತೆ ಮಹೇಶ ನುಡಿದ.

"ನನಗೂ ಎಲ್ಲಾ ಗೊತ್ತಾಯ್ತು. ಆದರೆ ಹಾಗಂತ ಆ ಕೆಂಡದಂತಹ ಹುಡುಗಿಯನ್ನು ಮತ್ತೇ ಮಡಿಲಿಗೆ ಸೇರಿಸಿಕೊಂಡರೆ, ಉರಿತಾಕುವುದು ನನಗೇ..ತಿಳೀತೇ?"

" ಹಾಗಾದರೆ ನೀವು ಅವಳನ್ನು ಇನ್ನೂ ಕ್ಷಮಿಸಿಲ್ಲವೇ..."

"ಅವಳು ಪುಷ್ಪಳನ್ನು ತಾಯಿ ಅಂತ ಒಪ್ಪಿಕೊಂಡರೇ ಮಾತ್ರ ಅವಳಿಗೇ ಕ್ಷಮೆ. ಇಲ್ಲದಿದ್ದರೆ ಅವಳು ಈಗಿನಂತೇ ಎಲ್ಲಿ ಬೇಕಾದರೂ ಇರಬಹುದು. ಹಾಗಂತ ತಿಳಿಸಿಬಿಡಿ" ಶ್ರೀಕಾಂತ ಪೆಚ್ಚಾದ. ಮಹೇಶನ ಕಡೆ ನೋಡಿದ.

"ಹಾಗಾದರೆ, ನೀವು ಮದುವೇಯಾಗಿರುವುದು ನಿಜಾನಾ? ನಾವು ನೀವು ಮತ್ತೇ ಮದುವೇಯಾಗಿಲ್ಲವೆಂದು ಅವಳೊಡನೆ ವಾದಿಸಿದೆವು. ಯಾಕೆಂದರೆ ನಮಗೆ ಈ ವಿಷಯ ಗೊತ್ತಿರಲಿಲ್ಲ. ಅವರು ಇಲ್ಲಿ ಇಲ್ಲವಲ್ಲ."

"ಹೌದು ಪುಷ್ಪ ಇಲ್ಲಿಲ್ಲ. ಇವಳ ಕಾರಣದಿಂದಾಗಿ ಅವಳೂ ನನ್ನಿಂದ ದೂರವಾಗಿ ಹೋದಳು. ನನ್ನ ದುಃಖದ ದಿನಗಳಲ್ಲಿ ನನಗೆ ಸಾಂತ್ವನ ನೀಡಿದ ನನ್ನ ಸ್ನೇಹಿತೆ ಅವಳು. ಅವಳಿಗಾದ ಅವಮಾನವನ್ನು ನಾನು ಹೇಗೆ ಸಹಿಸಲಿ? ಅವಳಿಂದ ಕ್ಷಮೆ ಸಿಗದ ಹೊರತು ವಸುಧಾ ಇಲ್ಲಿಗೆ

ಬರುವಂತಿಲ್ಲ."

"ನಾವು ವಸುಧಳನ್ನು ಈ ವಿಷಯದಲ್ಲಿ ಬಲವಂತ ಮಾಡುವುದಿಲ್ಲ ಸಾರ್. ಅವಳ ಮನಸ್ಸು ಸೂಕ್ಷ್ಮವಾಗಿದೆ. ತನಗಾದ ನೋವುಗಳನ್ನು ಮರೆಯಲು ಅವಳು ಮಾದಕದ್ರವ್ಯಗಳನ್ನು ಸೇವಿಸುತ್ತಿದ್ದಳು ಅನ್ನೋ ವಿಷಯ ನಿಮಗೆ ತಿಳಿದಿದ್ದೆ. ಈಗ ನೀವು ಅವಳಿಗೇ ನಿಮ್ಮ ಪ್ರೀತಿಯನ್ನು ತೋರಿ, ಸಹಕಾರ ನೀಡಬೇಕೇ ವಿನಾ ಹೀಗೆ ಪ್ರತಿಬಂಧಕವನ್ನು ಹಾಕುವುದು ಸರಿಯಲ್ಲ. ಇದರಿಂದ ಅವಳ ಪ್ರಾಣಕ್ಕೇ ಅಪಾಯವಲ್ಲವೇ?"

"ಅವಳ ಪ್ರಾಣಕ್ಕೆ ಏನೂ ಅಪಾಯವಿಲ್ಲ. ಹಾಗಿದ್ದರೆ ಎಂದೋ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಳು"

ಒಬ್ಬ ತಂದೆ, ತನ್ನ ಮಗಳ ಬಗ್ಗೆ ಈ ರೀತಿ ಅನಾದಾರಣೆಯ ಮಾತುಗಳನ್ನಾಡಿದರೆ, ವಸುಧಳ ಮಾತಿನಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ ಅಂತೆನಿಸಿತು. ಈತನಿಗೆ ಮಗಳಿಗಿಂತ ಆ ಸ್ನೇಹಿತಯೇ ಹೆಚ್ಚಾದಳೇ ಯೋಚಿಸಿ ನುಡಿದ..

"ಯಾವುದೋ ಧರ್ಮ ಕರ್ಮ ಸಂಯೋಗದಿಂದ ನಿಮ್ಮ ಪರಿಚಯ ನನಗಾಯಿತು. ನಿಮ್ಮ ಒಂಟಿ ಜೀವನಕ್ಕೆ ನಾನು ಮರುಗಿದ್ದೆ. ನಿಮ್ಮ ಅಡಿಗೆಯವರೂ ಕೇಳಿಕೊಂಡಿದ್ದರಿಂದ ನಾನು ನಿಮ್ಮ ಮಗಳನ್ನು ಹುಡುಕುವ ಪ್ರಯತ್ನ ಮಾಡಿದೆ. ಮಹೇಶನ ಸಹಾಯದಿಂದ ಅವಳನ್ನು ಹುಡುಕಿ ನರ್ಸಿಂಗ್ಹೋಂಗೇ ಸೇರಿಸಿ ಶುಶ್ರೂಷೆ ಕೊಡಿಸಿದೆ. ಇದನ್ನೆಲ್ಲ ಮಾಡಿದ್ದು ನಾನು ನಿಮಗೋಸ್ಕರ. ಅದರೆ ನಿಮಗೆ ಆ ಮಗಳ ಮೇಲೆ ಪ್ರೀತಿ ಇಲ್ಲ. ಬರೀ ಹಣ ಖರ್ಚು ಮಾಡಿ ನಿಮ್ಮ ದೊಡ್ಡಸ್ತಿಕೆಯನ್ನು ತೋರಿಸಿದಿರಿ. ಇದರ ಬದಲು ಒಂದೇ ಒಂದು ಸಾರಿ ಬಂದು ಮಗಳನ್ನು ವಿಶ್ವಾಸದಿಂದ ಮಾತನಾಡಿಸಿದ್ದರೆ ಅವಳು ಎಲ್ಲವನ್ನೂ ಮರೆತಿರುತ್ತಿದ್ದಳು. ನೀವು ನಿಮ್ಮ ಹಠವನ್ನೇ ಸಾಧಿಸುತ್ತಾ ಬಂದಿರಿ. ಅವಳೂ ನಿಮ್ಮಷ್ಟೇ ಹಠವಾದಿ. ಆದರೆ ಅವಳು ನನಗಾಗಿ, ನನಗೆ ತೊಂದರೆಯಾಗದಿರಲೆಂದು, ನಿಮ್ಮ ಮನೆಗೆ ಬಂದಿರಲು ಒಪ್ಪಿಕೊಂಡಿದಾಳೆ. ನೀವು ಅವಳನ್ನು ಪ್ರೀತಿಯಿಂದ ನೋಡಿಕೊಂಡರೆ ಅವಳು ನಿಮಗಾಗಿ ನಿಮ್ಮ ಸ್ನೇಹಿತೆಯನ್ನು ಕ್ಷಮಿಸಬಹುದು.

ಆ ದಿನ ಪೊಲೀಸ್ ಸ್ಟೇಷನ್ನಿಗೆ ಹೋಗಿ, ನನ್ನ ಮೇಲೆ ಕಂಪ್ಲೇಟ್ ಕೊಟ್ಟವಳು, ಕೆಟ್ಟವರ ಸ್ನೇಹವನ್ನು ಮಾಡಿ, ಮತ್ತೆ ಪೊಲೀಸ್ ಸ್ಟೇಷನಗೆ ಹೋಗಿ ನನ್ನ ಮುಖಕ್ಕೆ ಮಸಿ ಬಳಿದವಳು.... ಅವಳನ್ನು ಮತ್ತೆ ನನ್ನ

ಮನೆಗೆ ಸೇರಿಸಿಕೊಳ್ಳಬೇಕಾದರೆ, ನಾನೆಷ್ಟು ಯೋಚಿಸಬೇಕು? ಅವಳು ಮತ್ತೆ ಹಾಗೆ ವರ್ತಿಸುವುದಿಲ್ಲ ಅಂತ ಏನು ಗ್ಯಾರಂಟಿ ? ನಾನು ಹೇಗೆ ನಂಬಲಿ?"

ಆತ ಇಷ್ಟು ಹೇಳಿದಾಗ ಶ್ರೀಕಾಂತ ನಿರುತ್ತರನಾದ. ಮೊದಲು ತಂದೆ ಮಗಳು ಇಬ್ಬರಲ್ಲೂ ತಪ್ಪಿತ್ತು. ಈಗ ಈತ ಮತ್ತೆ ತಪ್ಪು ಮಾಡುತ್ತಿದ್ದಾರೆ. ಬಹುಶಃ ಇದಕ್ಕೆ ಪುಷ್ಪಳೇ ಕಾರಣವಿರಬಹುದು. ಇಲ್ಲಿ ಜತೆಯಲ್ಲಿ ಇಲ್ಲದಿದ್ದರೂ ಆಗಾಗ್ಗೆ ಬರುತ್ತಿರಬಹುದು. ಅವಳಿಗೋಸ್ಕರ ಮಗಳನ್ನೇ ತ್ಯಾಗ ಮಾಡುವಷ್ಟು ಆಕೆಯ ಪ್ರಭಾವ! ಇಂಥ ಸ್ಥಳದಲ್ಲಿ ವಸುಧ ಸುಖಿಯಾಗಿರುವುದಿಲ್ಲ. ಮತ್ತೆ ತನ್ನ ಹಳೇ ಜಾಡಿಗೆ ಹೋದರೂ ಹೋದಳೇ.. ತಾನು ಎಂತಹ ಮೂರ್ಖನಾದೆ. ಆದರೆ ಈತನಿಗೆ ಹೃದಯವಿಲ್ಲವೆಂದರೆ, ನನಗೂ ಹೃದಯವಿಲ್ಲವೇ? ಅವಳನ್ನು ಹುಡುಕಿದವನು ನಾನು! ಚಿಕಿತ್ಸೆ ಕೊಡಿಸಿದವನು ನಾನು!! ಅವಳಿಗಾಗಿ ಓಡಾಡಿದವನು ನಾನು! ನನಗಾಗಿ ಅವಳು ತನ್ನ ಹಠವನ್ನು ಬಿಡಲು ಸಿದ್ಧಳಾದಳು. ತನ್ನ ಒಲವನ್ನು ತೋರಿದಳು. ಕೆನ್ನೆಗೆ ತಗುಲಿದ ಸ್ಪರ್ಶದ ಬಿಸಿ ಇನ್ನು ಹಸಿಯಾಗಿದೆ. ಈಗ ಅವಳನ್ನು ನಾನೂ ದೂರ ಮಾಡಿದರೆ, ಅವಳು ಆತ್ಮಹತ್ಯೆ ಮಾಡಿಕೊಳ್ಳುವುದು ಖಂಡಿತಾ... ಹಾಗೆಂದುಕೊಂಡು ಎದ್ದು ನಿಂತು, ಆತನಿಗೆ ಕೈಮುಗಿದ.

"ಓ.ಕೆ. ಸಾರ್, ನೀವೆಷ್ಟು ದೊಡ್ಡ ಮನುಷ್ಯರು ಅಂತ ನನಗೆ ಚೆನ್ನಾಗಿ ಅರ್ಥವಾಯಿತು. ನಿಮ್ಮಷ್ಟು ಕಠಿಣ ಹೃದಯದವನು ನಾನಲ್ಲ. ನೀವು ಏನೇ ಹೇಳಿದರೂ ನೀವು ತಂದೆ ಮಗಳು ಎಂಬ ಸಂಬಂಧ ಕಡಿದು ಹೋಗುವುದಿಲ್ಲ. ಆದ್ದರಿಂದ ನಾನು ನಿಮಗೆ ನನ್ನದೊಂದು ನಿರ್ಧಾರವನ್ನು ತಿಳಿಸಲೇಬೇಕು. ವಸುಧ ಮುಗ್ಧೆ. ಅವಳ ತಪ್ಪನ್ನು ಅವಳು ತಿದ್ದಿಕೊಂಡು ಸುಖವಾಗಿರುವಂತೆ ಅವಳನ್ನು ನಾನು ನೋಡಿಕೊಳ್ಳುತ್ತೇನೆ.."

ಮಹೇಶ ಶ್ರೀಕಾಂತನ ಮಾತಿಗೆ ಬೆರಗಾದ. " ಏನೋ.. ಏನು ಹೇಳ್ತಾ ಇದೀಯ ನೀನು?" ಪಿಸುದನಿಯಲ್ಲಿ ಪ್ರಶ್ನಿಸಿದ.

"ಮಹೇಶ ನೀನು ಮೊದಲಿನಿಂದ ನನ್ನನ್ನು ಬಲ್ಲವನು. ನಾನು ಆಡಿದ ಮಾತಿಗೆ ತಪ್ಪುವವನಲ್ಲ. ಆದಷ್ಟು ಬೇಗ ನಾನು ಅವಳನ್ನು ಮದುವೆಯಾಗಿ ಅವಳನ್ನು ನಮ್ಮ ಮನೆಗೆ ಕರೆದುಕೊಂಡು ಹೋಗ್ತೀನಿ. ಅಲ್ಲಿವರೆಗೂ ಅವಳು ನಿಮ್ಮ ಮನೆಯಲ್ಲಿರಲು ಅವಕಾಶ ಮಾಡಿಕೊಡಿ. ಅಷ್ಟೇ ಸಾಕು."

"ಏನೋ .. ಏನೇನೋ ಆಡ್ತಿದೀಯಲ್ಲ." ಮಹೇಶ ಶ್ರೀಕಾಂತನನ್ನು ಮೊಣಕೈಯಿಂದ ತಿವಿದ.

" ಇಲ್ಲ. ಮಹೇಶ ನಾನು ಒಂದು ಸಾರಿ ನಿರ್ಧರಿಸಿದ ಮೇಲೆ ಆಯ್ತು. ಅವಳನ್ನು ಸೀದಾ ಆಸ್ಪತ್ರಯಿಂದ ನಮ್ಮ ಮನೆಗೆ ಕರೆದುಕೊಂಡು ಹೋಗಲು ನನಗಿಷ್ಟವಿಲ್ಲ. ನಮ್ಮ ಅಪ್ಪ ಅಮ್ಮ ಸಂಪ್ರದಾಯಸ್ಥರು. ನಮ್ಮ ಸಂಪ್ರಾದಾಯಗಳನ್ನು ನಾನು ಗೌರವಿಸ್ತೀನಿ. ಅದ್ದರಿಂದ ಅವಳು ಪದ್ದತಿಯಂತೆ ತಂದೆಯ ಮನೆಯಿಂದ ಬರುವುದು ಸರಿ ಅಂತ ನನಗೆ ಅನ್ನಿಸುತ್ತೆ. ಈಗ ಇವರು ಇದಕ್ಕೂ ಒಪ್ಪದಿದ್ದರೆ ನಾನು ರಮನ ತಾಯಿಯನ್ನು ಕೇಳಿ, ಅಲ್ಲಿರಲು ವ್ಯವಸ್ಥೆ ಮಾಡುತ್ತೇನೆ. ಆದರೆ ಇದರಿಂದ ವಸುಧಳ ಮನಸ್ಸು ಕುಗ್ಗಿ ಹೋಗುತ್ತದೆ. ಅದು ನನಗಿಷ್ಟಪಿಲ್ಲ."

ಸುಧಾಕರರಾಯರು ಕಲ್ಲಿನ ವಿಗ್ರಹದಂತೆ ಕುಳಿತೇ ಇದ್ದರು. ಯಾವುದೋ ಹಳೆಯ ಕೋಪದಲ್ಲಿ ಅವರು ಹಾಗೆ ನುಡಿದರೂ. ಶ್ರೀಕಾಂತ ಹೀಗೆ ದಿಢೀರನೇ ತನ್ನ ನಿರ್ಧಾರವನ್ನು ತಿಳಿಸಬಹುದೆಂದು ಖಂಡಿತಾ ಊಹಿಸಿರಲಿಲ್ಲ. ಮಗಳಿಗೆ ತಾವು ಗಂಡನ್ನು ಹುಡುಕಿ ಮದುವೆ ಮಾಡುವ ವಿಷಯವನ್ನು ಅವರು ಯೋಚಿಸಿಯೇ ಇರಲಿಲ್ಲ. ಕೇವಲ ಒಂದು ತಿಂಗಳ ಹಿಂದೆ ತಮಗೆ ಈ ಹುಡುಗನ ಪರಿಚಯವಾಗಿತ್ತು. ತಮಗೆ ಸಹಾಯ ಮಾಡಿದ್ದಕ್ಕೆ ಅಭಿಮಾನ ತೋರಿದ್ದರು. ಆದರೆ ಈಗ! ಈ ಹುಡುಗನ ವ್ಯಕ್ತಿತ್ವದ ಮುಂದೆ ತಾನು ಸಣ್ಣವವನಾಗಿ ಬಿಟ್ಟೆ ಎನಿಸಿತ್ತು. ಒಂದು ರೀತಿಯ ಹೀನಾಯದಿಂದ ಹಿಂಸೆ ಆಯಿತು.

ವಸುಧ, ಈ ಹುಡುಗನಿಗೆ ಯಾವ ರೀತಿಯಿಂದಲೂ ತಕ್ಕವಳಲ್ಲ. ಈ ಹುಡುಗನಿಗೆ ಖಂಡಿತಾ ಅನ್ಯಾಯವಾಗುತ್ತದೆ ಅಂತನ್ನಿಸಿತು. ಈಗ ಇವನ ಮೂರ್ಖತಕ್ಕಾಗಿ ನಾನು ಅಯ್ಯೋ ಎಂದು ಮರುಗಬೇಕಾಗಿದೆ ಎಂದುಕೊಂಡರು. ಈ ಹುಡುಗನೂ ನಮ್ಮಂತೆ ಹಠವಾದಿ ಇರಬಹುದು. ನಾನು ಅವಳನ್ನು ಮನೆಗೆ ಕರೆತರಲು ಒಪ್ಪದಿದ್ದರೆ, ತಾನು ತಿಳಿಸಿದಂತೆ, ಅವಳನ್ನು ತನ್ನ ಅತ್ತಿಗೆಯ ತಾಯಿ ಮನೆಯಲ್ಲಿ ಬಿಟ್ಟು ನಂತರ ಮದುವೆ ಯಾಗಬಹುದು. ತಾನು ಅದಕ್ಕೆ ಅವಕಾಶ ಕೊಡಬಾರದು. ತನಗೆ ತಿಳಿದೂ, ತಾನು ಈ ಹುಡುಗನ ಬಾಳು ಹಾಳಾಗುವಂತೆ ಮಾಡಬಾರದು ಎಂದುಕೊಂಡು ನುಡಿದರು.

"ನಿನ್ನ ಮೂರ್ಖತನಕ್ಕೆ ನಾನು ಏನು ಹೇಳಲಪ್ಪಾ.... ನನ್ನ ಮಗಳ ಸ್ವಭಾವ. ನಡತೆ ನನಗೆ ಗೊತ್ತಿಲ್ಲವೆ? ಅವಳು ತಿದ್ದಿಕೊಂಡು ಬಾಳಿದರೆ, ಅದು 'ಒನಕೆ ಚಿಗುರಿದಂತೆ'.ನನಗೆ ನಿನ್ನ ಬಗ್ಗೆ ಅಯ್ಯೋ ಅಂತ ಅನ್ನಿಸುತ್ತೆ. ನಗುವೂ ಬರುತ್ತೆ. ಈಗ ನೀನು ಇಷ್ಟು ಹೇಳಿದ ಮೇಲೂ ನಿನ್ನನ್ನು ಆ

ಕೂಪಕ್ಕೆ ತಳ್ಳಲು ನನಗೆ ಸುತರಾಂ ಇಷ್ಟವಿಲ್ಲ. ಇಷ್ಟರ ಮೇಲೆ ಭಗವಂತನ ಇಚ್ಛೆ ಇದ್ದಂತಾಗಲಿ. ಅವಳನ್ನು ನಮ್ಮ ಮನೆಯಲ್ಲೇ ಇಟ್ಟು ಕೊಳ್ತೀನಿ. ನೀವಿಬ್ಬರೂ ಇಷ್ಟು ಮಾಡಿದ ಮೇಲೆ ನಾನು ನನ್ನ ಜವಾಬ್ದಾರಿಯನ್ನು ಮರೆತರೆ ವಸುಧಳ ತಾಯಿಗೆ ನಾನು ದ್ರೋಹ ಮಾಡಿದಂತಾಗುತ್ತದೆ. ನಾನು ಇನ್ನು ಹೆಚ್ಚಿಗೆ ಹೇಳುವುದಿಲ್ಲ"

ಇಷ್ಟು ಮಾತನ್ನು ಅವರಿಂದ ನಿರೀಕ್ಷಿಸಿರಲಿಲ್ಲವಾದ್ದರಿಂದ, ಮಹೇಶ ಶ್ರೀಕಾಂತ ಮುಖ ಮುಖ ನೋಡಿ ಕೊಂಡರು. ಶ್ರೀಕಾಂತ ನುಡಿದ.

"ನೀವು, ವಸುಧಾಳನ್ನು ನಿಮ್ಮ ಮನೆಗೆ ಸೇರಿಸಿಕೊಳ್ಳುಲು ಒಪ್ಪಿದ ಮಾತ್ರಕ್ಕೆ ನನ್ನ ನಿರ್ಧಾರ ಬದಲಾಗುವುದಿಲ್ಲ. ನೆನಪಿರಲಿ. ನಾನೂ ಅವಳು ಆಗಾಗ್ಗೆ ಭೇಟಿಯಾಗ್ತೀವಿ. ಅವಳಿಗೆ ಬೇಕೆನಿಸಿದಾಗ ಅವಳು ನನ್ನ ಅಂಗಡಿಗೆ ಬರುತ್ತಾಳೆ. ನೀವು ಯಾವುದನ್ನೂ ವಿರೋಧಿಸುವಂತಿಲ್ಲ"

"ನೀನಾಗಿಯೇ ನಿನ್ನ ತಲೆ ಮೇಲೆ ಕಲ್ಲು ಚಪ್ಪಡಿಯನ್ನು ಎಳೆದುಕೊಳ್ತಿದೀಯ. ನಾನು ಏನು ಹೇಳಲಪ್ಪಾ...." ಆತ ಕೆಟ್ಟ ಮುಖ ಮಾಡಿ ಮಾತನಾಡಿದಾಗ ಶ್ರೀಕಾಂತನಿಗೆ ಅದು ನಟನೆಯೋ ನಿಜವೋ ಅರ್ಥವಾಗಲಿಲ್ಲ.

"ನಡೀ ಮಹೇಶ ಹೋಗೋಣ" ಅನ್ನುತ್ತಾ ಎದ್ದಾಗ ರಾಯರು ನುಡಿದರು.

"ನಿನ್ನ ಮಾತುಗಳಿಂದ ನನಗಂತೂ ಖಂಡಿತಾ ಸಂತೋಷವಾಗ್ತಿಲ್ಲ. ಆದರೂ ನೀನು ನನಗೆ ಆಪ್ತನೇ. ಕಾಫಿ ಕುಡಿದು ಹೋಗೋರಂತೆ ಕೂತ್ಕೊಳ್ಳಿ" ಮಹೇಶ ಹೆಚ್ಚಿಗೆ ಹೇಳಿಸಿಕೊಳ್ಳದೇ ಕುಳಿತಾಗ ಶ್ರೀಕಾಂತನೂ ಕುಳಿತ. ಕಾಫಿಯೊಂದಿಗೆ ಲಘು ಉಪಾ ಹಾರವೂ ಆಯಿತು.

"ಆಯ್ತಪ್ಪಾ ಶ್ರೀಕಾಂತ, ನಾನು ಈಗ ನರ್ಸಿಂಗ್‌ಹೋಂ ಕಡೆ ಹೊರಡ್ತೀನಿ. ನಿಮಗೆ ಕೆಲಸವಿದ್ದರೆ ಬರಬೇಡಿ. ಪರವಾಗಿಲ್ಲ" ಶ್ರೀಕಾಂತ ಮೌನವಾಗಿದ್ದರೂ ತಾನೂ ನರ್ಸಿಂಗ್ ಹೋಂಗೆ ಹೋಗುವುದೆಂದು ನಿರ್ಧರಿಸಿದ. ಮಹೇಶನನ್ನು ಕರೆದ.

"ಬಹುಶಃ ನರ್ಸಿಂಗ್ ಹೋಂಗೆ ಕಡೇ ಭೇಟಿ. ನೀನೂ ನನ್ನ ಜತೆಗಿದ್ದರೆ ಒಳ್ಳೆಯದು"

"ಆಯ್ತಯ್ಯ ಬರ್ತೀನಿ" ಎನ್ನುತ್ತಾ ಬೆನ್ನು ತಟ್ಟಿದ. ಇಬ್ಬರೂ ಹೊರಟರು. ದಾರಿಯಲ್ಲಿ ಇಬ್ಬರೂ ಏನೂ ಮಾತನಾಡಲಿಲ್ಲ.

ಸುಧಾಕರರಾಯರಿಗೆ ಕಾಯದೇ, ಮುಂದಾಗಿ ಅವರಿಬ್ಬರೂ ನರ್ಸಿಂಗ್ ಹೋಂಗೆ ಹೋದರು. ಮಹೇಶ ಮುಗುಳ್ನಗುತ್ತಾ ವಸುಧಾಳನ್ನು ಮಾತನಾಡಿಸಿ

"ಕಂಗ್ರಾಚುಲೇಷನ್ಸ್" ಎಂದ.

"ಥ್ಯಾಂಕ್ಸ್. ಯಾಕೆ ಕಂಗ್ರಾಟ್ಸ್?" ಕೇಳಿದಳು.

"ನಿಮ್ಮ ತಂದೆ ಮನೆಗೆ ಹೋಗ್ತಾ ಇದೀರಲ್ಲ" ಎಂದು ಹೇಳಿ ಶ್ರೀಕಾಂತನ ಕಡೆ ನೋಡಿ ಮೆಲುನಗೆ ನಕ್ಕ.

"ನಾನು ನಿಮಗೆಲ್ಲ ಥ್ಯಾಂಕ್ಸ್ ಹೇಳಬೇಕು ಮಹೇಶ್. ನನಗೋಸ್ಕರ ನೀವೆಲ್ಲ ಎಷ್ಟು ಕಷ್ಟಪಟ್ಟಿದೀರಿ...... "

"ಮೇಡಂ.... ನಿಮಗೇನೂ ತೊಂದರೆ ಇಲ್ಲದಿದ್ದರೆ ಒಂದೆರಡು ಸ್ನಾಪ್ಸ್ ತೆಗಿತೀನಿ" ಎನ್ನುತ್ತಾ ಕ್ಯಾಮೆರಾ ತೆಗೆದ. ವಸುಧಾ ಖುಷಿಯಿಂದ ಒಪ್ಪಿಕೊಂಡಳು. ಆಸ್ಪತ್ರೆಯ ಸಿಬ್ಬಂದಿಯವರಿಗ್ಯಾರಿಗೂ ಅನುಮಾನ ಬರದಂತೆ ರಹಸ್ಯವಾಗಿ, ಮಹೇಶ ನಾಲ್ಕಾರು ಫೋಟೋಗಳನ್ನು ತೆಗೆದ. ಶ್ರೀಕಾಂತ ಬೇಡ ಬೇಡವೆಂದರೂ ಅವನದ್ದು ಒಂದೆರಡು ತೆಗೆದ. ವಸುಧಾ ತನ್ನ ವಸ್ತುಗಳನ್ನೆಲ್ಲಾ ಪ್ಯಾಕ್ ಮಾಡಿ ಕೊಂಡಳು. ಶ್ರೀಕಾಂತ, ಮಹೇಶ ಇಬ್ಬರೂ ಅವಳಿಗೆ ಸಹಾಯ ಮಾಡಿದರು. ತನ್ನ ವಾರ್ಡಿನ ಸಿಸ್ಟರ್‌ಗೆ ವಸುಧಾ ನಾಲ್ಕಾರು ಸಲ ತಾನು ಮನೆಗೆ ಹೋಗುತ್ತಿರುವುದಾಗಿ ಹೇಳಿ ಅವಳಿಂದ ಶುಭಹಾರೈಕೆಯನ್ನು ಪಡೆದಿದ್ದಳು.

ಅಂತೂ, ಅವರು ಕಾಯುತ್ತಿದ್ದಂತೆ, ಸುಧಾಕರರಾಯರು ಟ್ಯಾಕ್ಸಿ ಮಾಡಿಕೊಂಡು ಕಾವೇರಮ್ಮನೊಂದಿಗೆ ಬಂದರು. ಕಾವೇರಮ್ಮ ಸೀದಾ ವಸುಧಾಳ ಬಳಿಗೆ ಬಂದು ಅವಳ ತಲೆ ಸವರಿ ಮಾತನಾಡಿಸಿದರು. ಶ್ರೀಕಾಂತ ಅಲ್ಲೇ ಉಳಿದ. ಮಹೇಶ ಸುಧಾಕರರಾಯರನ್ನು ಡಾಕ್ಟರ ಬಳಿಗೆ ಕರೆದೊಯ್ದು ಪರಿಚಯಿಸಿದ. ಡಾಕ್ಟರು ವಸುಧಾಳ ಆರೋಗ್ಯದ ಬಗ್ಗೆ ಮಾತನಾಡಿ, ಕೆಲವು ಸಲಹೆಗಳನ್ನು ನೀಡಿದರು. ತಿಂಗಳಿಗೊಂದು ಸಲ ಒಂದು ಚೆಕಪ್ ಮಾಡಿಸಿಕೊಂಡು ಹೋಗಬೇಕೆಂದು ತಿಳಿಸಿದರು. ಅಷ್ಟರಲ್ಲಿ ಆಫೀಸಿನಲ್ಲಿ ಖರ್ಚಿನ ವಿವರಗಳನ್ನು ತಿಳಿಸಿ, ಬಿಲ್ ಸಿದ್ಧ ಮಾಡಿಬಿಟ್ಟಿದ್ದರು. ಆತ ತಾವು ತಂದಿದ್ದ ಹಣವನ್ನು ಕ್ಯಾಷ್ ಕೌಂಟರಿನಲ್ಲಿ ಕೊಟ್ಟು ರಶೀತಿ ಪಡೆದರು. ಡಾಕ್ಟರಿಗೂ, ಶ್ರೀಕಾಂತನಿಗೂ ಸ್ನೇಹವಿದ್ದುದರಿಂದ ಎಲ್ಲಾ ಕೆಲಸಗಳು ಸುಸೂತ್ರವಾಗಿ ನೆರವೇರಿತು. ಇಷ್ಟೆಲ್ಲಾ ಆದರೂ ಆತ ವಸುಧಾಳ ವಾರ್ಡ್ ಬಳಿಗೆ ಬಂದಿರಲಿಲ್ಲ. ಶ್ರೀಕಾಂತ ಅದನ್ನು ಗಮನಿಸಿದ್ದ. ಆದರೂ, "ವಸುಧಾ ನಡೀ ಹೊರಡೋಣ" ಎಂದಾಗ ಅವಳು ಅವನ ಕೈಹಿಡಿದಳು.

"ನನಗ್ಯಾಕೋ ಭಯವಾಗ್ತಿದೆ ಶ್ರೀ...... ನಾನು ಅಲ್ಲಿ ಹೇಗಿರಲಿ?"

"ಭಯ ಏಕೆ? ಅದು ನಿನ್ನ ಮನೆಯೇ ತಾನೇ..... ನೀನು ಒಂದೆರಡು

ದಿನ ರೆಸ್ಟ್ ತಗೊಂಡು ಅಡ್ಜಸ್ಟ್ ಮಾಡಿಕೋ. ಬೇಕಾದರೆ, ಇದು ನನ್ನ ಫೋನ್ ನಂಬರ್ರು..... ಏನಾದರೂ ಬೇಕಾದರೆ ಫೋನು ಮಾಡು" ಎನ್ನುತ್ತಾ ಮನೆಯ, ಅಂಗಡಿಯ ಫೋನು ನಂಬರಿನ ಕಾರ್ಡನ್ನು ಕೊಟ್ಟ.

"ಅದು ನಿನ್ನ ಮನೆ. ಅಲ್ಲಿ ನೀನು ಫ್ರೀಯಾಗಿ ಹಾಯಾಗಿರಬಹುದು. ಓದು, ಅಡಿಗೆ ಕೆಲಸ ಮಾಡು, ಗಾರ್ಡನಿಂಗ್ ಮಾಡು. ಸಮಯ ಹೋಗುತ್ತೆ. ಹತ್ತಿರದ ಯಾವುದಾದರೂ ಹಾಬಿ ಕ್ಲಾಸಿಗೆ ಸೇರಿಕೋ"

ಇಬ್ಬರೂ ಕಾರಿಡಾರನ್ನು ದಾಟಿ ಡಾಕ್ಟರ್ ರೂಮಿಗೆ ಹೋಗಿ ಥ್ಯಾಂಕ್ಸ್ ಹೇಳಿ ಬಂದರು. ಅಷ್ಟರಲ್ಲಿ ರಾಯರಾಗಲೇ ಟ್ಯಾಕ್ಸಿ ಏರಿದ್ದರು. ಕಾವೇರಮ್ಮ ವಸುಧಾಳಿಗಾಗಿ ಕಾಯುತ್ತಾ ನಿಂತಿದ್ದರು.

"ನೋಡಿದ್ರಾ ಶ್ರೀ... ನಮ್ಮಪ್ಪ ನನ್ನನ್ನ ಮಾತನಾಡಿಸಲೇ ಇಲ್ಲ. ನನಗೆ ಎಷ್ಟು ಅವಮಾನವಾಗ್ತಿದೆ ಗೊತ್ತಾ?"

" ಅದನ್ನೆಲ್ಲ ತಲೆಗೆ ಹಚ್ಚಿಕೋ ಬೇಡ. ಮಸುಧಾ ರಾತ್ರಿ ಮನೆಯಿಂದ ನನಗೆ ಫೋನು ಮಾಡು. ನಾನು ಕಾಯ್ತಾ ಇರ್ತೀನಿ" ಎನ್ನುತ್ತಾ ಅವಳ ಕೆನ್ನೆ ತಟ್ಟಿದ. ಮಹೇಶ, ಶ್ರೀಕಾಂತ ಇಬ್ಬರೂ ಹಾಗೇ ನಿಂತಿದ್ದರು. ವಸುಧಾ ಟ್ಯಾಕ್ಸಿ ಏರಿ ಕುಳಿತಳು. ಅವಳು ಕೈ ಆಡಿಸಿ ಬೈ ಮಾಡಿದಳು.

"ಅಬ್ಬಾ... ಒಂದು ದೊಡ್ಡ ಕೇಸ್ ಸಾಲ್ವ್ ಆಯಿತು" ಎಂದ ಮಹೇಶ. ಶ್ರೀಕಾಂತನ ಬೆನ್ನ ಮೇಲೆ ಕೈಹಾಕಿ,

"ಇಲ್ಲ. ಅದರ ಇನ್ನೊಂದು ಭಾಗ ಬಾಕಿ ಇದೆ. ಅದು ಇವತ್ತಿನಿಂದ ಪ್ರಾರಂಭವಾಗಿದೆ." ಎಂದ ಶ್ರೀಕಾಂತ.

"ಅಲ್ಲ. ಶ್ರೀಕಾಂತ, ನಿನ್ನ ತಲೆ ಏನಾದರೂ ಕೆಟ್ಟಿದೆಯಾ? ವಸುಧಾನ್ನ ಮದುವೆಯಾಗ್ತೀನಿ ಅಂತ ಯಾಕೆ ಹೇಳಿದೆ. ನಿಮ್ಮ ತಾಯಿ ಒಪ್ಪದೆ ಇದ್ದರೇ..?"

"ಅದಕ್ಕೇ ಹೇಳಿದ್ದು. ಇನ್ನು ಬಹಳ ಬಾಕಿ ಇದೆ ಅಂತ"

"ಆದರೆ ನಿನ್ನ ನಿರ್ಧಾರ ಸರಿ ಅಂತ ಅನ್ನಿಸೊಲ್ಲ ನನಗೆ"

" ಸರಿಯೋ ತಪ್ಪೋ. ಈಗ ಹೇಳಿದ್ದಂತೂ ಆಗಿದೆ. ಹೇಳಿದ ಮಾತನ್ನು ನಾನು ಉಳಿಸಿಕೊಳ್ಳಬೇಕಾಗಿದೆ."

" ವಸುಧಾ ಒಪ್ಪದಿದ್ದರೆ ಏನು ಮಾಡ್ತೀಯ?"

" ಆಗ ಏನೂ ಮಾಡೊಕ್ಕೆ ಆಗೊಲ್ಲ. ಹೀಗೇ ಇದ್ದುಬಿಡ್ತೀನಿ.. ಇನ್ನು ಇಲ್ಲಿ ಏನು ಕೆಲಸ. ನಡೀ ಮತ್ತೆ ಅಂಗಡಿಗೆ ಬಂದರು ಅಂಗಡಿಯಲ್ಲಿ

ಗಿಕಾಕಿಗಳ ನಡುವೆಯೂ ಶ್ರೀಕಾಂತನಿಗೆ ಆಗಾಗ್ಗೆ ವಸುಧಾಳ ನೆನಪು ಬರುತ್ತಿತ್ತು. ತಾನು ತೆಗೆದುಕೊಂಡ ನಿರ್ಧಾರ ತಪ್ಪೋ ಸರಿಯೋ ಎಂದು ಮತ್ತೆ ಮತ್ತೆ ಯೋಚಿಸಿ ಬಳಲಿ ಹೋಗಿದ್ದ. ಮಹೇಶನೇನೊ ತನ್ನನ್ನು ದುಡುಕಿದೆ ಎಂದು ಗದರಿದ್ದ. ಅವನನ್ನು ಬಿಟ್ಟರೆ ರಮಾ ಆಪ್ತ ಸ್ನೇಹಿತೆ. ಆದರೆ ಈಗ ಅವಳನ್ನು ಸಲಹೆ ಕೇಳುವುದು ಖಂಡಿತಾ ಸರಿಯಲ್ಲ. ಮೊದಲು ಅವಳ ಮದುವೆ ನಡೆದು ಹೋಗಲಿ, ನಂತರ ಕೇಳಿದರಾಯ್ತು ಎಂದುಕೊಂಡ.

ರಮಾ ಇನ್ನು ಮನೆಗೆ ಬಂದಿರಲಿಲ್ಲವಾದ್ದರಿಂದ, ಮನೆಯಲ್ಲಿ ಮೌನವೇ ಹೆಚ್ಚು. ವಿಶೂ ಇಲ್ಲದಿದ್ದರೆ, ಕಾಲ ಕಳೆಯುವುದು ಎಷ್ಟು ಕಷ್ಟ ಅಂತ ಎಲ್ಲರಿಗೂ ತಿಳಿದಿತ್ತು. ಶ್ರೀಕಾಂತ ಅಂಗಡಿಯ ಬಾಗಿಲನ್ನು ಹಾಕುವ ಮೊದಲು ವಸುಧಾಳ ಮನೆಗೆ ಫೋನು ಮಾಡಿದ್ದ. ಕಾವೇರಮ್ಮ ಫೋನು ತೆಗೆದಿದ್ದರು. ವಸುಧಾಳ ಯೋಗಕ್ಷೇಮವನ್ನು ವಿಚಾರಿಸಿದ. ಊಟ ಮಾಡಿ ಔಷಧಿ ತೆಗೆದುಕೊಂಡು ಮಲಗಿದ್ದಾಳೆಂದು ಆಕೆ ತಿಳಿಸಿದ್ದಳು. ಬೆಳಗ್ಗೆ ಮತ್ತೆ ಫೋನು ಮಾಡ್ತೀನಿ ಎಂದು ಹೇಳಿ ಲೈನ್ ಕಟ್ ಮಾಡಿದ.

ತಾಯಿ ಊಟ ಮುಗಿಸುವವರೆಗೂ ಕಾದಿದ್ದು, ನಂತರ ತಾಯಿಯೊಡನೆ ಮಾತಿಗೆ ಪ್ರಾರಂಭಿಸಿದ. ಸುಧಾಕರರಾಯರ ವಿಚಾರವನ್ನೆಲ್ಲಾ ತಿಳಿಸಿ, ವಸುಧಾಳ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿ, “ಆ ಹುಡುಗಿ ನನಗೆ ಇಷ್ಟವಾಗಿದಾಳೆ. ನಾನು ಅವಳನ್ನು ಮದುವೆಯಾಗ್ತೀನಿ” ಅಂತಂದ.

ಪಾರ್ವತಿಗೆ ಈ ಸುದ್ದಿ ಅನಿರೀಕ್ಷಿತ. ಇದುವರೆಗೂ ಯಾವ ಸೂಚನೆಯನ್ನು ಕೊಡದೇ ತಾನೇ ಮದುವೆಯಾಗುವ ನಿರ್ಧಾರವನ್ನು ಮಗ ತೆಗೆದುಕೊಂಡಿದ್ದು ಅವಳಿಗೆ ಸರಿ ಎನಿಸಿರಲಿಲ್ಲ. ಏನು ಹೇಳಬೇಕೆಂದು ತಿಳಿಯದೇ ಸುಮ್ಮನಾದಳು.

“ಅಮ್ಮ ನಿನಗೆ ಇಷ್ಟವಿಲ್ಲ ಅಂತ ನಿನ್ನ ಮೌನದಿಂದ ಗೊತ್ತಾಗ್ತಾ ಇದೆ. ಆದರೆ ನಿನ್ನ ಒಪ್ಪಿಗೆಯೂ ಬೇಕಮ್ಮ” ಎಂದ.

“ಯಾಕೆ ಹೀಗೆ ಮಾಡಿ ಹೊಟ್ಟೆ ಉರಿಸ್ತೀರೋ...... ನಾವು ದೊಡ್ಡವರು, ಮನೆಗೆ ಹಿರಿಯರು, ನಮಗೆ ಬೆಲೆ ಬೇಡವೇ?”

“ಬೆಲೆ ಕೊಡುತ್ತಿರುವುದರಿಂದಲೇ ನಿನ್ನ ಒಪ್ಪಿಗೆ ಕೇಳ್ತಾ ಇರೋದು. ಆದರೆ ನಮ್ಮ ಇಷ್ಟ ಅಂತ ಒಂದು ಇರುತ್ತೆ ಅಲ್ವಾ? ಅಲ್ವೇನಮ್ಮಾ?”

“ನಿಮ್ಮ ನಿಮ್ಮ ಇಷ್ಟದಂತೇ ನಡೆದರೆ, ನಮ್ಮ ಇಷ್ಟ ನೆರವೇರುವುದು ಯಾವಾಗ?”

“ರಂಜನಿ ಮದುವೆ ನಿಮ್ಮ ಇಷ್ಟದಂತೆ ನಡೀತಲ್ಲಮ್ಮಾ”

"ಅದಲ್ಲ ಮಾತು, ಅವಳೂ ನಿಮ್ಮ ಹಾಗೇ ಆಡಿದಿದ್ದರೆ.... ನಮ್ಮ ಮಾನ ಎಂದೋ ಬೀದಿ ಪಾಲಾಗಿರುತ್ತಿತ್ತು" ತಾಯಿಯ ಮಾತು ಕೇಳಿ ಶ್ರೀಕಾಂತ ಮೆತ್ತಗಾದ. ವಸುಧಾ ಮನೆ ಬಿಟ್ಟು, ಎಲ್ಲೋ ಇದ್ದು, ಆಸ್ಪತ್ರೆ ಸೇರಿದ್ದ ವಿಷಯ ತಿಳಿದರೆ ತಾಯಿ ಏನಂದುಕೊಳ್ಳುವಳೋ ಎಂದುಕೊಂಡು ಸುಮ್ಮನಾದ. ಅವನ ಮೌನಕ್ಕೆ ತಾಯಿ ಹೆದರಿದಳು.

"ನಾನೀಗ ಬೇಡ ಅಂತ ಅಂದರೆ, ಮನೆಯಲ್ಲಿ ಮತ್ತೆ ರಂಪ ರಾದ್ಧಾಂತದ ಪುನರಾವರ್ತನೆ ಆಗುತ್ತದೆ. ಮತ್ತೆ ನಿಮ್ಮ ಹಠವೇ ಗೆಲ್ಲುತ್ತದೆ. ನಿಮ್ಮ ನಿಮ್ಮ ಹಣೆಯಲ್ಲಿ ಏನು ಬರೆದಿದೆಯೋ ಅದು ನೆರವೇರಿಯೇ ತೀರುತ್ತದೆ. ನಾನೇಕೆ ಬೇಡ ಎಂದು ಹೇಳಿ ಕೆಟ್ಟವಳಾಗಲಿ? ಅದು ಸರಿ. ಮದುವೆಗೆ ಮೊದಲು ಒಂದು ಸಲ ಕರೆದುಕೊಂಡು ಬಂದು ತೋರಿಸ್ತೀಯ ತಾನೇ ಅವಳನ್ನು?"

ತಾಯಿ ಒಪ್ಪಿಕೊಂಡಳು ಅಂತ ತಿಳಿದರೂ, ಅವನಿಗೆ ಹೆಚ್ಚು ಖುಷಿಯಾಗಲಿಲ್ಲ. ಅವಳ ಮಾತಿನಲ್ಲಿ ನೋವನ್ನು ಗುರುತಿಸಿದ್ದ. ಆದರೂ ಈಗ ವಸುಧಾಳನ್ನು ಬಿಡಲಾರ. ಮಾತಿಗೆ ತಪ್ಪಲಾರ.

"ಆಗಲಮ್ಮ, ಅವಳನ್ನು ಒಂದು ದಿನ ಕರೆದುಕೊಂಡು ಬರ್ತೀನಿ. ನನ್ನ ಮದುವೆಗೆ ಆತುರವೇನಿಲ್ಲ. ನಿನ್ನ ಒಪ್ಪಿಗೆ ಬೇಕಾಗಿತ್ತು ಅಷ್ಟೆ. ಮೊದಲು ರಮಳ ಮದುವೆ ಆಗಲಿ...... "

"ಹುಂ" ನಿಟ್ಟುಸಿರು ಬಿಟ್ಟಳು ಪಾರ್ವತಿ. ಅಂತೂ ನಮ್ಮ ನೆಂಟರಿಷ್ಟರು ನಮ್ಮ ಹಿಂದೆ ಆಡಿಕೊಂಡು ನಗುವಂತಾಯ್ತು ನಮ್ಮ ಮನೆ ಸ್ಥಿತಿ.

"ಬಿಡಮ್ಮ...... ನೀನೇ ಹೇಳುವಂತೆ ಎಲ್ಲರ ಮನೆಯ ದೋಸೆಯೂ ತೂತೇ..... ಆದರೆ ನಾವು ಬೇರೆಯವರ ವಿಷಯಗಳನ್ನು ಆಡಿಕೊಂಡು ನಗುವುದು ಬೇಡ. ಅಷ್ಟಾದರೂ ದೊಡ್ಡತನವನ್ನು ಬೆಳೆಸಿಕೊಳ್ಳೋಣ" ಆ ಸಮಯದಲ್ಲಿ ಅವನಿಗೆ ರೂಪಳ ವಿಷಯ ನೆನಪಿಗೆ ಬಂದರೂ, ತಾಯಿಯೊಡನೆ ಆಡಲಿಲ್ಲ.

ಮಹೇಶ ತಾನು ತೆಗೆದಿದ್ದ ಫೋಟೋಗಳನ್ನು ತಂದು ಶ್ರೀಕಾಂತನಿಗೆ ತೋರಿಸಿದ. ಶ್ರೀಕಾಂತ ಸುಮ್ಮನೇ ನೋಡಿದಂತೆ ಮಾಡಿದ. ವಸುಧಾ ತಾನುಟ್ಟಿದ್ದ ಜೀನ್ಸ್ ಪ್ಯಾಂಟ್, ಷರ್ಟ್‌ಗಳಲ್ಲಿ ಚಿಕ್ಕ ಹುಡುಗಿಯಂತೆ ಕಾಣುತ್ತಿದ್ದಳು. ತನ್ನ ಮನೆಯ ನಡೆ ನುಡಿಗಳಿಗೆ ಒಪ್ಪದಿರುವಂಥ ವೇಷಭೂಷಣ. ಅಮ್ಮಂಗೆ ಖಂಡಿತಾ ಬೇಸರವಾಗುವುದೆಂದು ಕೊಂಡ. ಅವನ ಅನುಮಾನವನ್ನು ಗಮನಿಸಿ

ಮಹೇಶ ಕೇಳಿದ.

"ಅಲ್ಲ ಶ್ರೀಕಾಂತ..... ನಿಮ್ಮ ಮನೆಯ ವಿಷಯ ತಿಳಿದೂ, ನೀನೇಕೆ ದಿಢೀರನೇ ಇಂಥ ನಿರ್ಧಾರ ತಗೊಂಡೆ?"

"ವಸುಧಾ ಮುಗ್ಧೆ. ತಂದೆಯ ಧೋರಣೆಯಿಂದ ಅವಳ ಬಾಳು ಹಾಳಾಗುತ್ತಿದ್ದುದನ್ನು ನಾವೇ ನೋಡಿದೆವೆಲ್ಲ...., ಎಷ್ಟು ದಿನ ಇದೇ ರೀತಿ ಕಣ್ಣಾಮುಚ್ಚಾಲೆ ಆಟ ಅಂತ ಬೇಸರವಾಯಿತು. ಆತ ಮಗಳ ಜವಾಬ್ದಾರಿ ಬೇಡ ಅನ್ನೋರಂತೆ ಮಾತಾಡಿದಾಗ, ನಾನು ಏನು ಮಾಡಲು ಸಾಧ್ಯವಿಲ್ಲ ನಿಜ. ಆದರೆ ಮತ್ತೆ ವಸುಧಾ ಅದೇ ದಾರಿ ಹಿಡಿದರೆ ಅದರ ಹೊಣೆಗಾರ ನಾನಾಗುತ್ತಿದ್ದೆ. ಹೌದೋ ಅಲ್ಲವೋ?"

"ಹಾಗೇನೂ ಆಗುತ್ತಿರಲಿಲ್ಲ. ಈಗ ಹೇಗೂ ಅವಳು ಅವರ ಮನೆಗೆ ಹೋದಳಲ್ಲ..... ಕ್ರಮೇಣ ಅಪ್ಪ ಮಗಳಿಗೆ ಸರಿ ಹೋಗಬಹುದು"

"ಸರಿ ಹೋಗದಿದ್ದರೂ ನನಗೀಗ ಬೇಸರವಿಲ್ಲ. ವಸುಧಳ ನಡೆ ನುಡಿ, ವೇಷ ಭೂಷಣಗಳನ್ನು ನಮ್ಮ ಮನೆಗೆ ಹೇಗೆ ಬೇಕೋ ಹಾಗೆ ತಿದ್ದುತ್ತೇನೆ. ಒಂದು ವೇಳೆ ಆಗದಿದ್ದರೆ, ಅವಳಿಗೆ ಸರಿ ಹೊಂದುವಂತಹ ವರನನ್ನು ನಾನೇ ಹುಡುಕಿ ಅವಳ ಮದುವೆ ಮಾಡಿ ಕಳಿಸುತ್ತೇನೆ"

"ಇದೆಲ್ಲ ಏನು ಫಜೀತಿ ಶ್ರೀಕಾಂತ? ಹಾಯಾಗಿರಬಾರದಾ?"

"ನನ್ನ ಪಾಡಿಗೆ ನಾನು ಹಾಯಾಗಿದ್ದೆ. ಇದು ಕಾಲಿಗೆ ತೊಡರಿದ ಬಳ್ಳಿ. ನಾನೇ ಬಿಡಿಸಿಕೊಳ್ಳಬೇಕು ಅಲ್ಲವಾ?"

"ಏನೋಪ್ಪ..... ನಿಂಗಿಂತ ಹೆಚ್ಚಿನ ಆತಂಕ ನನಗೆ. ತಗೋ ಈ ಫೋಟೋಗಳನ್ನು..... " ಎಂದು ಹೇಳಿ ಕವರನ್ನು ಅಲ್ಲಿಟ್ಟು ತಾನು ತನ್ನ ಸ್ಟುಡಿಯೋಗೆ ಹೊರಟುಹೋದ. ಶ್ರೀಕಾಂತ ವಸುಧಾಗೆ ಫೋನು ಮಾಡಿ ಅವಳ ಕ್ಷೇಮವನ್ನು ವಿಚಾರಿಸಿ, ಅವಳಗೆ ಅಂಗಡಿಗೆ ಬರುವಂತೆ ಹೇಳಿದ. ಕೆಲವೇ ಹೊತ್ತಿನಲ್ಲಿ ಅವಳು ಅಂಗಡಿಯ ಮುಂದೆ ಹಾಜರಾದಳು. ಜತೆಗೆ ಕಾವೇರಮ್ಮನೂ ಇದ್ದರು.

"ಇದೇ ನನ್ನ ಅಂಗಡಿ. ಇಲ್ಲಿ ನಾನು ಒಬ್ಬನೇ. ನೀನು ಬೇಕಾದರೆ ಬಂದು, ನನಗೆ ಸಹಾಯ ಮಾಡಬಹುದು" ಎಂದ ಮುಗುಳ್ನಗುತ್ತಾ.

"ಓ.ಕೇ. ಬರ್ತೀನಿ" ಎಂದಳು ಖುಷಿಯಿಂದ.

"ದಿನಾ ಬರಲೇ ಬೇಕು ಅಂತೇನಿಲ್ಲ. ನಿನಗೆ ಬೇಕು ಅನ್ನಿಸಿದಾಗ ಬರಬಹುದು" ಅವಳು ಟೇಬಲ್ ಮೇಲಿದ್ದ ಫೋಟೋಗಳನ್ನು ನೋಡುತ್ತಿದ್ದಳು.

ಇವನು ಅವಳನ್ನೇ ನೋಡುತ್ತಿದ್ದ...... ಇವಳನ್ನು ಒಂದು ಮಾತು ಕೇಳದೇ ಇವಳನ್ನೇ ಮದುವೆಯಾಗುವುದಾಗಿ ಹೇಳಿಬಿಟ್ಟೆನಲ್ಲಾ...... ಈ ಹುಡುಗಿಯ ಮನಸ್ಸಿನಲ್ಲಿ ಏನಿದೆಯೋ ಅಂತ ಚಿಂತಿಸುತ್ತಿದ್ದ.

"ಥೂ! ಯಾವ ಫೋಟೋನೂ ಚೆನ್ನಾಗಿಲ್ಲ" ಎನ್ನುತ್ತಾ ಅವಳು ಅವನ ಕಡೆ ತಿರುಗಿದಳು. ಅವನ ದೃಷ್ಟಿ ತನ್ನ ಮೇಲೇ ಇರುವುದನ್ನು ಗಮನಿಸಿ ಅವಳಿಗೆ ಮುಜುಗರವಾಯಿತು.

"ಏನು ಹಾಗೆ ನೋಡ್ತಾ ಇದೀರಿ ಶ್ರೀ...... ನಾನೇನು ತಪ್ಪು ಮಾಡಿದೆ?" ಅವಳು ಪೆದ್ದಳಂತೆ ಕೇಳಿದಾಗ ಅವನಿಗೆ ನಗು ಬಂತು.

"ತಪ್ಪು ನಿಂದಲ್ಲ ವಸುಧಾ..... ನಂದು" ಎಂದು ಹೇಳಹೊರಟವನು ಮಾತು ಬದಲಿಸಿದ.

"ಫೋಟೋಗಳು ಚೆನ್ನಾಗಿಲ್ಲ ಅಂತಂದೆ ಅಲ್ವಾ..... ಇಲ್ಲೇ ಹತ್ತಿರದಲ್ಲಿ ಮಹೇಶನ ಸ್ಟುಡಿಯೋ ಇದೆ. ಒಂದೆರಡು ಚೆನ್ನಾದ ಫೋಟೋ ತೆಗೆಸಿಕೋ. ನನಗೆ ಬೇಕು" ಎನ್ನುತ್ತಾ ಮಹೇಶನಿಗೆ ಫೋನು ಮಾಡಿದ.

"ನಿಮಗ್ಯಾಕೆ ನನ್ನ ಫೋಟೋ?"

"ನಿಧಾನವಾಗಿ ನಿನಗೇ ಗೊತ್ತಾಗುತ್ತೆ"

"ನಂಗೊತ್ತು ನಾನೇನಾದರೂ ಓಡಿ ಹೋಗಿ ತಪ್ಪಿಸಿಕೊಂಡರೆ, ಪೇಪರ್ರಿನಲ್ಲಿ ಹಾಕಿಸಿ ಹುಡುಕಿಸೋಕೆ ಅಲ್ವಾ?" ಶ್ರೀಕಾಂತ ಜೋರಾಗಿ ನಕ್ಕ. ಏನನ್ನು ಹೇಳಲಿಲ್ಲ. ಅಷ್ಟರಲ್ಲಿ ಮಹೇಶ ಬಂದ. ಅವನನ್ನು ನೋಡಿ, ವಸುಧಾಳೇ ಹಾಯ್ ಎಂದು ಕೈ ಬೀಸಿದಳು.

"ಮಹೇಶ, ಇವಳು ನಿನ್ನ ಸ್ಟುಡಿಯೋ ನೋಡಬೇಕಂತೆ.... ಹಾಗೇ ಒಂದೆರಡು ಚೆನ್ನಾಗಿರುವ ಫೋಟೋ ತೆಗೆಸಿಕೊಳ್ಳಬೇಕಂತೆ...... "

"ನೀವೇ ಹೇಳಿದ್ದು....... ನನಗೇನೂ ಬೇಡ"

"ನಂಗೊತ್ತು ಅವನಿಗೇ ಬೇಕು ಫೋಟೋ, ಬನ್ನಿ" ಎನ್ನುತ್ತಾ ಅವಳನ್ನು ಕರೆದೊಯ್ದ. ಕಾವೇರಮ್ಮ ಇಲ್ಲೇ ಅಂಗಡಿಯಲ್ಲಿ ಉಳಿದಳು.

ನಿಂತಿದ್ದ ಗಿರಾಕಿಗಳಿಗೆ ಬೇಕಾದುದನ್ನು ಕೊಟ್ಟು ಕಾವೇರಮ್ಮನವರಿಗೆ ಹೇಳಿದ.

"ನೆನ್ನೆ ನಾನು ಅವರ ಮನೆಗೆ ಬಂದಿದ್ದಾಗ, ದಿಢೀರನೇ ಒಂದು ನಿರ್ಧಾರ ತಗೊಂಡೆ. ನೀವೂ ಅಲ್ಲೇ ಇದ್ದಿರಿ. ನಿಮಗೂ ತಿಳಿದಿದೆ"

"ಹೌದು ಎನ್ನುವಂತೆ ತಲೆಯಾಡಿಸಿದಳು."

"ವಸುಧಾ, ನನಗಿಂತ ತುಂಬಾ ಚಿಕ್ಕವಳು. ಏನೂ ಅರಿಯದ ಮುಗ್ಧೆ ಅಂತ ನನಗೂ ಗೊತ್ತು. ಆದರೆ ಅವಳ ತಂದೆ ಹಾಗೆ ಜವಾಬ್ದಾರಿ ಇಲ್ಲದವರಂತೆ ಮಾತಾಡಿದಾಗ, ಇದ್ದಕ್ಕಿದ್ದಂತೆ ತೆಗೆದುಕೊಂಡ ನಿರ್ಧಾರ ಇದು. ಅವಳಿಗೆ ಆಸರೆ ಬೇಕು. ಅವಳನ್ನು ಪ್ರೀತಿಸುವವರು ಬೇಕು. ಅವಳ ತಂದೆ ಆಸರೆಯನ್ನಾಗಲೀ, ಪ್ರೀತಿಯನ್ನಾಗಲೀ ನೀಡದಿರುವಾಗ ಅವಳು ಎಲ್ಲಿಗೆ ಹೋಗುತ್ತಾಳೆ? ಮತ್ತೆ ಹಿಂದಿನ ಬದುಕನ್ನೇ ಆರಿಸಿಕೊಳ್ಳುತ್ತಾಳೆ ಅಲ್ಲವೇ?"

ಹೌದು ಎನ್ನುವಂತೆ ಕತ್ತಾಡಿಸಿದಳು ಕಾವೇರಮ್ಮ.

"ಈಗ ವಸುಧಾಳ ಮನಸ್ಸಿನಲ್ಲಿ ಏನಿದೆ ಅಂತ ನೀವು ತಿಳಿದುಕೊಳ್ಳಬೇಕು. ಅವಳು ಮತ್ತೆ ಕಾಲೇಜಿಗೆ ಸೇರಿಕೊಂಡು ಓದನ್ನು ಮುಂದುವರೆಸಲು ಇಚ್ಛಿಸಿದರೆ, ಓದಿಸುತ್ತೀನಿ, ಕೆಲಸಕ್ಕೆ ಸೇರಿಕೊಂಡು ತನ್ನ ಪಾಡಿಗೆ ತಾನು ಹಾಯಾಗಿರಲು ಬಯಸಿದರೆ, ಅದಕ್ಕೂ ಸಹಾಯ ಮಾಡ್ತೀನಿ. ಅಥವಾ ಮದುವೆಯಾಗಿ ಸಂಸಾರ ಮಾಡುವ ಬಯಕೆ ಇದ್ದರೆ, ನಾನು ಅವಳನ್ನು ಮದುವೆಯಾಗ್ತೀನಿ. ಬಲವಂತವಾಗಿ, ಅವಳ ಇಷ್ಟಕ್ಕೆ ವಿರುದ್ಧವಾಗಿ ನಾನು ಅವಳನ್ನು ಮದುವೆಯಾಗುವುದಿಲ್ಲ. ನೀವು ಅವಳ ತಾಯಿಯಂತೆ. ಅವಳ ಬೇಕು ಬೇಡಗಳನ್ನು ಗಮನಿಸಿ, ನನಗೆ ತಿಳಿಸಿ. ನಾನು ಸಹಾಯ ಮಾಡ್ತೀನಿ. ಹಾಗೇ ಇನ್ನೊಂದು ವಿಷಯ. ಅವಳಿಗೆ ಮನೆ ಕೆಲಸಗಳನ್ನು ಕಲಿಸಿಕೊಡಿ. ನಮ್ಮ ಮನೆಯಲ್ಲಿ...... ನಮ್ಮ ತಾಯಿ ಸ್ವಲ್ಪ ಹಳೇ ಸಂಪ್ರದಾಯದವರು..... ಉಡಿಗೆ ತೊಡಿಗೆ ಸಹ ಬದಲಾಗಬಹುದು. ಇದೆಲ್ಲ ಅವಳಿಗಿಷ್ಟವಿದ್ದರೆ ಮಾತ್ರ. ಬಲವಂತ ಮಾತ್ರ ಮಾಡಬೇಡಿ"

"ಆಗಲಿ ಪ್ರಯತ್ನಪಡ್ತೀನಿ. ಆದರೆ, ಯಾವುದೇ ಕಾರಣಕ್ಕೂ ನೀವು ಈ ಹುಡುಗಿಯ ಕೈಯ ಬಿಡಬೇಡೀಪ್ಪಾ. ನಿಮ್ಮಿಂದ ಅವಳು ಇಷ್ಟು ಸುಧಾರಿಸಿದ್ದಾಳೆ. ಇಲ್ಲದಿದ್ದರೆ ಅವಳ ಗತಿ ಏನಾಗುತ್ತಿತ್ತೋ? ನಾನು ನಮ್ಮ ರಾಯರಿಗೂ ಇದೇ ಮಾತನ್ನು ಹೇಳಿದೆ"

ಅವರೇನಂದರು ಎಂದು ಕೇಳುವ ಗೋಜಿಗೆ ಹೋಗಲಿಲ್ಲ.

"ಆಗ ಈಗ ಅವಳನ್ನು ನಮ್ಮ ಮನೆಗೆ ಕರೆದುಕೊಂಡು ಬನ್ನಿ. ಏಕೆಂದರೆ ನಮ್ಮ ಸುತ್ತಮುತ್ತ ನಮ್ಮ ಮನೆ, ಮನೆಯವರ ಪರಿಚಯ ಅವಳಿಗಾಗಬೇಕು. ದಿಢೀರನೇ ಅವಳು ಗಾಬರಿಗೊಳ್ಳಬಾರದು"

"ಆಗಲಿ ಸಾರ್.... ಆದಷ್ಟು ಬೇಗ ಎಲ್ಲಾ ಸರಿ ಹೋದರೆ ಸಾಕಾಗಿದೆ.

ರಾಯರ ತಂಗಿ ಅಮೆರಿಕಾದಿಂದ ವಾಪಸ್ಸು ಬರುತ್ತಿದ್ದಾರೆ. ನಂತರ ನಾನು ಅಲ್ಲಿಗೆ ಹೋಗಬೇಕು..... "

ಗಿರಾಕಿಗಳು ಬಂದುದರಿಂದ ಮಾತು ನಿಲ್ಲಿಸಿದರು. ಮಹೇಶ ವಸುಧಾಳನ್ನು ಕರೆದುಕೊಂಡು ಬಂದ.

"ವಸುಧಾ ಇನ್ನು ನೀನು ಮನೆಗೆ ಹೋಗು..... ಊಟ ಮಾಡಿ ರೆಸ್ಟ್ ತಗೋ"

"ನನಗೆ ಹೋಗೋಕೇ ಇಷ್ಟವಿಲ್ಲ" ಅವಳು ಮೂತಿ ಉಬ್ಬಿಸಿ ನುಡಿದಾಗ ಎಲ್ಲರೂ ನಕ್ಕರು. ಅವಳ ಮುಖ ಕೆಂಪಾಯಿತು. ಅವಳು ಅಲ್ಲಿದ್ದ, ತಾನು ಶ್ರೀಕಾಂತ ಜತೆಯಲ್ಲಿ ನಿಂತಿರುವ ಫೋಟೋ ತೆಗೆದಿಟ್ಟುಕೊಂಡಳು. ಶ್ರೀಕಾಂತ ಅದನ್ನು ಗಮನಿಸಿದರೂ ಗಮನಿಸದವನಂತಿದ್ದ. ವಸುಧಾ ಕಾವೇರಮ್ಮನೊಂದಿಗೆ ಹೊರಟು ಹೋದಳು. ಮಹೇಶನೂ ಹೊರಟುಹೋದ. ಶ್ರೀಕಾಂತ ವಸುಧಾಳ ಒಂದು ಫೋಟೋ ಕೈಗೆತ್ತಿಕೊಂಡು ಪದೇ ಪದೇ ನೋಡಿದ.

* * * *

ರಮಾ, ತಾಯಿಗೆ ಹುಷಾರಿಲ್ಲದ ನೆವಮಾಡಿಕೊಂಡು, ತಾಯಿಯ ಮನೆಯಲ್ಲೇ ಇದ್ದಳು. ಶ್ರೀಕಾಂತ ಬಿಡುವಿದ್ದಾಗ, ತಾನೇ ಹೋಗಿ ವಿಶೂನ ತನ್ನ ಮನೆಗೆ ಕರೆತಂದು ಆಡಿಸುತ್ತಿದ್ದ. ನಂತರ ತಾನೇ ಹೋಗಿ ವಾಪಸ್ಸು ಬಿಟ್ಟು ಬರುತ್ತಿದ್ದ. ಏಕೋ ಏನೋ ರಮಾ ಕೆಲಸಕ್ಕೆ ಹೋಗುವುದನ್ನು ನಿಲ್ಲಿಸಿಬಿಟ್ಟಿದ್ದಳು. ಶ್ರೀಕಾಂತ ನಾಲ್ಕಾರು ಸಾರಿ ಬಲವಂತ ಮಾಡಿದ ಮೇಲೆ ಹೇಳಿದ್ದಳು.

"ನನ್ನ ಸಹೋದ್ಯೋಗಿ ಅರವಿಂದ ಅಂತ ಒಬ್ಬ ಇದಾನೆ. ಅವನು ನಮ್ಮ ಜನವಲ್ಲ. ಅವನು ನನ್ನನ್ನು ಮದುವೆಯಾಗಲು ಬಯಸಿದ್ದಾನೆ. ಆದರೆ ನಾನು ಒಪ್ಪಲಿಲ್ಲ. ಅವನು ಬೇರೆಯವರಿಂದ ನನಗೆ ಮತ್ತೆ ಮತ್ತೆ ಹೇಳಿಸಿದ. ಅದಕ್ಕೇ ನನಗೆ ಕೆಲಸಕ್ಕೆ ಹೋಗಲು ಬೇಸರವಾಯಿತು."

"ನನಗೆ ಮುಂಚೇನೇ ಏಕೆ ಹೇಳಲಿಲ್ಲ ನೀನು? ನಾನು ಸರಿಯಾಗಿ ಏನೂಂತ ವಿಚಾರಿಸುತ್ತಿದ್ದೆ"

"ಹೋಗಲಿಬಿಡು ಶ್ರೀಕಾಂತ. ನನಗೋಸ್ಕರ ಎಷ್ಟೂಂತ ಒದ್ದಾಡ್ತೀಯಾ....?"

"ರಮಾ..... ಏನು ನಿನ್ನ ಮಾತು? ನಾನು ನಿನಗೆ ಅಷ್ಟು ದೂರವಾಗಿ ಬಿಟ್ಟೆನಾ?"

"ನಾನು ಇಟ್ಟುಕೊಂಡ ಆಸೆಗಳೇ ಬೇರೆ. ಯಾವುದೂ ನಡೆಯದಿರುವಾಗ

ನನಗೆ ಎಲ್ಲಾ ಬೇರೆಯಾಗಿಯೇ, ದೂರವಾಗಿಯೇ ಕಾಣುತ್ತದೆ"

ಶ್ರೀಕಾಂತ ಮೌನಿಯಾದ.

"ನಾನು ಪ್ರಕಾಶನ್ನ ಪ್ರೀತಿಸಿ, ಎಲ್ಲರನ್ನು ಬಲವಂತದಿಂದ ಒಪ್ಪಿಸಿ ಮದುವೆಯಾದೆ. ಆದರೆ ಅವನನ್ನು ಕಳೆದುಕೊಂಡೆ. ನೀನು ಹಿಂದಿನಂತೆ ಪ್ರೀತಿಸುತ್ತಿದೀಯ ಎನ್ನುವ ಭ್ರಮೆಯಿಂದ, ನಾಚಿಕೆಯನ್ನು ಬಿಟ್ಟು ನಾನೇ ನಿನ್ನನ್ನು ಮದುವೆಯಾಗುವಂತೆ ಕೇಳಿದ. ಇದರಿಂದ ನಿನ್ನ ಮನಸ್ಸಿನಲ್ಲಿ ನನ್ನ ಬಗ್ಗೆ ಏನನ್ನಿಸಿದೆಯೋ? ತಿರಸ್ಕಾರ ಮೂಡಿರಬಹುದು ಅಲ್ವಾ? ಹೆದರಿಕೆ ಆಗಿರಬಹುದು ಅಲ್ವಾ? ಇನ್ನು ನಾನು ಮೊದಲಿನಂತೆ ಸ್ನೇಹದಿಂದ ಇರಲು ಆಗೊಲ್ಲವೇನೋ ಅಂತನ್ನಿಸಿದಾಗ, ನಾನು ದೂರ ಇರುವುದೇ ಸರಿಯೇನೋ ಅಂತ ಅನ್ನಿಸ್ತಿದೆ" ಅವಳು ಕತ್ತು ಬಗ್ಗಿಸಿ ನುಡಿದಾಗ ಅವನಿಗೂ ಖೇದವೆನಿಸಿತು.

"ಏಯ್ ರಮಾ..... ನೀನೇ ಏನೇನೋ ಕಲ್ಪಿಸಿಕೊಂಡು ಕೊರಗಬೇಡ. ನಾನು ನೀನು ಯಾವತ್ತೂ ಸ್ನೇಹಿತರೇ. ಸ್ನೇಹ ಎಂದಿಗೂ ಕಡಿಮೆಯಾಗುವುದಿಲ್ಲ. ನಿನ್ನ ಮನಸ್ಸಿನಲ್ಲಿದ್ದುದನ್ನು ನಿರ್ಭಯವಾಗಿ ಸ್ನೇಹಿತರೊಡನೆ ಮಾತ್ರ ಹೇಳಲು ಸಾಧ್ಯ ಅಲ್ಲವಾ? ಅದನ್ನು ನೀನು ಮಾಡಿದೆ. ಅದಕ್ಕೆ ಇಷ್ಟು ಹೀನಾಯವೇಕೆ? ನಡೀ..... ಈಗಲೇ ನಮ್ಮ ಮನೆಗೆ ಹೊರಡು. ನೀನಿಲ್ಲದೇ. ವಿಶೂ ಇಲ್ಲದೇ ಮನೆ ಬಿಕೋ ಅನ್ನಿಸ್ತಿದೆ. ಅಮ್ಮನಿಗೂ ಒಬ್ಬಳಿಗೇ ಇರಲು ಬೇಜಾರಾಗುತ್ತೆ ಅಲ್ವಾ?"

"ಅಮ್ಮನಿಗೆ ಈ ವಿಷಯ ತಿಳಿದರೆ, ಅವರಿಗೆ ಎಷ್ಟು ಕೋಪ ಬರಬಹುದು ಅಲ್ವಾ?"

"ನೀನೇಕೆ ಹೇಳಬೇಕು ಅದನ್ನೆಲ್ಲ, ನಾನಂತೂ ಹೇಳುವುದಿಲ್ಲ. ಇನ್ನೊಂದೆರಡು ದಿನದಲ್ಲಿ ಪೇಪರಿನ ಪ್ರಕಟಣೆ ನೋಡಿ, ಗಂಡುಗಳು ನಮ್ಮ ಮನೆಗೆ ಬರಬಹುದು. ಅದರಿಂದ ನೀನು ಅಲ್ಲಿರುವುದೇ ಸರಿ"

"ಆಗಲಿ, ಇನ್ನೆರಡು ದಿನಗಳ ನಂತರ ಬರ್ತೀನಿ" ಎಂದಳು.

ಪ್ರಕಟಣೆಯನ್ನು ನೋಡಿ, ಹತ್ತಾರು ಕಡೆಯವರು, ಶ್ರೀಕಾಂತನ ಮನೆಗೆ ಫೋನು ಮಾಡಿದ್ದರು. ಶ್ರೀಕಾಂತ ಅವರ ವಿವರಗಳನ್ನು ತಿಳಿದುಕೊಂಡು, ತಮ್ಮ ಮನೆಗೆ ಬರುವಂತೆ ತಿಳಿಸಿದ್ದ.

ಅವರಲ್ಲಿ ಕೆಲವರಿಗೆ ರಮಳಿಗೆ ಎಷ್ಟು ಸಂಬಳ ಬರುತ್ತದೆ. ಮೊದಲ ಗಂಡನ ಕಡೆಯಿಂದ ಅವಳಿಗೆ ಎಷ್ಟು ಹಣ ಬಂತು? ಅದರಲ್ಲಿ ಅವಳ ಪಾಲು ಎಷ್ಟು ಅಂತ ತಿಳಿದುಕೊಳ್ಳುವ ಕುತೂಹಲ. ಇನ್ನು ಕೆಲವರಿಗೆ

ರಮಾ ತನ್ನ ಮಗುವನ್ನು ಬಿಟ್ಟು ಬರಲಿ ಎನ್ನುವ ಆಸೆ. ಒಂದಿಬ್ಬರಿಗೆ ಆ ಮಗುವಿಗೆ, ತಂದೆಯ ಆಸ್ತಿಯಲ್ಲಿ ತಾತನ ಆಸ್ತಿಯಲ್ಲಿ ಎಷ್ಟು ಹಕ್ಕು ಇದೆ ಅಂತ ತಿಳಿದುಕೊಳ್ಳುವ ಕುತೂಹಲ. ಇನ್ನು ಒಬ್ಬನಂತೂ, ಮದುವೆಯನ್ನು ಹೇಗೆ ಎಲ್ಲಿ? ಯಾರು ಮಾಡಿಕೊಡುತ್ತಾರೆ ಎಂದು ತಿಳಿದುಕೊಳ್ಳುವ ಆಸೆ. ಶ್ರೀಕಾಂತನಿಗೆ ಬೇಸರವಾಗತೊಡಗಿತ್ತು. ಪ್ರಪಂಚದ ಜನರು, ಎಷ್ಟು ಕಷ್ಟಗಳನ್ನು ಕಂಡಿರುತ್ತಾರೆ? ಕೇಳಿರುತ್ತಾರೆ? ಆದರೂ ಆಸೆ ಮಾತ್ರ ಕಡಿಮೆಯಾಗಿಲ್ಲ. ದುರಾಸೆ ಹೆಚ್ಚಿದೆ. ಇವರಲ್ಲಿ ಯಾರೂ ರಮಾಳ ಮೇಲಿನ ಸಹಾನುಭೂತಿಯಿಂದಾಗಲೀ ಅಥವಾ ಅವಳಿಗೆ ಹೊಸ ಬಾಳನ್ನು ಕೊಡುವ ಆದರ್ಶದಿಂದಾಗಲೀ ಮುಂದೆ ಬಂದವರಲ್ಲ ಅಂತನ್ನಿಸಿದಾಗ, ಅವರ ವ್ಯಾಪಾರಿ ಮನೋಭಾವಕ್ಕೆ ಹೇಸಿದ್ದ.

ಆದರೆ ರಮಳೊಂದಿಗೆ ಯಾವ ವಿಷಯವನ್ನು ತಿಳಿಸಲಿಲ್ಲ. ಅವಳೂ ಕೇಳಲಿಲ್ಲ. ತಾಯಿ ಮಾತ್ರ ನೊಂದುಕೊಂಡು ಹೇಳಿದ್ದಳು.

"ಇದೆಲ್ಲ ಏನೋ ಶ್ರೀಕಾಂತು..... ಎಷ್ಟೊಂದು ಜನ ಹುಡುಗರು ಬಂದಿದ್ರು..... ಯಾರಿಗೂ ರಮಾ ಒಪ್ಪಿಗೆಯಾಗಲಿಲ್ಲಾ? ಅದಕ್ಕೆ ನಾನು ಹೇಳಿದ್ದು ಇದೆಲ್ಲ ಸುಲಭವಲ್ಲ ಅಂತ." ನಾವು ನಮ್ಮ ರಂಜಿನಿಯ ಮದುವೆಗೂ ಇಷ್ಟು ಕಷ್ಟಪಡಲಿಲ್ಲ.

"ಇನ್ಯಾರೂ ಬರೊಲ್ಲ ಅಂತ ಅಂದ್ಕೋಬೇಡಮ್ಮ. ಇವರಲ್ಲದಿದ್ದರೆ ಇನ್ನೊಬ್ಬರು. ನೀನು ರಮಳ ಹತ್ತಿರ ಏನನ್ನು ಕೇಳಬೇಡ."

"ಸರಿ. ಸದಾ ನನಗೆ ತಿಳುವಳಿಕೆ ಹೇಳೋಕೆ ಸರಿ ನೀವೆಲ್ಲಾ..... ಸೊಸೆಗೆ ಗಂಡು ಹುಡುಕ್ತಿದೀರಂತೆ ಅಂತ ಯಾರಾದರೂ ಕೇಳಿದರೆ ಎಷ್ಟು ನಾಚಿಕೆಗೇಡು ಅಲ್ವಾ?"

"ಸಾಕಮ್ಮ ಸುಮ್ಮನಿರು. ಒಂದು ವೇಳೆ ರಮಾ ಸತ್ತು ಹೋಗಿದ್ದರೆ, ಇಷ್ಟು ಹೊತ್ತಿಗೆ ಪ್ರಕಾಶನಿಗೆ ಇನ್ನೊಂದು ಮದುವೆಯಾಗಿ ಇನ್ನೊಂದು ಮಗು ಇರುತ್ತಿತ್ತು. ಅದು ಸರಿ ಅನ್ನಿಸುವ ನಿನಗೆ ಇದು ತಪ್ಪು ಅಂತ ಯಾಕೆ ಅನ್ನಿಸುತ್ತೆ?"

"ಏನೋ ನಾವು ಬೆಳೆದುಬಂದ ರೀತಿಯೇ ಅದು"

"ಅದನ್ನು ಬದಲಾಯಿಸಿಕೊಳ್ಳ ಬೇಕಮ್ಮ..... ಯಾವುದೋ ಹಳೇ ರೀತಿಯಲ್ಲೇ ನಾವು ಬದುಕಲು ಸಾಧ್ಯವಿಲ್ಲ"

"ಯಾವ ಮಾತನ್ನಾಡಿದರೂ, ನನಗೆ ಉಪದೇಶ ಮಾಡ್ತೀಯಾ? ನೀವೆಲ್ಲಾ

ಸಮಾಜ ಉದ್ಧಾರಕರು, ಸಮಾಜ ಸೇವಕರು. ನಾನು ಏನೂ ತಿಳಿಯದ ಹಳ್ಳಿ ಗುಗ್ಗು ಅಲ್ವಾ?"

"ಇಲ್ಲಮ್ಮ. ನೀನು ಜಾಣೆ..... ತಿಳುವಳಿಕೆಯುಳ್ಳವಳು. ಆದ್ದರಿಂದಲೇ ನಿನಗೆ ಎಲ್ಲಾ ತಿಳಿಸಿ, ನಿನ್ನ ಒಪ್ಪಿಗೆ ಕೇಳ್ತೀವಿ. ನೀನು ಹಳ್ಳಿ ಗುಗ್ಗು ಅಂತ ಅನ್ನಿಸಿದ್ದರೆ ನಿನಗೆ ಏನನ್ನೂ ತಿಳಿಸುತ್ತಲೇ ಇರಲಿಲ್ಲ ನಾವು......" ಅವನು ತಾಯಿಯ ಕಡೆ ನೋಡಿ ನಕ್ಕಾಗ ಅವಳು ನಗಲಿಲ್ಲ.

"ಏನು ಮಕ್ಕಳೋ....... ಇವರಿಬ್ಬರೂ ಗಂಡು ಮಕ್ಕಳಾಗಿ ಹುಟ್ಟುವ ಬದಲು ಹೆಣ್ಣು ಮಕ್ಕಳಾಗಿ ಹುಟ್ಟಿದ್ದರೆ, ಮದುವೆ ಮಾಡಿ ಗಂಡನ ಮನೆಗೆ ಕಳಿಸಿ ಹಾಯಾಗಿರಬಹುದಾಗಿತ್ತು. ಈ ತಿಸ್ರಾಟಗಳಿರುತ್ತಿರಲಿಲ್ಲ" ಅಂತೆನಿಸಿತ್ತು ಆಕೆಗೆ.

ಮತ್ತೆರಡು ದಿನಗಳು ಕಳೆದ ನಂತರ, ಒಬ್ಬ ವರ ಶ್ರೀಕಾಂತನ ಅಂಗಡಿಗೆ ಬಂದಿದ್ದ. ಆಗ ಅಲ್ಲಿ ವಸುಧಾಳೂ ಇದ್ದಳು. ಮಹೇಶನೂ ಇದ್ದ ಅವನು ಅಮೇರಿಕಾದಿಂದ ಬಂದಿದ್ದವನು ಮತ್ತೆ ಹತ್ತು ಹದಿನೈದು ದಿನಗಳಲ್ಲಿ ವಾಪಸ್ಸು ಹೋಗುವವನಿದ್ದನು. ಅವನಿಗೆ ಮೊದಲ ಮದುವೆಯಾದ ಕೆಲವೇ ವರ್ಷಗಳಲ್ಲಿ ಡೈವೋರ್ಸ್ ಆಗಿದ್ದಿತು. ಅವನ ಹೆಸರು ಅಶೋಕ.

ಶ್ರೀಕಾಂತ ರಮಳ ವಿವರಗಳನ್ನೆಲ್ಲ ತಿಳಿಸಿದ. ಅಶೋಕ ಆಗಾಗ್ಗೆ ವಸುಧಾಳ ಕಡೆ ನೋಡುತ್ತಿದ್ದುದು ಶ್ರೀಕಾಂತನಿಗೆ ಸರಿ ಎನಿಸಲಿಲ್ಲ. ಇವಳನ್ನೇ ರಮಾ ಎಂದು ಭಾವಿಸಿದ್ದಾನೋ ಏನೋ ಎಂದುಕೊಂಡು, ಮಹೇಶನನ್ನು ವಸುಧಾಳನ್ನು ಪರಿಚಯಿಸಿಕೊಟ್ಟು, ರಮಳಿಗೆ ತಕ್ಷಣವೇ ಬರುವಂತೆ ಫೋನು ಮಾಡಿದ. ಕೆಲವೇ ಸಮಯದಲ್ಲಿ ರಮಾ ವಿಶೂನೊಡನೆ ಅಲ್ಲಿಗೆ ಬಂದಳು. ಶ್ರೀಕಾಂತ ಪರಸ್ಪರ ಪರಿಚಯ ಮಾಡಿಕೊಟ್ಟ. ಆ ವರನಿಗೆ ರಮಾ ಮೆಚ್ಚುಗೆಯಾದಳು. ಆದರೆ ರಮಳೇ ಅನುಮಾನಿಸುವಂತೆ ತೋರಿತ್ತು. ಮಧ್ಯೆ ಮಧ್ಯೆ ಗಿರಾಕಿಗಳು ಬರುತ್ತಿದ್ದುದರಿಂದ ಶ್ರೀಕಾಂತ ಮಹೇಶನಿಗೆ ಹೇಳಿದ.

"ಇವರನ್ನೆಲ್ಲ ನಮ್ಮ ಮನೆಗೆ ಕರೆದುಕೊಂಡು ಹೋಗು. ನಾನು ಸ್ವಲ್ಪ ಹೊತ್ತಿನಲ್ಲೇ ಬಂದುಬಿಡ್ತೀನಿ" ಮಹೇಶ ರಮಳ ಗೊಂದಲವನ್ನು ಗಮನಿಸಿದ್ದ.

"ನಮ್ಮ ಮನೆಗೆ ಕರೆದುಕೊಂಡು ಹೋಗ್ತೀನಿ. ಅಲ್ಲೇ ಮಾತನಾಡಬಹುದಲ್ಲ" ಎಂದ. ಶ್ರೀಕಾಂತ ಸರಿ ಎಂದ. ಮಹೇಶ ಒಂದು ಆಟೋ ಗೊತ್ತು ಮಾಡಿ, ರಮಾ ವಸುಧಾ ಅದರಲ್ಲಿ ಬರುವಂತೆ ತಿಳಿಸಿ, ತಾನು ಅಶೋಕನನ್ನು ಕೂರಿಸಿಕೊಂಡು ಹೊರಟ. ಕೆಲವೇ ಸಮಯದ ನಂತರ ಶ್ರೀಕಾಂತನೂ

ಬಂದು ಸೇರಿಕೊಂಡ.

ರಮಾ, ಅಶೋಕ ಒಂದೆಡೆ ಕುಳಿತು ಮಾತನಾಡುತ್ತಿದ್ದರು. ವಸುಧಾ ವಿಶೂನ ಕೂರಿಸಿಕೊಂಡು ಏನೋ ಆಟ ಆಡುತ್ತಿದ್ದಳು. ಮಹೇಶ ಒಳಗೆ ಕಾಫಿ ತಯಾರಿಸುತ್ತಿದ್ದ. ಶ್ರೀಕಾಂತ ಕಿಟಕಿಯ ಬಳಿ ನಿಂತು ಹೊರಗೆ ನೋಡುತ್ತಿದ್ದ. ಆಗಾಗ್ಗೆ ತಿರುಗಿ ರಮಳನ್ನು ವಸುಧಾಳನ್ನು ನೋಡುತ್ತಿದ್ದ.

ಕಾಫಿ, ಬಿಸ್ಕತ್ತು, ಬಾಳೆಹಣ್ಣಿನ ಉಪಹಾರ ಮುಗಿದ ನಂತರ, ಅಶೋಕ ಎಲ್ಲರಿಗೂ ಹೇಳಿ, ತಾನು ಮತ್ತೆ ಬರುವುದಾಗಿ ತಿಳಿಸಿ ಹೊರಟುಹೋದ. ಅವನು ಅತ್ತ ಹೋದ ಕೂಡಲೇ ಎಲ್ಲರೂ ರಮಳ ಕಡೆ ತಿರುಗಿದರು. ರಮಳೇ ನುಡಿದಳು.

"ಅವನಿಗೆ ಒಪ್ಪಿಗೆ ಇದೆ. ಕೆಲವು ಕಂಡೀಷನ್‌ಗಳಿವೆ. ಆದರೆ ನನಗೇ ಒಪ್ಪಿಗೆಯಾಗಲಿಲ್ಲ" ಎಂದಳು.

ಯಾಕೆ ಎಂದು ಶ್ರೀಕಾಂತ ಕೇಳಲಿಲ್ಲ. ಆದರೆ ತಟ್ಟನೆ ನುಡಿದವಳು ವಸುಧಾ.

"ಈ ವಿಶೂನ ಬಿಟ್ಟು ಅವನ್ಯಾರನ್ನೋ ಮದುವೆಯಾಗಿ ಅಮೆರಿಕಾಕ್ಕೆ ಹೋಗುವ ಮನಸ್ಸಾದರೂ ನಿಮಗೆ ಹೇಗೆ ಬರುತ್ತೆ? ವಿಶೂ ಅನಾಥನಾಗಿಬಿಡ್ತಾನೆ. ನೀವು ಒಪ್ಪದೇ ಇದ್ದುದು ಒಳ್ಳೇದಾಯ್ತು" ಎಂದಳು.

ಮೂವರೂ ಬೆರಗಾಗಿ ಅವಳನ್ನೇ ನೋಡಿದರು. ಅವಳು ಹಾಗೇಕೆ ನುಡಿದಳೆಂದು ಅರ್ಥವಾಗಿತ್ತು. ರಮ ಶ್ರೀಕಾಂತನ ಸಂಜ್ಞೆಯನ್ನರಿತು ಅವಳ ಬಳಿ ಬಂದಳು.

"ನಮ್ಮ ವಿಶೂ ಖಂಡಿತಾ ಅನಾಥನಲ್ಲ ವಸುಧಾ..... ಅವನಿಗೆ ತಂದೆ ಇಲ್ಲ, ನಿಜ. ಆದರೆ ಶ್ರೀಕಾಂತ ತಂದೆಗಿಂತ ಹೆಚ್ಚಾಗಿ ಅವನನ್ನು ಪ್ರೀತಿಸುತ್ತಾನೆ. ಅದೇ ನನಗೀಗ ಯೋಚನೆ. ಅವನು ಮದುವೆಯಾದರೆ, ಅವನ ಹೆಂಡತಿಯಾಗಿ ಬರುವವಳಿಗೆ ಸುಮ್ಮನೇ ತೊಂದರೆ....."

"ತೊಂದರೆ ಏನು ಬಂತು ರಮಾ? ರೆಡಿಮೇಡ್ ಮಗು ಸಿಕ್ಕಿತು ಅಂತ ಸಂತೋಷ ಪಡುತ್ತಾಳೆ" ಶ್ರೀಕಾಂತ ತಮಾಷೆ ಮಾಡಿದ.

"ಏನಿಲ್ಲ ರಮಾ.... ಮಲತಾಯಿ ಎಂದಿದ್ದರೂ ಮಲತಾಯಿನೇ...... ಮಗುವನ್ನು ಖಂಡಿತಾ ಚೆನ್ನಾಗಿ ನೋಡಿಕೊಳ್ಳುವುದಿಲ್ಲ"

"ಇಲ್ಲ ವಸುಧಾ, ನಿನ್ನ ಕಲ್ಪನೆ ತಪ್ಪು. ಅಶೋಕನಿಗೆ ಒಬ್ಬ ಮಗಳಿದಾಳೆ. ಆ ಮಗಳಿಗೆ ನಾನು ತಾಯಿಯಾಗಿ ಹೋಗಬೇಕು. ಅಶೋಕನಿಗೆ ವಿಶೂನೂ

ಬೇಕು. ಕರೆದುಕೊಂಡು ಬರಬೇಡ ಎಂದು ಹೇಳಿಲ್ಲ. ಆದರೆ ವೀಸಾ ಪಾಸ್‌ಪೋರ್ಟ್ ಅಂತ ಸಮಯ ತಗೊಳತ್ತೆ ಅಂತ ಅಂದ್ರು ಅಷ್ಟೇ."

"ನೀವು ಇಬ್ಬರೂ ಸೇರಿ, ನಿಮ್ಮ ನಿಮ್ಮ ಮಕ್ಕಳಿಗೆ ಅನ್ಯಾಯ ಮಾಡ್ತಿದೀರಿ." ವಸುಧಾ ಕಟುವಾಗಿ ನುಡಿದಳು.

"ಇದರಿಂದ ಮಕ್ಕಳಿಗೆ ಏನು ಅನ್ಯಾಯವಾಗುತ್ತೆ? ನನಗೆ ಹಾಗೆನಿಸೋಲ್ಲ."

"ಈಗ ನನ್ನ ವಿಷಯವನ್ನೇ ನೋಡಿ...... ನನಗೆಷ್ಟು ಅನ್ಯಾಯವಾಯಿತು?"

"ನಿನಗೆ ಅನ್ಯಾಯವಾಯಿತಾ? ಸುಳ್ಳು ವಸುಧಾ..... ಅದು ನಿನ್ನ ಕಲ್ಪನೆ. ನಿಮ್ಮ ತಂದೆ ನಿನಗೆ ಅನ್ಯಾಯವಾಗಬಾರದು ಅಂತಲೇ ನೀನು ಚಿಕ್ಕವಳಿದ್ದಾಗ ಮದುವೆಯಾಗಲಿಲ್ಲ. ನೀನು ದೊಡ್ಡವಳಾದ ಮೇಲೆ, ನಿನ್ನ ಓದು, ಬರಹ, ನಿನ್ನ ಸ್ನೇಹಿತರು ಇತ್ಯಾದಿಯಲ್ಲಿ ನೀನು ಮುಳುಗಿದ್ದಾಗ, ನಿನ್ನ ತಂದೆ ಒಂಟಿಯಾದರು. ಆದ್ದರಿಂದಲೇ ಮದುವೆಯಾದರು. ಆಗ ಅವರಿಗೆ ಯಾರದ್ದಾದರೂ ಕಂಪೆನಿ ಬೇಕಿತ್ತು. ಆಗ ಅವರಿಗೆ ಹೆಂಡತಿಯಲ್ಲದೇ ಇನ್ಯಾರೂ ಹತ್ತಿರವಾಗಲು ಸಾಧ್ಯವಿಲ್ಲ. ಕಷ್ಟ ಸುಖಗಳಲ್ಲಿ ಸಮಭಾಗಿಯಾಗುವವಳು ಹೆಂಡತಿ ಮಾತ್ರ. ಗಂಡನಿಗೆ ಹೆಂಡತಿ, ಹೆಂಡತಿಗೆ ಗಂಡ. ಇದೇ ಕಾರಣದಿಂದಲೇ ಅಶೋಕ ಮತ್ತೆ ಮದುವೆಯಾಗುತ್ತಿರುವುದು. ನಾನು ಮತ್ತೆ ಮದುವೆಯಾಗಲು ಒಪ್ಪಿದ್ದು"

"ಸುಳ್ಳು. ಸುಳ್ಳು. ಹಾಗಾದರೆ ನಮ್ಮ ತಂದೆ ಮಾಡಿದ್ದು ಸರಿ ಅಂತೀರಾ?"

"ಅವರಿಗೆ ಸರಿ ಅಂತ ಅನ್ನಿಸುತ್ತೆ. ನಿನಗೆ ತಪ್ಪು ಅಂತ ಅನ್ನಿಸುತ್ತೆ. ನೀನು ಮದುವೆಯಾಗಿ ಗಂಡನ ಮನೆಗೆ ಹೊರಟು ಹೋದರೆ, ನಿಮ್ಮ ತಂದೆ ಒಂಟಿಯಾಗಿ ಬಿಡೋಲ್ವಾ? ಅದನ್ನು ನೀನೇಕೆ ಯೋಚಿಸಲಿಲ್ಲ?"

"ನಾನು ಅವಳನ್ನು ತಾಯಿ ಅಂತ ಒಪ್ಪಿಕೊಳ್ಳೋಲ್ಲ"

"ನೀನು ದೊಡ್ಡವಳಾಗಿದ್ದರಿಂದ ನಿನಗೆ ಹಾಗನ್ನಿಸಿತು. ಅಶೋಕನ ಮಗಳು ನನ್ನನ್ನೇ ತಾಯಿ ಅಂತ ಒಪ್ಪಿಕೊಳ್ಳುತ್ತಾಳೆ. ವಿಶೂ ಅಶೋಕನನ್ನೇ ತಂದೆ ಅಂತ ಒಪ್ಪಿಕೊಳ್ಳುತ್ತಾನೆ. ಚಿಕ್ಕಮಕ್ಕಳು ಬೇಗ ಹೊಂದಿಕೊಳ್ಳುತ್ತಾರೆ. ನಿನ್ನಂತಹವರು ಹಠ ಮಾಡ್ತಾರೆ ಅಷ್ಟೇ...... "

"ಏನಿಲ್ಲ. ಕಡೆಗೂ ನಾನೇ ಹಠವನ್ನು ಬಿಟ್ಟದ್ದು...... "

"ನೀನು ಗುಡ್ ಗರ್ಲ್. ನೋಡ್ತಿರು. ನಿಮ್ಮ ತಂದೆ ಸಹ ಒಳ್ಳೆಯವರು ಅಂತ ನಿನಗೇ ಗೊತ್ತಾಗುತ್ತೆ."

ಶ್ರೀಕಾಂತ, ಮಹೇಶ ಮುಖ ಮುಖ ನೋಡಿ ಕೊಂಡರು. ರಮಾ

ಯಾಕೆ ಇಷ್ಟು ಮಾತನ್ನಾಡುತ್ತಿದ್ದಾಳೆಂದು ಆಶ್ಚರ್ಯವಾಗಿತ್ತು. ಅದನ್ನು ಮರೆಸುವಂತೆ ಶ್ರೀಕಾಂತ ಕೇಳಿದ.

"ಅಶೋಕ ಮತ್ತೆ ಯಾವಾಗ ಬರ್ತಾನಂತೆ?"

ರಮ ನಸು ನಕ್ಕಳು. ಶ್ರೀಕಾಂತನ ಇಂಗಿತ ಅರ್ಥವಾಗಿತ್ತು. ತಾನು ವಸುಧಾಳನ್ನು ಮೆಚ್ಚಿಸಲು ಆಡಿದ ಮಾತು ಜಾಸ್ತಿಯೆಂದು ಅನಿಸಿತ್ತು. ವಿಶೂನ ತನ್ನ ಕೈಗೆ ಎತ್ತಿಕೊಳ್ಳಲೆಂದು ಕೈ ಚಾಚಿದಳು. ಆದರೆ ವಸುಧಾ ಅವನನ್ನು ತಬ್ಬಿಕೊಂಡು, "ಇವನನ್ನು ನನಗೆ ಕೊಟ್ಟು ಬಿಡು ರಮಾ..... ನಾನು ಇವನನ್ನು ಅಡಾಪ್ಟ್ ಮಾಡಿಕೊಂಡು ಸಾಕ್ತೀನಿ" ಎಲ್ಲರೂ ಒಟ್ಟಿಗೇ ಗೊಳ್ ಎಂದು ನಕ್ಕುಬಿಟ್ಟರು. ಅವಳ ಮುಖ ಕೆಂಪಾಯಿತು.

"ಯಾಕೆ ನಗ್ತೀರಿ? ನಾನೇನು ತಪ್ಪು ಹೇಳಿದೆ? ನೀವು ಅಮೆರಿಕಾಕ್ಕೆ ಒಬ್ಬರೇ ಹೋಗಿ. ಅಲ್ಲಿ ನಿಮಗೆ ಮಗಳು ಸಿಗ್ತಾಳೆ. ನನಗೆ ಮಾತ್ರ ಇಲ್ಲಿ ಯಾರೂ ಇಲ್ಲ, ಇಲ್ಲಿ ನಾನು ಒಂಟಿಯಾಗಿಬಿಡ್ತೀನಿ. ನನಗೆ ಇವನು ಬೇಕು..... ಇವನ ಕಂಪೆನಿ ಬೇಕು" ವಿಶೂನ ತಬ್ಬಿಕೊಂಡಳು.

"ಛೇ. ಹೀಗೇಕೆ ಮಾತಾಡ್ತೀಯ ವಸುಧಾ? ನೀನೇಕೆ ಒಂಟಿಯಾಗ್ತೀಯಾ? ಈಗ ನಿನ್ನ ಜತೆಗೆ ನಿನ್ನ ತಂದೆ ಇದಾರೆ...... ನಿನಗೂ ಮದುವೆಯಾದರೆ, ನಿನಗೂ ನಿನ್ನದೇ ಆದ ಒಂದು ಸಂಸಾರ ಇರುತ್ತೆ..... "

"ನನ್ನನ್ನು ಯಾರು ಮದುವೆಯಾಗ್ತಾರೆ..... ಅದೆಲ್ಲ ಕನಸು..... " ಎನ್ನುತ್ತಾ ವಸುಧಾ ಅಳತೊಡಗಿದಾಗ ಎಲ್ಲರಿಗೂ ಗಾಭರಿಯಾಯಿತು. ಮಹೇಶ ಶ್ರೀಕಾಂತನ ಕಡೆ ನೋಡಿದ.

"ಸ್ವಲ್ಪ ಸಮಾಧಾನ ಹೇಳಪ್ಪ ನಿನ್ನ ಹುಡುಗೀಗೇ..... " ಶ್ರೀಕಾಂತ ವಸುಧಾಳ ಬಳಿಗೆ ಬಂದ. ವಿಶೂ ಕಡೆ ಕೈಚಾಚಿದ. ಅವನು ಇವನ ತೋಳಿನೊಳಗೆ ಬಂದ.

"ಏಯ್ ವಸುಧಾ..... ಇಷ್ಟು ಸಣ್ಣ ವಿಷಯಕ್ಕೆಲ್ಲ ಯಾರಾದ್ರೂ ಅಳ್ತಾರಾ? ನಿನಗೆ ಇವನು ಬೇಕು ತಾನೇ..... ನಾನು ಇವನನ್ನು ನಿನಗೆ ಕೊಡ್ತೀನಿ. ಆದರೆ ಒಂದು ಕಂಡೀಷನ್ನು..... " ಶ್ರೀಕಾಂತ ಎಲ್ಲರನ್ನೂ ನೋಡಿ ನುಡಿದಿದ್ದ.

"ಏನದು?" ಅನ್ನುವಂತೆ ನೋಡಿದಳು.

"ನೀನು ನನ್ನನ್ನು ಮದುವೆಯಾಗ ಬೇಕು" ಎಂದ ಅವಳ ಮುಖದ ಹತ್ತಿರ ಬಾಗಿ. ವಸುಧಾ ಅಳು ನಿಲ್ಲಿಸಿದಳು. ಅರ್ಥವಾಗದವಳಂತೆ ಅವನನ್ನೇ

ನೋಡಿದಳು.

"ಎಸ್. ವಸಧಾ...... ನಿನಗೆ ನನ್ನನ್ನು ಮದುವೆಯಾಗಲು ಇಷ್ಟಾನಾ? ಹೇಳು. ಆಗ ನಾನು ನಿನಗೆ ವಿಶೂನ ಸಾಕಿ ಕೊಳ್ಳೋಕೆ ಕಂಡಿತಾ ಕೊಡ್ತೀನಿ" ರಮಾ ಅವನ ಪಕ್ಕ ಬಂದು ನಿಂತಿದ್ದಳು.

"ಶ್ರೀಕಾಂತ ಏನು ಹೇಳ್ತಿದೀಯ ನೀನು...... ವಸುಧಾ ನಿನಗಿಂತ ತುಂಬಾ ಚಿಕ್ಕವಳು ಅಂತ ಅನ್ನಿಸೋಲ್ವಾ?" ರಮಾ ಪಿಸುಗುಟ್ಟಿದಳು.

"ಗೊತ್ತು. ಅವಳು ವಯಸ್ಸಿನಲ್ಲಿ ನನಗಿಂತ ತುಂಬಾ ಚಿಕ್ಕವಳು. ಆದರೆ ಅವಳಿಗೆ ನನ್ನ ಅಗತ್ಯವಿದೆ. ಎಲ್ಲಾ ಯೋಚಿಸಿಯೇ ಈ ನಿರ್ಧಾರಕ್ಕೆ ಬಂದಿದ್ದೀನಿ" ಎಂದು ನುಡಿದ ಕೆಳದನಿಯಲ್ಲಿ.

"ಅವಳ ತಂದೆ ಏನಂತಾರೋ.......?" ಅಡ್ಡ ನುಡಿದಳು.

ವಸುಧಾ ನಂಬದವಳಂತೆ ಶ್ರೀಕಾಂತನನ್ನೇ ನೋಡುತ್ತಿದ್ದಳು.

"ಏನೂ ಅನ್ನುವುದಿಲ್ಲ. ವಸುಧಾ ಒಪ್ಪಿದರೆ ಸಾಕು. ನಾನು ಯಾರಿಗೂ ಹೆದರಬೇಕಾಗಿಲ್ಲ" ಶ್ರೀಕಾಂತ ಹೀಗೆ ಹೀರೋ ತರಹ ಮಾತನಾಡಿದ್ದು ವಸುಧಾಳಿಗೆ ಮೆಚ್ಚುಗೆಯಾಯಿತು. ಆದರೂ ನುಡಿದಳು.

"ನೀವು ತಮಾಷೆ ಮಾಡ್ತಿಲ್ಲ ತಾನೆ ಶ್ರೀ.....? ರಮಾ, ನೀವು ನನ್ನ ಮಾವ ಅಂತ ಹೇಳಿದ್ದಳು. ಆಗ ನಾನು ನಂಬಿದ್ದೆ. ಆದರೆ ಈಗ ನೀವು ನನ್ನ ಮಾವ ಅಲ್ಲ ಅಂತ ತಿಳಿದರೂ ನನಗೆ ದುಃಖವಿಲ್ಲ. ಏಕೆಂದರೆ ನೀವು ಒಳ್ಳೆಯವರು. ಆದರೆ ಪ್ಲೀಸ್ ಇಂತಹ ತಮಾಷೆ ಮಾತ್ರ ಮಾಡಬೇಡಿ"

"ಇಲ್ಲ ವಸುಧಾ...... ನನಗೆ ತಮಾಷೆ ಮಾತುಗಳೇ ಮರೆತುಹೋಗಿದೆ. ನಾನು ಎಲ್ಲಾ ನೇರವಾಗಿ ಆಡುವವನು. ನಿನಗೆ ಒಪ್ಪಿಗೆ ಇಲ್ಲದಿದ್ದರೆ ನನಗೆ ಬೇಸರವಿಲ್ಲ. ಆದರೆ ನೀನು ಒಪ್ಪಿ ಮದುವೆಯಾದರೆ ಮಾತ್ರ, ನಿನ್ನನ್ನು ಚೆನ್ನಾಗಿ ನೋಡಿಕೊಳ್ತೀನಿ. ಈ ಮಾತು ನಿಜ"

"ನೀವು ತುಂಬಾ ಒಳ್ಳೆಯವರು. ಶ್ರೀಕಾಂತ್...... ಇಲ್ಲ ಅಂತ ನಿಮಗೆ ಹೇಗೆ ಹೇಳಲಿ? ಆದರೆ ಮದುವೆ ಅಂದರೆ ನನಗೆ ದಿಗಿಲಾಗುತ್ತೆ"

"ಹೌದು ಶ್ರೀಕಾಂತ..... ಇವಳ ವಯಸ್ಸೇನು? ಮದುವೆ, ಸಂಸಾರಕ್ಕೆಲ್ಲ ಇವಳು ಸಿದ್ಧವಾಗಿಲ್ಲ. ಅಂತ ನನಗನ್ನಿಸುತ್ತೆ" ರಮಾ ಮತ್ತೆ ನುಡಿದಳು.

"ಆ ಆತಂಕ ನಿನಗೆ ಬೇಡ ರಮಾ...... ವಸುಧಾಳ ಯೋಗಕ್ಷೇಮ ನನಗೆ ಸೇರಿದ್ದು " ಅಂತ ಅವನು ಹೇಳಿದಾಗ ರಮಳಿಗೆ ಸಮಾಧಾನ ವಾಗಿರಲಿಲ್ಲ. ಶ್ರೀಕಾಂತ ಯಾಕೆ ಹೀಗೆ ದುಡುಕಿದ ಎಂದು ಚಿಂತಿಸುತ್ತಿದ್ದಳು.

ರೂಪ ತಿರಸ್ಕರಿಸಿದಾಗ, ಇವನು ನನ್ನ ಆಸರೆಯನ್ನು ಬಯಸಿದ್ದ. ನನಗೆ ತಿಳಿದೂ ಏನೂ ಮಾಡುವಂತಿರಲಿಲ್ಲ. ಎಷ್ಟೋ ವರ್ಷಗಳ ನಂತರ ಅವನು ಹಾಗೇ ಮದುವೆಯಾಗದೇ ಇದ್ದುದನ್ನು ಕಂಡು, ತಾನೇ ಅವನನ್ನು ಮದುವೆಯಾಗುವ ಆಸೆಯನ್ನು ಪ್ರಕಟಿಸಿದರೆ, ಅದನ್ನು ಒಪ್ಪಲಿಲ್ಲ ಇವನು. ಅಷ್ಟು ಹೊತ್ತಿಗಾಗಲೇ ಅವನಿಗೆ ಇವಳ ಪರಿಚಯವಾಗಿತ್ತು. ಈ ವಿಚಿತ್ರ ಹುಡುಗಿಯಲ್ಲಿ ಏನು ಸದ್ಗುಣಗಳನ್ನು ಕಂಡನೋ? ಯಾವ ರೀತಿಯಿಂದಲೂ ಇವಳು ಶ್ರೀಕಾಂತನಿಗೆ ತಕ್ಕವಳಲ್ಲ. ಯಾವುದೋ ಆದರ್ಶದ ಬೆನ್ನೇರಿ, ನಿಸ್ಸಹಾಯಕ ಹುಡುಗಿಗೆ ಆಸರೆ ನೀಡುವ ಛಳಿ ಹೊತ್ತಿದ್ದಾನೆ ಎಂದು ಮರುಗಿದರೂ, ಒಮ್ಮೆ ಇವನು ತೆಗೆದುಕೊಂಡ ನಿರ್ಧಾರವನ್ನು ಖಂಡಿತಾ ಬದಲಾಯಿಸುವುದಿಲ್ಲ ಎಂದು ತನಗೆ ತಾನೇ ಹೇಳಿಕೊಂಡು ಸುಮ್ಮನಾದಳು. ಯಾಕೋ ಏನೋ ಮನಸ್ಸಿಗೆ ಮಂಕು ಕವಿದಂತಾಗಿತ್ತು. ವಿಶೂನ ಎತ್ತಿಕೊಂಡು, ಮನೆಯಿಂದ ಹೊರಗೆ ಬಂದು ನಿಂತಳು. ಮಹೇಶ ಒಳಗೆ ಅಡಿಗೆ ಮನೆಗೆ ಹೋಗಿದ್ದ.

ಶ್ರೀಕಾಂತ ವಸುಧಾಳನ್ನು ಮತ್ತೆ ಕೇಳಿದ.

"ಈಗಲೇ ನಿನ್ನ ನಿರ್ಧಾರ ಏನೂಂತ ಹೇಳಿಬಿಡು ವಸುಧಾ...... ನಿನಗೆ ಒಪ್ಪಿಗೆ ಇಲ್ಲದಿದ್ದರೆ ನಾನು ಖಂಡಿತಾ ಬಲವಂತ ಮಾಡುವುದಿಲ್ಲ" ಎಂದ.

"ಒಪ್ಪಿಗೆ ಇಲ್ಲ ಅಂತ ಹೇಗೆ ಹೇಳಲಿ ಶ್ರೀ...... ನೀವು ಇರದಿದ್ದರೆ, ಬಹುಶಃ ನಾನು ಇದುವರೆಗೂ ಬದುಕಿರುತ್ತಿದ್ದೆನೋ ಇಲ್ಲವೋ? ನಿಮಗೆ ಎಷ್ಟು ಥ್ಯಾಂಕ್ಸ್ ಹೇಳಿದರೂ ಸಾಲದು....... "

"ಅದೆಲ್ಲ ದೊಡ್ಡ ಮಾತು. ನೀನು ಈಗಲೇ ಇದನ್ನು ಯಾರಿಗೂ ಹೇಳಬೇಡ. ನಿಮ್ಮ ತಂದೆಗೂ ಸಹ, ರಮಳ ಮದುವೆ ಸೆಟ್ಲ್ ಆಗಲಿ ಆಮೇಲೆ ಬಂದು ನಾನೇ ನಿಮ್ಮ ತಂದೆಯ ಹತ್ತಿರ ಮಾತನಾಡ್ತೀನಿ. ಈಗ ಮನೆಗೆ ಹೋಗು. ಸುಮ್ಮನೇ ಇದೇ ವಿಷಯಗಳನ್ನು ಯೋಚಿಸುತ್ತಾ ಔಷಧಿ ಪಥ್ಯ ಮರೆಯ ಬೇಡ. ನನ್ನ ಮನೆಗೆ ನೀನು ಬರುವ ಹೊತ್ತಿಗೆ ಎಲ್ಲಾ ತರಹಾನೂ ಸರಿಯಾಗಿರಬೇಕು" ತಿಳೀತಾ?

"ಹೂಂ ಎನ್ನುತ್ತಾ ಅವಳು ಅವನ ಬಲಗೈಯನ್ನು ಎತ್ತಿ ಚುಂಬಿಸಿ, 'ಐ ಲವ್ ಯೂ ಶ್ರೀ' ಎಂದಳು"

"ಥ್ಯಾಂಕ್ ಯೂ ಎಂದು ನುಡಿದು" ಅವಳು ಇನ್ನು ಹೊರಡಲಿ ಎನ್ನುವಂತೆ ಅವಸರಿಸಿದ.

"ನನಗೆ ಇಲ್ಲಿಂದ ಹೋಗೋಕೇ ಮನಸ್ಸಾಗ್ತಿಲ್ಲ ಶ್ರೀ..... "

"ನಂಗೊತ್ತು. ಅದಕ್ಕೇ ನಾನು ಇದುವರೆಗೂ ಈ ಮಾತುಗಳನ್ನು ಹೇಳಿರಲಿಲ್ಲ. ನೀನು ಮಾತ್ರ ಅಲ್ಲ, ನಾವೆಲ್ಲರೂ ಇಲ್ಲಿಂದ ಹೋಗಲೇಬೇಕು" ಎಂದು ಮಹೇಶನ ಕೈ ಮಾಡಿ ಇದು ಇವನ ಮನೆ ಎಂದ. ತಮ್ಮಿಬ್ಬರನ್ನೇ ನೋಡುತ್ತಿದ್ದ ಮಹೇಶನನ್ನು ನೋಡಿ ವಸುಧಾ ನಾಚಿದಳು. ಶ್ರೀಕಾಂತ ಕಣ್ಣು ಹೊಡೆದು ನಕ್ಕ. ಇಬ್ಬರೂ ಹೊರಗೆ ಬಂದರು. ರಮಾ ಹೊರಗೆ ನಿಂತಿದ್ದಳು. ಅವಳು ಅಳುತ್ತಿದ್ದಾಳೆಂದು ಶ್ರೀಕಾಂತ ಅರಿತ. ಅವನ ಹೃದಯ ಭಾರವಾಯಿತು. ಕಾರಣಗಳನ್ನು ಊಹಿಸಿದ್ದ. ಆದರೆ ಕೇಳಲಾರ.

"ರಮಾ ವಸುಧನ್ನು ಅವಳ ಮನೆಗೆ ತಲುಪಿಸಿ, ನೀನು ಮನೆಗೆ ಹೋಗು. ನಾನು ಅಂಗಡಿಗೆ ಹೋಗ್ತೀನಿ" ಎಂದ.

ರಮಾ ಒಪ್ಪಿದಳು. ರಮಾ ಏನೂ ಮಾತಾಡದೇ ಇದ್ದಾಗ ವಸುಧಾ ಕೇಳಿದಳು.

"ಯಾಕೆ ರಮಾ ಒಂಥಾರ ಇದೀರಿ? ನಾನು ಶ್ರೀಕಾಂತನ್ನ ಮದುವೆಯಾಗುವುದು ನಿಮಗೆ ಇಷ್ಟ ಇಲ್ಲವಾ?" ವಸುಧಾ ಕೇಳಿಯೇಬಿಟ್ಟಳು.

"ಛೆ...... ಛೇ....... ಹಾಗಲ್ಲ. ಶ್ರೀಕಾಂತ ತುಂಬಾ ಒಳ್ಳೆಯವನು. ನನಗಂತೂ ತುಂಬಾ ಸಹಾಯ ಮಾಡಿದ್ದಾನೆ. ಈಗ ಎಲ್ಲರನ್ನು ಬಿಟ್ಟು ಅಷ್ಟು ದೂರ ಹೋಗಬೇಕಲ್ಲ ಅಂತ ಬೇಜಾರಾಗ್ತಿದೆ" ಅಷ್ಟೆ.

"ಹಾಗಾದರೆ ಅಮೆರಿಕಾದವನು ಬೇಡ. ಇಲ್ಲೇ ಯಾರನ್ನಾದರೂ ನೋಡಿ ಮದುವೆಯಾಗಿ, ಇಲ್ಲೇ ಹತ್ತಿರವೇ ಇರಬಹುದು"

"ಹತ್ತಿರದಲ್ಲಿ ಕೆಲವರು, ನನ್ನನ್ನು ನನ್ನ ಹಣಕ್ಕಾಗಿ ಮದುವೆಯಾಗ್ತಾ ಇದಾರೆ ವಸುಧಾ...... ಅಮೇರಿಕಾದವನಿಗೆ ಇಲ್ಲಿಯ ಹಣದ ಮೇಲೆ ಆಸೆ ಇರುವುದಿಲ್ಲ. ಹೋಗಲಿ ಬಿಡು, ನಿನಗೆ ಇದೆಲ್ಲ ಅರ್ಥವಾಗುವುದಿಲ್ಲ. ನೀನು ಅದೃಷ್ಟವಂತೆ. ಶ್ರೀಕಾಂತ ನಿನ್ನನ್ನು ಚೆನ್ನಾಗಿ ನೋಡಿಕೊಳ್ತಾನೆ. ನೀನು ಸುಖವಾಗಿರುತ್ತೀಯ" ಎಂದಾಗ ವಸುಧಾ ಅತ್ತಳು.

"ನಾನೂ ಅವರನ್ನು ಹ್ಯಾಪಿಯಾಗಿಟ್ಟುಕೊಳ್ಳಲು ಪ್ರಯತ್ನಪಡ್ತೀನಿ ರಮಾ..... ನನಗೆ ಅವರ ಮನೆಯ ವಿಷಯವೇ ಗೊತ್ತಿಲ್ಲ. ಅವರ ಮನೇಲಿ ಹೇಗಿರಬೇಕು..... ಯಾವ ರೀತಿ ಮಾತನಾಡಬೇಕು ಒಂದೂ ಗೊತ್ತಿಲ್ಲ. ನೀವಾದರೆ ಎಷ್ಟೋ ವರ್ಷಗಳಿಂದ ಪರಿಚಯದವರು, ಅಲ್ಲೇ ಇದ್ರಿ....... "

"ನಾನೇ ನಿನ್ನನ್ನು ಒಂದು ದಿನ ಕರೆದುಕೊಂಡು ಹೋಗಿ ಎಲ್ಲಾ

ಪರಿಚಯ ಮಾಡಿಸಿಕೊಡ್ತೀನಿ. ಒಂದೊಂದಾಗಿ ನಿನಗೇ ಅರ್ಥವಾಗುತ್ತೆ. ಅದಕ್ಕಾಗಿ ಚಿಂತಿಸಬೇಡ" ಎಂದು ಹೇಳಿ, ಅವಳಿಗೆ ವಿಶ್ ಮಾಡಿ, ಅವಳನ್ನು ಅವಳ ಮನೆಯ ಹತ್ತಿರ ಇಳಿಸಿ ಮುಂದೆ ನಡೆದಳು.

* * * *

ಮನೆಯಲ್ಲಿ ಮತ್ತೆ ರಮಳ ಮದುವೆಯ ಪ್ರಸ್ತಾಪ ಬರುತ್ತಿದ್ದಂತೆ ಬೇಕಾದ ಬೇಡವಾದ ಮಾತುಗಳು ಎದ್ದವು.

"ವಿಶೂ ನಮ್ಮ ಪ್ರಕಾಶನ ಮಗ ಅವನು ನಮ್ಮನ್ನು ಬಿಟ್ಟು ಹೋಗುವುದು ಬೇಡ" ಎಂದ ತಾಯಿ ಖಂಡಿತವಾಗಿ ನುಡಿದಾಗ ರಮಾ ಅತ್ತಳು. ಅವಳಿಗೂ ಅಂಜಿಕೆ. ಅಶೋಕನಿಗೆ ವಿಶೂಗಿಂತ ಅವನ ಮಗಳೇ ಹೆಚ್ಚು. ತಾನು ಇಲ್ಲಿಂದ ಕರೆದುಕೊಂಡು ಹೋಗಿ ಅವನ ಅನಾದರಣೆಗೆ ಒಳಗಾಗುವುದಕ್ಕಿಂತ, ಇಲ್ಲಿ ಅವನನ್ನು ಅತಿಯಾಗಿ ಪ್ರೀತಿಸುವ ತಾತ, ಅಜ್ಜಿ, ಚಿಕ್ಕಪ್ಪ ಎಲ್ಲಾ ಇದಾರೆ ಅಂತ ಅನ್ನಿಸಿದರೂ, ದುಃಖ ಉಕ್ಕಿ ಉಕ್ಕಿ ಬರುತ್ತಿತ್ತು. ಇದರ ಬದಲು ತಾನು ಮದುವೆಯಾಗುವ ಆಸೆಯನ್ನು ಬಿಡುವುದೇ ಮೇಲು ಅಂತ ಸಹ ಅನ್ನಿಸಿತ್ತು. ಆದರೆ ಮತ್ತೆ ಅಶೋಕನ ಫೋನು ಬಂದಾಗ, ಮನಸ್ಸು ಡೋಲಾಯ ಮಾನವನ್ನಾಡಿತ್ತು.

ಶ್ರೀಕಾಂತನ ಮದುವೆಯಾಗಿ ಬಿಟ್ಟರೇ, ತಾನು ಮತ್ತೂ ಒಂಟಿಯಾಗಿ ಬಿಡ್ತೀನಿ. ಅವನ ಹೆಂಡತಿ, ಅವನ ಸಂಸಾರವೇ ಅವನಿಗೆ ಹೆಚ್ಚಾಗುತ್ತದೆ. ಅತ್ತೆ ಮಾವನವರಿಗೂ ವಯಸ್ಸಾಗಿದೆ. ಅವರ ಸುಸ್ತು, ಸಂಕಟ, ತಾಪತ್ರಯಗಳೇ ಅವರಿಗೆ ಹೆಚ್ಚು. ಇಲ್ಲಿಯೇ ಇದ್ದುಕೊಂಡು, ಹಳೆಯ ನೆನಪುಗಳನ್ನು ಮೆಲುಕು ಹಾಕುತ್ತಾ ಮನಸ್ಸನ್ನು ಮತ್ತು ಕೆಡಿಸಿಕೊಳ್ಳುವುದಕ್ಕಿಂತ ಎಲ್ಲವನ್ನು ಮರೆತು ದೂರ ಎಲ್ಲೋ ಇರುವುದೇ ಸರಿ ಅಂತ ಸಹ ಅನ್ನಿಸುತ್ತಿತ್ತು.

"ಪ್ರಕಾಶ, ಹೀಗೇಕೆ ನನ್ನನ್ನು ನಡು ನೀರಿನಲ್ಲಿ ಕೈಬಿಟ್ಟು ಹೋದೆ?" ಎಂದು ಅತ್ತಳು.

ಅಶೋಕ ಮತ್ತೆ ಬಂದಾಗ ತನ್ನ ಅಕ್ಕ ಭಾವನನ್ನು, ಮಗಳನ್ನು ಕರೆದಂತಿದ್ದ. ಮಗಳು ಶ್ವೇತಾ, ತಂದೆಯ ಮಡಿಲನ್ನು ಬಿಟ್ಟು ಕೆಳಗಿಳಿಯಲಿಲ್ಲ. ರಮಾ ಯಾವ ಆಸಕ್ತಿಯನ್ನೂ ತೋರಲಿಲ್ಲ. ಅಶೋಕನೂ ವಿಶೂ ಬಗ್ಗೆ ಯಾವ ವಿಷಯವನ್ನು ಕೇಳಲಿಲ್ಲ. ಅವನಿಗೀಗ ಮುಖ್ಯವಾದದ್ದು ಮದುವೆಯೊಂದೇ. ರಮಳ ತಾಯಿ, ತಮ್ಮ ಸಹ ಬಂದಿದ್ದರು. ಆಕೆಗೆ ಅಮೆರಿಕಾದ ಅಳಿಯ ಸಿಗುತ್ತಿರುವುದು ಆನಂದದ ವಿಷಯ.

"ಅಂತೂ ನಮ್ಮ ರಮಾಳ ಕಷ್ಟ ತೀರಿತು. ಅಮೆರಿಕಾಕ್ಕೆ ಹಾರಿ ಹೋಗುತ್ತಾಳೆ" ಎಂದು ಹಿಗ್ಗಿದರು. ರಮಾ ಮಾತ್ರ ಇನ್ನೂ ಮೀನ ಮೇಷ ಎಣಿಸುತ್ತಿದ್ದಳು.

ಶ್ರೀಕಾಂತ ರಮಾಳ ಸಹಾಯಕ್ಕೆ ಬಂದ.

"ನೀನು ವಿಶೂ ಬಗ್ಗೆ ಚಿಂತಿಸಲೇ ಬೇಡ. ಅವನನ್ನು ನನ್ನ ಮಗ ಅಂತ ಎಂದೋ ತಿಳಿದುಕೊಂಡು ಬಿಟ್ಟಿದ್ದೀನಿ. ಅವನನ್ನು ಓದಿಸಿ ಬರೆಸಿ ದೊಡ್ಡವನನ್ನಾಗಿ ಮಾಡುವ ಜವಾಬ್ದಾರಿ ನನ್ನದು, ಆಮೇಲೆ ಬೇಕಾದರೆ ಅಮೆರಿಕಾಕ್ಕೆ ಅವನೇ ಬರ್ತಾನೆ"

"ನನಗೆ ನಿನ್ನ ಮೇಲೆ ನಂಬಿಕೆ ಇದೆ ಶ್ರೀಕಾಂತ. ಆದರೆ ಈಗ ವಸುಧಾ ನಿನ್ನ ಹೆಂಡತಿಯಾಗಿ ಬಂದರೆ, ನಿನ್ನ ಜವಾಬ್ದಾರಿ ಹೆಚ್ಚಲ್ಲವಾ? ಅವಳೂ ತಿಳುವಳಿಕೆಯ ಹುಡುಗಿ ಅಲ್ಲ"

"ಅದೆಲ್ಲ ನನಗೆ ಸೇರಿದ್ದು, ವಸುಧಾ ನಾನು ಹೇಳಿದಂತೆ ಕೇಳುತ್ತಾಳೆ ಅಂತ ನನಗೆ ಅರ್ಥವಾಗಿದೆ. ಆದ್ದರಿಂದ ಅವಳನ್ನು ನಮ್ಮ ಮನೆಗೆ ಹೇಗೆ ಬೇಕೋ ಹಾಗೆ ತಿದ್ದಿಕೊಳ್ಳುವುದು ಕಷ್ಟವಾಗಲಾರದು. ಅಲ್ಲದೇ ಅಮ್ಮ, ಅಪ್ಪ ನನ್ನ ಜತೆಗಿದ್ದಾರೆ"

"ಅಂತೂ ನಿನಗೆ ಸದಾ ಏನಾದರೂ ಒಂದು ತೊಂದರೇನೇ, ನಿನಗೇನೂ ಅನ್ನಿಸೋಲ್ವಾ?"

"ಇಲ್ಲ, ನನಗೆ ಇದೇ ಅಭ್ಯಾಸವಾಗಿ ಹೋಗಿದೆ" ಎಂದ ನಗುತ್ತಾ. ಆದರೂ ರಮಳ ಸಂಶಯ ಕಡಿಮೆ ಆಗಿರಲಿಲ್ಲ. ಆದರೆ ಈಗ ಅಮೆರಿಕಾಕ್ಕೆ ಹೋಗುವ ಅವಕಾಶ ಸಿಗುತ್ತಿರುವಾಗ ಅದನ್ನು ಬಿಡಲಾರಳು.

ಅಂತೂ ಕಡೆಗೂ ಅವಳ ಮದುವೆ ನಿಶ್ಚಯವಾಯಿತು. ನಾನಾ ಕಾರಣಗಳಿಂದ ಮದುವೆಯನ್ನು ಸದ್ದುಗದ್ದಲವಿಲ್ಲದೇ ಯಾವುದಾದರೂ ಒಂದು ದೇವಸ್ಥಾನದಲ್ಲಿ ನಡೆಸುವುದೆಂದು ನಿಶ್ಚಯವಾಯಿತು. ಶ್ರೀಕಾಂತ ನೆಮ್ಮದಿಯ ನಿಟ್ಟುಸಿರು ಬಿಟ್ಟಿದ್ದ. ರಮಾ ಮತ್ತೆ ಹೊಸಬಾಳು ಪ್ರಾರಂಭಿಸುವುದು ಅವನಿಗೆ ಖುಷಿ ತಂದ ವಿಷಯ.

ಈ ಸಮಯದಲ್ಲಿ ಅವನು, ಸುಧಾಕರರಾಯರ ಮೇಲಿದ್ದ ಅಲ್ಪಸ್ವಲ್ಪ ಅಸಮಾಧಾನವನ್ನು ಮರೆತು, ಅವರನ್ನು ಮದುವೆಗೆ ಆಮಂತ್ರಿಸಲು ಹೋಗಿದ್ದ. ಅಲ್ಲಿ ಸುಧಾಕರರಾಯರ ತಂಗಿ ಕಾತ್ಯಾಯಿನಿಯ ಪರಿಚಯವಾಯಿತು. ಅಣ್ಣನನ್ನು ನೋಡಲೆಂದು ಬಂದಿದ್ದವಳು, ಆತನ ಅನಾರೋಗ್ಯಕ್ಕೆ ಪರಿತಪಿಸಿ, ಆತನನ್ನು

ತನ್ನೊಡನೆ ಕರೆದೊಯ್ಯುವ ಸನ್ನಾಹದಲ್ಲಿದ್ದಳು. ಆದರೆ ವಸುಧಾ ಅವರ ಜತೆ ಹೊರಡಲು ತಯಾರಿರಲಿಲ್ಲ. ಕಾವೇರಮ್ಮನಿಂದ ವಸುಧಾಳ ವಿಷಯವನ್ನೆಲ್ಲ ತಿಳಿದ ಕಾತ್ಯಾಯನಿಗೆ, ಅವಳನ್ನು ತನ್ನೊಡನೆ ಬಲವಂತವಾಗಿ ಕರೆದೊಯ್ಯುವ ಇಷ್ಟವೂ ಇರಲಿಲ್ಲ. ಶ್ರೀಕಾಂತನನ್ನು ಕಂಡೊಡನೆ ಆಕೆಯ ದೂರಾಲೋಚನೆಗಳು ನಾನಾ ದಿಕ್ಕಿನಲ್ಲಿ ಓಡಿದವು.

ಶ್ರೀಕಾಂತ ಆಕೆಗೂ ಆಮಂತ್ರಣವನ್ನಿತ್ತ. ಶ್ರೀಕಾಂತನಿಗೆ ತಿನ್ನಲು ತಿಂಡಿಯನ್ನು ಕೊಟ್ಟು ಆಕೆ ಮಾತಿಗೆ ಪ್ರಾರಂಭಿಸಿದಳು.

"ನೀನು, ವಸುಧಾಳನ್ನು ಮದುವೆಯಾಗುವ ಆಸೆ ತಿಳಿಸಿದೀಯಂತೆ. ಒಳ್ಳೆದು, ನಿನಗೆ ಅವಳ ಗುಣ ಅವಗುಣ ಎಲ್ಲಾ ತಿಳಿದಿರುವುದರಿಂದ ಅವಳನ್ನು ತಿದ್ದಿಕೊಳ್ಳುವುದು ಕಷ್ಟವಾಗೋಲ್ಲ. ನನ್ನ ಅಣ್ಣನ ಆರೋಗ್ಯ ಚೆನ್ನಾಗಿಲ್ಲ. ಈಗ ಇವಳು ಇಲ್ಲಿರುವುದರಿಂದ ಅವನ ಆರೋಗ್ಯ ಸುಧಾರಿಸುವ ಬದಲು, ಇನ್ನು ಹದಗೆಡುತ್ತೆ ಅಷ್ಟೆ. ಅದಕ್ಕೇ ನಾನು ಅವನನ್ನು ನನ್ನ ಜತೆಗೆ ಕರೆದುಕೊಂಡು ಹೋಗುವ ನಿರ್ಧಾರ ಮಾಡಿದೀನಿ. ವಸುಧಾ ಬರುವುದಿಲ್ಲ ಅಂತಂದಳು. ಅವಳಿಗೆ ಏನು ವ್ಯವಸ್ಥೆ ಮಾಡೋಣ ನೀನೇ ಹೇಳಪ್ಪಾ......"

ಶ್ರೀಕಾಂತ ತಬ್ಬಿಬ್ಬಾದ.

"ವಸುಧಾ ಎಲ್ಲಿ?" ಕೇಳಿದ.

"ಎಲ್ಲೋ ಒಳಗೆಲ್ಲೋ ಇದಾಳೆ ಅವಳನ್ನು ಕೇಳಿದರೆ ಅವಳು ಏನು ಹೇಳುತ್ತಾಳೆ? ಅವಳು ನೀನು ಹೇಳಿದಂತೆ ಕೇಳುತ್ತಾಳೆ. ಅದಕ್ಕೇ ನನಗೆ ಅನ್ನಿಸುತ್ತೆ. ನೀವು ಇಬ್ಬರೂ ಆದಷ್ಟು ಬೇಗ ಮದುವೆಯಾಗಿಬಿಡಿ. ನಿನ್ನ ವಸ್ತು ನಿನ್ನ ಮನೆಯನ್ನು ಸೇರಿದರೆ, ನಮಗೂ ಚಿಂತೆ ಇರೊಲ್ಲ."

"ಏನಂತೀಯ ಸುಧಾಕರ?" ಅಣ್ಣನ ಕಡೆ ತಿರುಗಿ ಕೇಳಿದಾಗ ಆತ ಕೈಯಾಡಿಸಿದರು.

"ನಾನು ಏನು ಹೇಳಲಿ? ಎಲ್ಲಾ ಈ ಹುಡುಗನದೇ ತೀರ್ಮಾನ. ನನಗೊಂದೂ ಗೊತ್ತಿಲ್ಲ"

"ಹಾಗಂದ್ರೆ ಹೇಗೆ? ವಸುಧಾ ನಿನ್ನ ಮಗಳು. ಅವಳನ್ನು ಮದುವೆ ಮಾಡಿ ಗಂಡನ ಮನೆಗೆ ಕಳಿಸಬೇಕಾದುದ್ದು ನಿನ್ನ ಕರ್ತವ್ಯ. ಇದುವರೆಗೆ ಏನೋ ನಡೆದುಹೋಯಿತು. ಈ ಹುಡುಗನ ಸದ್ಗುಣದಿಂದ ಎಲ್ಲಾ ಸರಿ ಹೋಗುವ ಕಾಲ ಬಂದಿದೆ. ಈಗ ನೀನು ಉದಾಸೀನ ಮಾಡಬೇಡ"

ತಂಗಿಯ ಮಾತಿಗೆ ಆತ ಏನೂ ಹೇಳಲಿಲ್ಲ. ಕಾತ್ಯಾಯಿನಿಯೇ ನುಡಿದಳು.

"ನಾನು ನಿಮ್ಮ ತಾಯಿಯ ಹತ್ತಿರ ಮಾತನಾಡಬೇಕು. ಯಾವಾಗ ಬರಲಿ?"

"ಯಾವಾಗ ಬೇಕಾದರೂ ಬನ್ನಿ. ಹಾಗೇ ವಸುಧಾಳನ್ನು ಕರೆದುಕೊಂಡು ಬನ್ನಿ. ನಮ್ಮ ತಾಯಿ, ತಂದೆ ನೋಡಬೇಕು ಅವಳನ್ನು"

"ಹಾಗಾದರೆ ಈಗಲೇ ಬರುತ್ತೇವೆ. ನಮಗೆ ಮನೆ ಗೊತ್ತಿಲ್ಲ. ನನ್ನ ಜತೇಲೇ ಬರುತ್ತೀವಿ" ಎಂದಳು ಆಕೆ ಶ್ರೀಕಾಂತನಿಗೆ ಯೋಚಿಸಲೂ ಅವಕಾಶವನ್ನು ಕೊಡದೇ.

"ವಸುಧಾ..... ಏಳು ಬೇಗ ರೆಡಿಯಾಗು. ಶ್ರೀಕಾಂತ ನಿನ್ನನ್ನು ಕರೆದುಕೊಂಡು ಹೋಗಲು ಬಂದಿದ್ದಾನೆ...... " ವಸುಧಾ ಛಂಗನೆ ಎದ್ದು ಹೊರಗೆ ಬಂದಳು.

"ಹಲೋ....... ಶ್ರೀ ಯಾವಾಗ ಬಂದ್ರೀ....." ಎಂದು ಕುಣಿಯುತ್ತಾ ಬಂದವಳನ್ನೇ ಸುಧಾಕರರಾಯರು ಗಮನಿಸಿದ್ದರು. ಮಗಳ ಈ ವರ್ತನೆ ಸರಿ ಎನಿಸಿರಲಿಲ್ಲ. ಆದರೆ ಮಗಳೊಡನೆ ಯಾವ ಮಾತನ್ನೂ ಆಡಬಾರದೆಂದು ನಿರ್ಧರಿಸಿದ್ದರು. ಶ್ರೀಕಾಂತನ ಗಲಿಬಿಲಿಯನ್ನು ಗಮನಿಸಿ, ತಾನೇ ಅಲ್ಲಿಂದ ಎದ್ದು ಹೋಗಿದ್ದರು.

ಶ್ರೀಕಾಂತ ಅವಳನ್ನು ತನ್ನೆದುರಿಗೆ ನಿಲ್ಲಿಸಿಕೊಂಡು, ಮೇಲಿನಿಂದ ಕೆಳಗೆ ಪರೀಕ್ಷಿಸುವವನಂತೆ ನೋಡಿದ.

"ಏನಾಗಿದೆ? ಯಾಕೆ ಹೀಗೆ ನೋಡ್ತಿದೀರಿ ಶ್ರೀ...... "

"ಸೀರೆ ಉಟ್ಟುಕೊಂಡು ಬಾ ನೋಡೋಣ. ಹೇಗೆ ಕಾಣಿಸ್ತೀಯಾಂತ. ಈ ಪ್ಯಾಂಟು ಷರ್ಟನಲ್ಲಿ ಒಳ್ಳೆ ಮಿಡ್ಲ್ ಸ್ಕೂಲಿಗೆ ಹೋಗೋ ಹುಡುಗಿಯ ತರಹ ಕಾಣಿಸ್ತಿದೀಯ"

"ನನಗೆ ಸೀರೆ ಉಟ್ಟುಕೊಳ್ಳೋಕೇ ಬರೊಲ್ಲವಲ್ಲ"

"ಅತ್ತೆ ಉಡಿಸ್ತಾರೆ. ಹೋಗು ಉಡಿಸಿಕೊಂಡು ಬಾ...... "

"ಓ.ಕೇ. ಎನ್ನುತ್ತಾ ಅವಳು ಅತ್ತೆಯನ್ನು ಹುಡುಕಿಕೊಂಡು ಹೊರಟಳು. ವಸುಧಾಳ ತಾಯಿಯ ಸೀರೆ, ರವಿಕೆಗಳು ಬೇಕಾದಷ್ಟು ಇದ್ದವು. ಆದರೆ ರವಿಕೆಗಳು ವಸುಧಾಳ ಅಳತೆಗಿಂತ ದೊಡ್ಡವು. ಕಾತ್ಯಾಯಿನಿ ನಕ್ಕಳು"

"ನಾನು ನಿನಗೆ ಸೀರೆ ಉಡುವುದನ್ನು ಹೇಳಿಕೊಡ್ತೀನಿ. ಆದರೆ ಇವತ್ತು ಬೇಡ. ಇವತ್ತು ಚೂಡಿದಾರ್ ಸೆಟ್ ಹಾಕ್ಕೋ ಪರವಾಗಿಲ್ಲ"

"ಶ್ರೀಕಾಂತ ಏನಾದರೂ ಅಂದರೇ....... "

"ಏನೂ ಅನ್ನೋಲ್ಲ. ನಾನು ಹೇಳ್ತೀನಿ" ವಸುಧಾ, ಬಂದು ವರದಿ

ಒಪ್ಪಿಸಿದಾಗ, ಶ್ರೀಕಾಂತ ಒಪ್ಪಲೇ ಬೇಕಾಯ್ತು. ಕಾತ್ಯಾಯಿನಿ ಹೇಳಿದಂತೆ, ತನಗೆ ಒಪ್ಪುವ ನೀಲಿ ಬಣ್ಣದ ಚೂಡಿದಾರ್ ಉಡುಪನ್ನು ತೊಟ್ಟು, ನೀಟಾಗಿ ತಲೆಬಾಚಿ ಕೂದಲನ್ನು ಎತ್ತಿಕಟ್ಟಿ ರಬ್ಬರ್ ಬ್ಯಾಂಡ್‌ನಿಂದ ಬಿಗಿದು, ಹಣೆಗೆ ಚಿಕ್ಕದಾಗಿ ಕುಂಕುಮವನ್ನೂ ಇಟ್ಟುಕೊಂಡು ಸಿಂಗರಿಸಿಕೊಂಡು ಹೊರಬಂದಳು. ಶ್ರೀಕಾಂತ ಅವಳ ಕಡೆ ನೋಡಿ ಮುಗುಳ್ನಕ್ಕ.

ಕಾತ್ಯಾಯಿನಿ ತಾನು ತನ್ನ ವಯಸ್ಸಿಗೆ ತಕ್ಕಂತೆ. ಶ್ರೀಮಂತಿಕೆಯನ್ನು ಮೆರೆಸುವಂತೆ ಸೀರೆ, ರವಿಕೆ ಉಟ್ಟು ಒಡವೆಗಳನ್ನು ಧರಿಸಿ, ಠಾಕೋ ಠೀಕಾಗಿ ಹೊರಬಂದಳು. ಹೊರಗೆ ವರಾಂಡದಲಿ ಕುಳಿತಿದ್ದ ಸುಧಾಕರರಾಯರನ್ನೂ ಬಲವಂತವಾಗಿ ಹೊರಡಿಸಿದಳು. ಡ್ರೈವರು ಕಾರು ತಂದು ನಿಲ್ಲಿಸಿದ. ಅವರೆಲ್ಲರೂ ಕಾರನ್ನು ಹತ್ತಿದರು. ಶ್ರೀಕಾಂತ ಸ್ಕೂಟರಿನಲ್ಲಿ ಮುಂದೆ ಮುಂದೆ ಹೊರಟ. ಒಂದು ಮಾತು ತಾಯಿಗೆ ಮುಂಚಿತವಾಗಿ ತಿಳಿಸಿದ್ದರೆ ಚೆನ್ನಾಗಿತ್ತೆನಿಸಿತ್ತು ಶ್ರೀಕಾಂತನಿಗೆ.

ಗೇಟಿನಲ್ಲಿ ವಿಶೂನ ಎತ್ತಿಕೊಂಡು ನಿಂತಿದ್ದ ರಮಾ ಶ್ರೀಕಾಂತನ ಸಂಜ್ಞೆಯನ್ನು ಗಮನಿಸಿ ಅಲ್ಲೇ ನಿಂತಳು. ಶ್ರೀಕಾಂತ ಒಳಗೆ ಹೋಗಿ ತಾಯಿಗೆ ಸುದ್ದಿ ಮುಟ್ಟಿಸಿದ. ತಾಯಿಯೊಡನೆ ಮಾತನಾಡುತ್ತಿದ್ದ ರಂಜಿನಿಯನ್ನು ಕಂಡು, ಯಾವಾಗ ಬಂದ್ಯೆ? ಭಾವ ಬರಲಿಲ್ವಾ? ಅಂತ ಕೇಳಿದ. ಅವಳು ಏನಾದರೂ ಕೇಳುವ ಮೊದಲೇ, ಅವಳ ಕೈಯಲ್ಲಿದ್ದ ಮಗನನ್ನು ಎತ್ತಿಕೊಂಡು, ಮುತ್ತಿಟ್ಟು ನುಡಿದ.

"ಅವರೆಲ್ಲಾ ಹೋಗುವವರೆಗೂ ಯಾರೂ ಏನೂ ಮಾತನಾಡಕೂಡದು. ಆಮೇಲೆ ನಾನು ಎಲ್ಲಾ ಹೇಳ್ತೀನಿ" ಎಂದ.

ಅಣ್ಣತಂಗಿ ಇಬ್ಬರು ಒಳಗೆ ಬಂದು ಸೋಫಾದ ಮೇಲೆ ಕುಳಿತರು. ವಸುಧಾ ವಿಶೂನ ಮಾತನಾಡಿಸುತ್ತಾ ಹೊರಗೇ ನಿಂತಳು. ಶ್ರೀಕಾಂತ ತನ್ನ ತಂದೆ ತಾಯಿಯರನ್ನು, ತಂಗಿಯನ್ನು ಅವರಿಗೆ ಪರಿಚಯ ಮಾಡಿಕೊಟ್ಟ. ಪಾರ್ವತಿ ಬೆರಗಿನಿಂದ ಕಾತ್ಯಾಯನಿಯನ್ನೇ ನೋಡಿದಳು. ಕಾರಿನಲ್ಲಿ ಬಂದ ಭಾವಿ ಬೀಗರನ್ನು ಹೇಗೆ ಉಪಚರಿಸಬೇಕೆಂದು ತಿಳಿಯದೇ ತಳಮಳ ಗೊಂಡಳು. ಶ್ರೀಕಾಂತ ತಾನೇ ಹೊರಗೆ ಹೋಗಿ ವಸುಧಾಳನ್ನು ಒಳಗೆ ಕರೆದುಕೊಂಡು ಬರುವಂತೆ ರಮಳಿಗೆ ಹೇಳಿ ಬಂದ.

ವಿಶೂನ ಎತ್ತಿಕೊಂಡು ಒಳಗೆ ಕಾಲಿಟ್ಟ ವಸುಧಾಳನ್ನೇ ಮನೆಯವರು ಬೆರಗಾಗಿ ನೋಡಿದರು. ಶ್ರೀಕಾಂತ ವಸುಧಾಳಿಗೆ ಎಲ್ಲರನ್ನೂ ಮತ್ತೊಮ್ಮೆ

ಪರಿಚಯ ಮಾಡಿಕೊಟ್ಟ.

"ನಮಸ್ಕಾರ ಅಂತ ಹೇಳಿ ಕೈ ಜೋಡಿಸು" ಎಂದು ಪಿಸುದನಿಯಲ್ಲಿ ಆಜ್ಞೆ ಮಾಡಿದ. ವಸುಧಾ ಗಲಿಬಿಲಿಗೊಂಡರೂ ನಗುನಗುತ್ತಾ ಎಲ್ಲರಿಗೂ ನಮಸ್ಕಾರ ಅಂತ ಕೈಜೋಡಿಸಿ ಹೇಳಿದಳು.

ಶ್ರೀಕಾಂತನ ತಾಯಿಗೆ ಮಾತ್ರ ಪಿಚ್ಚೆನಿಸಿತ್ತು. ಹುಡುಗಿ ನೋಡಿದರೆ ನಮ್ಮ ರಂಜನಿಗಿಂತ ಚಿಕ್ಕವಳೋ ಏನೋ ಅಂತ ಅನ್ನಿಸುತ್ತೆ..... ಅವರೇ ಒಬ್ಬರನ್ನೊಬ್ಬರು ಮೆಚ್ಚಿರುವಾಗ ತಾನು ಏನೂ ಹೇಳುವಂತಿಲ್ಲ ಎಂದುಕೊಂಡು ಸುಮ್ಮನಾದಳು.

ಕಾತ್ಯಾಯನಿ, ಪಾರ್ವತಿ ಎಲ್ಲಿ ತನ್ನ ಅಸಮ್ಮತಿ ಸೂಚಿಸುವಳೋ ಎಂದು ದಿಗಿಲಾಗಿ ನೆಟ್ಟಗೆ ಕೂತಿದ್ದಳು. ಪಾರ್ವತಿ ಹೆಚ್ಚಿಗೆ ಮಾತನಾಡಿರಲಿಲ್ಲ. ರಮಾ, ರಂಜನಿ, ವಸುಧಾಳನ್ನು ತನ್ನ ರೂಮಿಗೆ ಕರೆದುಕೊಂಡು ಹೋಗಿ ಮಾತನಾಡಿಸುತ್ತಿದ್ದಳು. ಕಾತ್ಯಾಯಿನಿ ಪಾರ್ವತಿಯೊಡನೆ ಮಾತನಾಡಿದಳು.

"ನನ್ನ ಅಣ್ಣನ ಆರೋಗ್ಯ ಸರಿಯಿಲ್ಲ. ಆದ್ದರಿಂದ ಆದಷ್ಟು ಬೇಗ ಮದುವೆ ಶಾಸ್ತ್ರವನ್ನು ಮುಗಿಸುವುದು ಒಳ್ಳೆಯದು ಅಂತ ನನ್ನ ಅಭಿಪ್ರಾಯ. ಆಮೇಲೆ ನನ್ನ ಜತೆಯಲ್ಲಿ ಅವನನ್ನು ಕರೆದುಕೊಂಡು ಹೋಗ್ತಿದೀನಿ"

"ನಿಮಗೆ ನಮ್ಮ ಮನೆಯಲ್ಲಿಯೂ ಮದುವೆ ನಡೆಯುತ್ತಿರುವ ವಿಷಯ ಗೊತ್ತಿರಬಹುದು. ಅದು ನೆರವೇರಲಿ ಮೊದಲು" ಅಲ್ಲವೇ?

"ಅದೇ ದಿವಸವೇ ಈ ಮದುವೆಯೂ ನೆರವೇರಿದರೆ ಸರಿ ಅಂತ ನನಗನ್ನಿಸುತ್ತೆ. ನಿಮ್ಮ ಮಗಳನ್ನು ಕಳಿಸಿಕೊಟ್ಟು, ನಿಮಗೂ ಬೇಸರವಾಗಿರುತ್ತೆ. ಆ ಜಾಗಕ್ಕೆ ವಸುಧಾ ಬರುತ್ತಾಳೆ" ಪಾರ್ವತಿಗೆ ಆಕೆಯವಾದ ಸರಿ ಎನಿಸಲಿಲ್ಲ. ಆದರೂ ರಮ ನನ್ನ ಮಗಳಲ್ಲ, ಸೊಸೆ. ಅವಳಿಗೆ ನಡೆಯುತ್ತಿರುವುದು ಎರಡನೇ ಮದುವೆ ಎಂದು ಹೇಳಿಕೊಳ್ಳಲು ಹೀನಾಯವೆನಿಸಿತ್ತು.

"ಹುಡುಗ ಅಮೆರಿಕಾದವನು, ಅವನಿಗೆ ಅರ್ಜೆಂಟು ಇರುವುದರಿಂದ ಸರಳವಾಗಿ ಮದುವೆ ಮಾಡಿ ಕೊಡ್ತಿದೀವಿ. ನಮಗೆ ಬೇಕಾದ ನೆಂಟರಿಷ್ಟರನ್ನೆಲ್ಲ ಕರೆಯುವಷ್ಟು ಸಮಯವೇ ಇಲ್ಲ ನಮಗೆ. ಶ್ರೀಕಾಂತನಿಗೆ ಯಾವ ಅರ್ಜೆಂಟೂ ಇಲ್ಲ, ಛತ್ರ ನೋಡಿ, ಸರಿಯಾದ ದಿನ ನೋಡಿ, ನಮ್ಮ ಬಳಗದವರನ್ನೆಲ್ಲ ಕರೆದು ಅದ್ದೂರಿಯಾಗಿ ಮದುವೆ ಮಾಡುವ ಆಸೆ ನಮಗೆ"

ಕಾತ್ಯಾಯಿನಿ ಹ್ಲಿ ಹ್ಲಿ ಅಂತ ನಕ್ಕಳು. "ನಿಮ್ಮ ಆಸೆ ಸಹಜವಾದುದೇ. ಆದರೆ ನನಗೂ ಇಲ್ಲಿ ಹೆಚ್ಚು ದಿನ ಇರಲು ಸಮಯವಿಲ್ಲ. ನಾನು ಮತ್ತೆ

ತಕ್ಷಣಕ್ಕೆ ಬರಲು ಆಗುವುದಿಲ್ಲ. ನಿಮಗೇ ಗೊತ್ತು. ನನ್ನ ಅಣ್ಣನ ಆರೋಗ್ಯ ಸರಿ ಇಲ್ಲ. ಅವನು ಹೆಚ್ಚು ಶ್ರಮಪಡುವಂತಿಲ್ಲ. ನನ್ನ ಅಣ್ಣ ಖರ್ಚಿಗೆ ಹಿಂಜರಿಯುವುದಿಲ್ಲ. ಇನ್ನಾರಿಗೆ ಮಾಡಬೇಕು? ಇರೋಳು ಇವಳ್ಳೊಬ್ಬಳೇ...... ಎಲ್ಲಾ ಅವಳಿಗೇ ಅವಳ ಗಂಡನಿಗೇ. ನೀವು ಹ್ಞೂಂ ಅನ್ನಿ ಮದುವೆಯಾಗಲಿ. ಆಮೇಲೆ ಅದ್ದೂರಿಯಾಗಿ ರಿಸೆಪ್ಷನ್ ಮಾಡಿದರಾಯ್ತು."

ಪಾರ್ವತಿ ಪೇಚಿಗೆ ಸಿಕ್ಕಿಬಿದ್ದಳು. ಶ್ರೀಕಾಂತನ ಮಾತಿಗೆ ಒಪ್ಪಿದ್ದಷ್ಟೇ. ವಸುಧಳನ್ನೇ ಸರಿಯಾಗಿ ನೋಡಿಲ್ಲ. ಈಗಾಗಲೇ ಈಕೆ ಮದುವೆ ಮುಗಿಸುವ ಆತುರದಲ್ಲಿದ್ದಾಳೆ. ಅವಳ ಕಸಿವಿಸಿ ಗಮನಿಸಿ ಕಾತ್ಯಾಯಿನಿ ನುಡಿದಳು.

"ಆಗಲಿ. ನೀವೆಲ್ಲಾ ಒಟ್ಟಿಗೇ ಕೂತು ಸಮಾಲೋಚನೆ ನಡೆಸಿ, ನಿಮ್ಮ ತೀರ್ಮಾನವನ್ನು ತಿಳಿಸಿ ಪರವಾಗಿಲ್ಲ. ವಸುಧಾ ಚಿಕ್ಕವಳೇ. ಅವಳ ಮದುವೆಗೆ ಆತುರವಿಲ್ಲ. ಆದರೆ ಒಬ್ಬರನ್ನೊಬ್ಬರು ಮೆಚ್ಚಿದ್ದಾರೆ. ಅವಳು ನಮ್ಮ ಜತೆ ಬರುವುದಿಲ್ಲ ಅಂತಾಳೆ. ಅವಳನ್ನು ಎಲ್ಲಿ ಬಿಟ್ಟು ಹೋಗುವುದು? ಗಂಡನ ಮನೆಯಾದರೆ ಕ್ಷೇಮ. ಹೆಣ್ಣು ಹುಡುಗಿಯರಿಗೆ ಅದೇ ತಾನೇ? ತಂದೆಯ ಮನೆ ಅಥವಾ ಗಂಡನ ಮನೆ"

ಎಲ್ಲಾ ಮಾತುಗಳನ್ನು ಕಾತ್ಯಾಯಿನಿ ತಾನೇ ಆಡಿ ಮುಗಿಸಿದ್ದಳು. ಅವರುಗಳು ಹೊರಡುತ್ತೀವಿ ಎಂದಾಗ, ಎಲ್ಲರಿಗೂ ಕಾಫಿ ತಿಂಡಿ ಕೊಟ್ಟಿದ್ದಾಯಿತು. ಎಲೆ ಅಡಿಕೆ ಹಣ್ಣನ್ನು ಅರಿಶಿನ ಕುಂಕುಮದೊಂದಿಗೆ ಕೊಟ್ಟಿದ್ದೂ ಆಯಿತು.

"ವಸುಧಾ...... ನೀನು ಬೇಕಾದರೆ ಇಲ್ಲೇ ಇರು. ನೋಡು ನಿನಗೆ ಇಲ್ಲಿ ಇಬ್ಬಿಬ್ಬರು ಸ್ನೇಹಿತೆಯರಿದ್ದಾರೆ" ಎಂದು ಕಾತ್ಯಾಯಿನಿ ನುಡಿದಾಗ ಇದು ಅತಿರೇಕವೆನಿಸಿತ್ತು. ಎಲ್ಲರಿಗೂ ವಸುಧಾ ಮಾತ್ರ ಖುಷಿಯಿಂದ ಒಪ್ಪಿಕೊಂಡಳು. ತಾಯಿಗೆ ಇಷ್ಟವಿಲ್ಲವೆನ್ನುವುದನ್ನು ಶ್ರೀಕಾಂತ ಅರಿತು ಪೆಚ್ಚಾದ.

ಅಣ್ಣ ತಂಗಿ ಇಬ್ಬರೂ ಹೊರಟು ಹೋಗಿದ್ದರು. ವಸುಧಾ, ರಮಾ ಏನೋ ಹರಟೆ ಹೊಡೆಯುತ್ತಿದ್ದರು. ಶ್ರೀಕಾಂತ ತಾಯಿಯೊಡನೆ ಮಾತನಾಡಲೆಂದು ಅಡಿಗೆ ಮನೆಗೆ ಬಂದ. ರಂಜನಿಯೂ ಬಂದು ಸೇರಿ ಕೊಂಡಳು.

"ನಾವು ಗಂಡಿನವರು ಆದರೂ, ನಮಗೆ ಒಂದು ಮಾತಿಗೂ ಅವಕಾಶ ಕೊಡದೇ ಎಲ್ಲಾ ಆಕೆಯೇ ಆಡಿದಳಲ್ಲೋ"

"ನೀನು ಏನೂ ಮಾತಾಡಲಿಲ್ಲ ಅಂತ ನಿನಗೆ ಬೇಜಾರೇನಮ್ಮಾ......?" ಕೀಟಲೆ ಮಾಡುವವನಂತೆ ನಗುತ್ತಾ ಕೇಳಿದ.

"ಹಾಗಲ್ಲ ಶ್ರೀಕಾಂತ, ಆಕೆಗೆ, ಆದಷ್ಟು ಬೇಗ ನಿಮ್ಮಿಬ್ಬರ ಮದುವೆ

ಮುಗಿಸಿ, ಊರಿಗೆ ಹೋಗಬೇಕೂಂತ." ಅದು ಹೇಗೆ ಸಾಧ್ಯ?

"ನೀನೇನಂದೆ?"

"ನನಗೇನಾದರೂ ಹೇಳೋಕೆ ಅವಕಾಶ ಎಲ್ಲಿತ್ತು? ನೀವೆಲ್ಲಾ ಕೂತು ಸಮಾಲೋಚನೆ ನಡೆಸಿ ನಮಗೆ ತಿಳಿಸಿ ಅಂತ ಆಕೇನೇ ಹೇಳಿದಾಳೆ"

"ಸರಿ ಮತ್ತೆ ಹೇಳಿದ್ರಾಯ್ತು. ನಮಗೇನೂ ಆತುರ ಇಲ್ಲ ಅಂತ. ಬೇಕಾದ್ರೆ ವಸುಧಾ ಇಲ್ಲಿರಲಿ"

"ಆಂ...... ಏನಂದೆ? ಪರರ ಮನೆ ಹುಡುಗಿ, ಮದುವೆಗೆ ಮುಂಚೆ ನಮ್ಮ ಮನೇಲಿ ಇರೋದು ಅಂದ್ರೇನು? ಬೇಡ ಬೇಡ......" ಅಡ್ಡಡ್ಡ ತಲೆ ಆಡಿಸಿದಳು.

"ಯಾಕಮ್ಮಾ ಹೀಗಾಡ್ತೀ? ರಂಜಿನಿ ಇರಲಿಲ್ವಾ? ರಮಾ ಇರಲಿಲ್ವಾ?"

"ರಂಜಿನಿ ಈ ಮನೆ ಮಗಳು. ರಮಾ ಸೊಸೆಯಾಗಿದ್ದವಳು. ರಂಜಿನೀನ ಅವಳ ಗಂಡನ ಮನೆಗೆ ಮದುವೆ ಮುಂಚೆ ಕಳಿಸಿದ್ದೆವೇ?"

"ಅವರು ಕೇಳಿರಲಿಲ್ಲ. ನಾವು ಕಳಿಸಲಿಲ್ಲ ಅಷ್ಟೇ."

"ಬಿಡು, ಆ ಮಾತೆಲ್ಲ ಯಾಕೆ? ಮದುವೆಗೆ ಮುಂಚೆ ಆ ಹುಡುಗಿ ಬಂದು ನಮ್ಮ ಮನೆಯಲ್ಲಿ ಇರುವುದು ನನಗೆ ಸುತರಾಂ ಇಷ್ಟವಿಲ್ಲ" ರಂಜಿನಿ ಕಿಸಕ್ಕನೇ ನಕ್ಕಾಗ ಶ್ರೀಕಾಂತ ಸಿಡುಕಿದ.

"ಹಾಗಾದರೆ ನಿನಗೆ ನನ್ನ ಮೇಲೆ ನಂಬಿಕೆ ಇಲ್ಲ ಅನ್ನು"

"ನಂಬಿಕೆ ಪ್ರಶ್ನೆ ಅಲ್ಲ ಶ್ರೀಕಾಂತ. ಅದು ಸರಿಯಲ್ಲ. ನಾವು ಮನೇಲಿ ದೊಡ್ಡೋರು ಇದ್ದುಕೊಂಡು ಇದಕ್ಕೆಲ್ಲ ಆಸ್ಪದ ಕೊಡಬಾರದು. ವಸುಧಂಗೆ ನೀನೇ ಉಪಾಯವಾಗಿ ಹೇಳು. ಅವಳು ಅವಳ ಅತ್ತೆ ಮನೆಯಲ್ಲಿ ಒಂದೆರಡು ತಿಂಗಳು ಇರಲಿ, ನಂತರ ಮದುವೆ ವಿಷಯ"

"ಅವಳಿಗೆ ಇಷ್ಟವಿಲ್ಲದಿದ್ದರೆ ನಾನು ಬಲವಂತ ಮಾಡೋಲ್ಲಮ್ಮ"

"ಯಾಕೋ? ಮದುವೆಗೆ ಮುಂಚೇನೇ ಅವಳಿಗೆ ಹೆದರ್ತೀಯಾ?" ರಂಜಿನಿ ಕೆಣಕಿದಳು.

"ನೀನು ಸುಮ್ಮನಿರು" ಎಂದು ಗದರಿದ.

"ರಂಜಿನಿ ಬಾ ಇಲ್ಲಿ, ನಾನು ನಿನ್ನ ಹತ್ತಿರ ಸ್ವಲ್ಪ ಮಾತನಾಡಬೇಕು" ಎಂದು ಹೇಳಿ ಅವಳನ್ನು ಹೊರಗೆ ಕರೆದುಕೊಂಡು ಹೋದ.

"ರಮಾ, ವಿಶೂನ ಸಧ್ಯಕ್ಕೆ ಅಮೆರಿಕಾಕ್ಕೆ ಕರೆದುಕೊಂಡು ಹೋಗುವುದು ಕಷ್ಟ. ಅಲ್ಲದೇ, ಅಮ್ಮ ಅಪ್ಪನಿಗೂ ಅವನು ನಮ್ಮ ಜತೇಲೇ ಇರಲಿ

ಅಂತ ಆಸೆ. ರಮಳಿಗೆ ಎರಡು ಆಸೆ. ಆದರೆ ಅವನನ್ನು ಸುಧಾರಿಸುವುದು ಅಮ್ಮನಿಗೆ ಕಷ್ಟವಾಗುತ್ತೆ. ನೀನು ಕರೆದುಕೊಂಡು ಹೋಗ್ತೀಯಾ? ಆಮೇಲೆ ವೀಸಾ ಸಿಕ್ಕ ಮೇಲೆ, ರಮಾ ಅವನನ್ನು ಕರೆಸಿಕೊಳ್ತಾಳೆ"

"ಮತ್ತೆ ಅಮ್ಮ ಹೇಳುತ್ತಿದ್ದಳು, ವಿಶೂ ಇಲ್ಲೇ ಇರ್ತಾನೆ ಅಂತ"

"ಅಮ್ಮಂಗೆ ಅದೇ ಆಸೆ. ಪ್ರಕಾಶನ ನೆನಪಾಗಿ ಅವನು ಇಲ್ಲೇ ನಮ್ಮ ಮನೇಲಿ ಇರಲಿ ಅಂತ. ಆದರೆ ಅವನಿಗೆ ತಾಯಿ ಬೇಡ್ವಾ!"

"ನೀನು ಹೇಗೆ ಅವನನ್ನು ಬಿಟ್ಟರುತ್ತೀಯೋ? ಬಹಳ ಹಚ್ಚಿಕೊಂಡು ಬಿಟ್ಟಿದೀ ಅವನನ್ನು"

"ಅದೇ ನನಗೆ ಕೊರೆಯುತ್ತಿರುವುದು. ಒಂದು ಸಾರಿ ಅವನನ್ನು ಇಲ್ಲಿಂದ ಕಳಿಸಿ ಬಿಟ್ಟರೇ ಆಮೇಲೆ ಅವನ ಸಂಬಂಧವೇ ಕಡಿದು ಹೋಗುತ್ತದೆ. ಅವನನ್ನು ಇಲ್ಲಿಯೇ ಉಳಿಸಿಕೊಳ್ಳುವ ಆಸೆ ನನಗೆ. ಅದಕ್ಕೆ ನಿನ್ನನ್ನು ಕೇಳಿದ್ದು. ಅಥವಾ ನೀನೇ ಸ್ವಲ್ಪ ದಿನ ಇಲ್ಲಿ ಇರೋಕ್ಕೆ ಆಗುತ್ತಾ?"

"ಇಲ್ಲಪ್ಪಾ..... ನಿನ್ನ ಭಾವ ಏನಂತಾರೋ?"

"ಎಲ್ಲಾದಕ್ಕೂ ನನ್ನ ಭಾವನ್ನ ಕೇಳಬೇಕು. ರಮಂಗೆ ತಿಳಿದರೆ ನೊಂದು ಕೊಳ್ಳಲ್ವಾ!"

"ರಮನ ತಾಯಿ ಮನೇಲಿ ಬಿಟ್ಟರೇ...... "

"ಚೆನ್ನಾಗಿದೆ. ಅವರು ಯಾಕೆ ನೋಡಿ ಕೊಳ್ತಾರೆ? ಅವನು ನಮ್ಮ ಮನೆಯವನು, ನಮಗೆ ಸೇರಿದವನು, ಅವನ ಜವಾಬ್ದಾರಿ ನಮ್ಮದು"

"ನಂಗೆ ಗೊತ್ತಾಗ್ತಾ ಇಲ್ಲ. ಏನು ಹೇಳಬೇಕೂಂತ"

"ಹಾಗಾದ್ರೆ ಅಮ್ಮನಿಗೆ ಹೇಳಿ, ವಸುಧಾ ಇಲ್ಲಿರಲು ಒಪ್ಪಿಸು. ಅವಳಿಗೂ ಬೇರೆ ಕೆಲಸವಿಲ್ಲ. ವಿಶೂನ ನೋಡಿ ಕೊಳ್ತಾಳೆ"

"ಅವಳೇ ಚಿಕ್ಕವಳು. ಮುದ್ದಿನಿಂದ ಬೆಳೆದವಳು. ಅವಳ ಕೈಲಿ ವಿಶೂನ ನೋಡಿಕೊಳ್ಳೋಕೆ ಆಗುತ್ತಾ?"

"ಅಮ್ಮಾ ಇರ್ತಾಳಲ್ಲ. ಅಮ್ಮನಿಗೆ ಸಹಾಯಕಳಾಗಿ ವಸುಧಾ ಇರ್ತಾಳೆ"

"ಬರ್ತಿದ್ದಾ ಹಾಗೇ ಜವಾಬ್ದಾರಿ ಅಂತ ಬೇಜಾರು ಮಾಡಿಕೊಂಡರೇ"

"ಇಲ್ಲ, ಹಾಗೇನೂ ಆಗೊಲ್ಲ...... ನಾನೂ ಇರ್ತೀನಲ್ಲ ಜತೆಗೆ"

"ಆದರೂ ಇದೆಲ್ಲ ಯಾಕೋ ಸರಿ ಅಲ್ಲ ಅಂತ ಅನ್ನಿಸುತ್ತೆ ಶ್ರೀಕಾಂತ. ಅವಳಿಗೇಕೆ ಈ ಜವಾಬ್ದಾರಿ ವಹಿಸ್ಕೋಬೇಕು?"

"ಹಾಗಾದರೆ ವಿಶೂನ ನಮ್ಮ ಮನೇಲಿ ಇಟ್ಟುಕೊಳ್ಳೋ ಆಸೇನ ಬಿಟ್ಟು

ಬಿಡಬೇಕು. ಹಾಗಂತ ಅಮ್ಮನಿಗೆ ಹೇಳಿಬಿಡು" ಅಮ್ಮನ್ನ ಒಪ್ಪಿಸು.

"ನಾನು ಹೇಗೆ ಹೇಳಲೋ? ಅಮ್ಮ ಅಳ್ತಾಳೆ ಅಷ್ಟೇ"

"ಹಾಗಾದರೆ ಯಾರಿಗೂ ಏನೂ ಹೇಳೊಕ್ಕೆ ಮಾಡೋಕೆ ಇಷ್ಟವಿಲ್ಲ. ಹೀಗಾದ್ರೆ ಹೇಗೆ? ಹಾವೂ ಸಯಲ್ಲ. ಕೋಲು ಮುರಿಯಲ್ಲ ಅನ್ನೋ ಹಾಗೆ. ಯಾವುದಾದ್ರೂ ತೀರ್ಮಾನವಾಗಬೇಡವೇ....... "

"ಈಗ ಈ ಮನೆಗೆ ನೀನೇ ಯಜಮಾನ. ನಿನಗೆ ಹೇಗನ್ನಿಸುತ್ತೊ ಹಾಗೇ ಮಾಡು. ಯಾರನ್ನು ಏನು ಕೇಳಬೇಡ"

"ಥ್ಯಾಂಕ್ಸ್. ಸಧ್ಯ ಇಷ್ಟು ಸಲಹೆನಾದ್ರೂ ಕೊಟ್ಟೆಯಲ್ಲ. ಅದಕ್ಕೂ ಭಾವನನ್ನು ಕೇಳಬೇಕು ಅಂತ ಅನ್ನಲಿಲ್ಲವಲ್ಲ"

"ಥೂ..... ಹೋಗೋ....... "

"ಆಗಲಿ ಹೋಗ್ತೀನಿ. ರಮಳ ಮದುವೆ ಆಗಲಿ. ಅದೇನೇನು ಆಗಬೇಕೋ ಅದೆಲ್ಲಾ ತಾನಾಗಿಯೇ ನಿರ್ಧಾರವಾಗುತ್ತೆ. ಹಾಗಂತ ಅಮ್ಮನಿಗೆ ಹೇಳಿಬಿಡು. ನಾನು ವಸುಧನ್ನ ಅವರ ಮನೆಗೆ ಬಿಟ್ಟು ಅವರುಗಳಿಗೆ ವಿಷಯ ತಿಳಿಸಿ, ಎಲ್ಲಾ ಸಿದ್ಧತೆ ಮಾಡುವಂತೆ ತಿಳಿಸಿ ಬರ್ತೀನಿ" ಅಂತಂದ.

ರಂಜಿನಿ ಓಡಿ ಹೋಗಿ ತಾಯಿಗೆ ಸುದ್ದಿ ಮುಟ್ಟಿಸಿದಳು. ಪಾರ್ವತಿ ಅಲವತ್ತು ಕೊಂಡಳು.

"ನೋಡೇ ರಂಜಿನಿ, ನಮ್ಮ ಮನೇಲಿ ನಡೆಯುವುದೆಲ್ಲಾ ಹೀಗೇನೆ. ಪ್ರಕಾಶ ನೋಡಿದರೆ ಒಂದು ತರಹ ಹೊಟ್ಟೆ ಉರಿಸಿದ. ಈಗ ನೋಡಿದರೆ ಇವನು ಹೀಗಾಡುತ್ತಾನೆ. ಒಂದು ಸಲ ಅವನ ಮನಸ್ಸಿಗೆ ಬಂದು ಬಿಟ್ಟರೆ ಆಯ್ತು. ಬ್ರಹ್ಮನೇ ಬಂದರೂ ಅವನು ಅವನ ಮನಸ್ಸನ್ನೂ ಬದಲಾಯಿಸುವುದಿಲ್ಲ. ಇದುವರೆಗೂ ರಮನ್ನ ಉದ್ಧಾರ ಮಾಡಿದ್ದಾಯ್ತು. ಈಗ ಆ ವಸುಧನ್ನ. ನೀನೇ ನೋಡಿದೆಯಲ್ಲ, ನಮ್ಮ ಶ್ರೀಕಾಂತನಿಗೂ ಅವಳಿಗೂ ವರಸಾಮ್ಯವಾಗುವುದೇ ಇಲ್ಲ. ಆ ಚಿಕ್ಕವಯಸ್ಸಿನ ಹುಡುಗಿಯನ್ನು ಕಟ್ಟಿಕೊಂಡು ಇವನೇನು ಸುಖಪಡ್ತಾನೆ ನೀನೇ ಹೇಳು. ಏನಾದರೂ ಆಡಿದರೆ ಮಾತ್ರ ಎಲ್ಲರಿಗೂ ನನ್ನ ಮಾತು ತಪ್ಪಾಗಿ ಕಾಣುತ್ತೆ" ಎಲ್ಲರೂ ನನಗೆ ತಿಳುವಳಿಕೆ ಹೇಳೋರೇ.

"ಹೋಗಲಿ ಬಿಡಮ್ಮ. ನೀನು ಪಡೆದುಕೊಂಡು ಬಂದದ್ದೇ ಇಷ್ಟು ಅಂತ ಸಮಾಧಾನ ಮಾಡ್ಕೋ...... "

"ಸರಿ. ನೀನೂ ನನಗೇ ವೇದಾಂತ ಹೇಳ್ತೀಯ. ದೇವರು ನನ್ನನ್ನು

ಯಾಕೆ ಹೀಗೆ ಪರೀಕ್ಷೆ ಮಾಡ್ತಾನ್ಸೋ? ಎಲ್ಲಿ ಕರಿ ಅವನನ್ನು, ನಾನು ಅವನ ಹತ್ತಿರ ಮಾತನಾಡಬೇಕು"

"ನೀನು ಅವನನ್ನು ಬೈಯ ಬೇಡಮ್ಮ. ಮೊದಲೇ ಸಾಕಷ್ಟು ದುರಂತಗಳು ನಡೆದಿವೆ. ಅವನು ನೆಮ್ಮದಿಯಿಂದ ಮದುವೆಯಾಗಲಿ. ಅವರಿಬ್ಬರೂ ಸುಖವಾಗಿರಲಿ"

"ಅವನು ಸುಖವಾಗಿರಲಿ ಅಂತ ನನಗೂ ಆಸೆ ಇಲ್ಲವೇ. ಅದರಿಂದಲೇ ತಾನೇ ನಾನು ಚಕಾರ ಎತ್ತದೇ ಆ ಹುಡುಗಿಯನ್ನು ಒಪ್ಪಿದ್ದು. ಇರಲಿ ಕರಿ ಅವನನ್ನು ಮಾತಾಡ್ತೀನಿ. ಬೈಯೊಲ್ಲ"

ಶ್ರೀಕಾಂತ ವಸುಧಾಳೊಡನೆ ಬಂದು, ಅಡಿಗೆ ಮನೆ ಬಾಗಿಲಲ್ಲಿ ನಿಂತ.

"ನಾನು ಇವಳನ್ನು ಮನೆಗೆ ಬಿಟ್ಟು, ಹಾಗೇ ಸಿದ್ಧತೆಗಳನ್ನು ಮಾಡಿಕೊಳ್ಳಿ ಅಂತ ಹೇಳಿಬಿಟ್ಟು ಬರ್ತೀನಿ"

"ಅದನ್ನೇ ಹೇಳೋಣ ಅಂತ ಕರೆದೆ. ಅವರು ಏನು ಕೊಡ್ತಾರೆ."

"ಏನು ಕೊಡ್ತಾರೆ ಏನು ಕೊಡೋಲ್ಲ ಅನ್ನೋದರ ಮೇಲೆ ನನಗೆ ಆಸಕ್ತಿ ಇಲ್ಲ. ಆದರೆ ಕಚ್ಚುಕಟ್ಟಾಗಿ ಮದುವೆ ಮಾಡಿ ಕೊಡಲಿ ಅಂತ ನನ್ನ ಆಸೆ. ಏನೇ ಕೊಟ್ಟರೂ ಅದು ನಿಮ್ಮಿಬ್ಬರಿಗೇ ತಾನೇ. ನಮ್ಮ ಮನೇಲೂ ಇದೇ ಕೊನೆ ಮದುವೆ. ನಮ್ಮ ನೆಂಟರಿಷ್ಟರನ್ನು ಕರೆಯಬೇಕೂಂತ ನನಗೂ ಆಸೆ"

ಶ್ರೀಕಾಂತ ಏನೂ ಮಾತಾಡಲಿಲ್ಲ.

"ವಸುಧಾ ಅಮ್ಮಂಗೆ ನಮಸ್ಕಾರ ಮಾಡು" ಎಂದ. ಅವಳು ಬಾಗಿ ನಮಸ್ಕರಿಸಿದಳು. ಪಾರ್ವತಿ ಹರಸಿದಳು. ಶ್ರೀಕಾಂತ ತಾನೂ ನಮಸ್ಕರಿಸಿದ.

"ನಡೀ ವಸುಧಾ" ಎನ್ನುತ್ತಾ ಅವಳ ಕೈ ಹಿಡಿದು ಹೊರಟ. ರಂಜಿನಿ ಕಿಸಕ್ಕನೇ ನಕ್ಕಳು.

"ನೋಡಿದ್ಯೇನೇ ಅವನೆಷ್ಟು ಜಾಣ. ಅವನೇನೂ ಮಾತಾಡಲೇ ಇಲ್ಲ. ಎಲ್ಲಾ ಆಕೆ ಹೇಳಿದಂತೇ ನಡೆಯುತ್ತೆ. ನನ್ನ ಮಾತಿಗೆ ಬೆಲೆಯೇ ಇಲ್ಲವಲ್ಲೇ"

"ಹೋಗಲಿ ಬಿಡಮ್ಮ. ಸದಾ ನಿನಗೆ ನೀನೇ ಬೆಲೆ ಇಲ್ಲ ಬೆಲೆ ಇಲ್ಲ ಅಂತ ಯಾಕೆ ಹೇಳಿಕೊಳ್ತೀಯ? ನಿನಗೆ ಇರೋ ಬೆಲೆ ಇದ್ದೇ ಇದೆ. ಕಡಿಮೆ ಆಗಿಲ್ಲ" ಅಂತ ಮಗಳು ಹೇಳಿದಾಗ, ಪಾರ್ವತಿ ಕಣ್ಣೀರನ್ನು ಒರೆಸಿಕೊಂಡಳು.

' ಪಾರ್ವತಿಯ ಆಸೆಗಳಿಗೆ, ಆದಷ್ಟು ಚ್ಯುತಿ ಬರದಂತೆ, ಮದುವೆಯ ಕಲಾಪಗಳನ್ನು ನೆರವೇರಿಸುವುದಾಗಿ ಕಾತ್ಯಾಯಿನಿ ಆಶ್ವಾಸನೆ ಇತ್ತಳು.

ಹಣವಂತರು, ಕೆಲಸ ಸುಸೂತ್ರವಾಯಿತು. ಛತ್ರವೂ ಸಿಕ್ಕಿತು. ಅಡಿಗೆಗೆ ಕಾಂಟ್ರಾಕ್ಟ್ ಕೊಟ್ಟರು. ತಕ್ಷಣವೇ ಬರಬೇಕೆಂದು, ತಂದೆ ತಾಯಿ, ಅಣ್ಣ ಅತ್ತಿಗೆಗೆ ತಿಳಿಸಿದ್ದೂ ಆಗಿತ್ತು. ತಂದೆ ತಾಯಿ ಮಾತ್ರ ಬರುವುದಾಗಿ ತಿಳಿಸಿದ್ದರು.

ಇಲ್ಲಿ ರಮಾಳ ಮದುವೆಗೆ ಯಾವ ಸಿದ್ಧತೆಯನ್ನು ಮಾಡಬೇಕಾಗಿರಲಿಲ್ಲ. ದೇವಸ್ಥಾನದಲ್ಲಿ ಸರಳ ಮದುವೆ, ಹತ್ತಿರದ ಬಳಗದವರ ಊಟ ತಿಂಡಿಯನ್ನೆಲ್ಲ, ದೇವಸ್ಥಾನದ ಅರ್ಚಕರ ಮನೆಯವರೇ ವಹಿಸಿಕೊಂಡಿದ್ದರು.

ರಮಾ, ಪ್ರಕಾಶನ ಮರಣಾನಂತರ ಮದುವೆಯ ಸಮಯದಲ್ಲಿ ಹಾಕಿದ್ದ ಒಡವೆಗಳನ್ನೆಲ್ಲ ವಾಪಸ್ಸು ಕೊಟ್ಟು ಬಿಟಿದ್ದಳು. ಪಾರ್ವತಿ ಜ್ಞಾಪಿಸಿಕೊಂಡು, ಅದನ್ನೆಲ್ಲ ರಮಳ ಕೈಗೆ ಹಾಕಿದಳು.

"ಇದೆಲ್ಲಾ ಒಡವೆಗಳು ನಿನ್ನವೇ..... ನೀನೇ ತೊಟ್ಟುಕೊ" ರಮ ಬೇಡವೆನ್ನಲಿಲ್ಲ. ದುಃಖವುಕ್ಕಿತ್ತು.

"ಹೊಸ ಬಾಳು ಪ್ರಾರಂಭ ಮಾಡ್ತಾ ಇದೀಯ. ನಗು ನಗುತ್ತಾ, ನಮ್ಮ ಮನೆಯಿಂದ ಹೋಗಬೇಕು. ಆದದ್ದೆಲ್ಲ ಕೆಟ್ಟ ಕನಸು ಅಂತ ಮರೆತು ಬಿಡು" ಎಂದು ಪಾರ್ವತಿ ನುಡಿದಾಗ ರಮಾ ಮತ್ತು ಅತ್ತಳು.

"ಅಮ್ಮಾ ನನ್ನ ಮೇಲೆ ಕೋಪ ಇಲ್ವಾ?"

"ಕೋಪ ಯಾಕೆ ಮಾಡಿಕೊಳ್ಳಲೇ ತಾಯಿ..... ನಮ್ಮ ಕಣ್ಣೆದುರಿಗೆ ನೀನು ಹೀಗೆ ಇದ್ದುದನ್ನು ನೋಡಿ ಹೊಟ್ಟೆಯಲ್ಲಿ ಸಂಕಟವಾಗುತ್ತಿತ್ತು. ಈಗ ನೀನು ಸುಖಮಯ ಜೀವನ ನಡೆಸುವಂಥಾದ್ದು ನನಗೆ ನಿಜಕ್ಕೂ ಸಂತೋಷವೇ....." ರಮಳನ್ನ ತಬ್ಬಿಕೊಂಡು ಅತ್ತಾಗ, ರಂಜನಿಯೂ ಕಣ್ಣೀರು ಸುರಿಸಿದಳು. ಎಲ್ಲರಿಗೂ ಪ್ರಕಾಶನ ನೆನಪಾಗಿತ್ತು.

ಮೊದಲು ನೆರವೇರಿದ್ದು ಶ್ರೀಕಾಂತನ ಮದುವೆ. ಊರಿಗೆ ವಾಪಸ್ಸಾಗಿದ್ದ, ವಸುಧಾಳ ತಾತ, ಅಜ್ಜಿ ಹಸೆ ಮೇಲೆ ಕೂತು ಧಾರೆ ಎರೆದುಕೊಟ್ಟರು. ಅವರ ಕಡೆಯ ನೆಂಟರೆಲ್ಲಾ ಬಂದಿದ್ದರು. ಶ್ರೀಕಾಂತನ ಮನೆಯವರೂ ತಮ್ಮ ಹತ್ತಿರದ ನೆಂಟರನ್ನು ಮಾತ್ರ ಆಮಂತ್ರಿಸಿದ್ದರು.

ಪುಟ್ಟ ಹುಡುಗಿಯಂತೆ, ವಸುಧಾ ಸೀರೆ ಉಟ್ಟು ಕಷ್ಟಪಡುತ್ತಿರುವುದನ್ನು ಎಲ್ಲರೂ ತಮಾಷೆ ಎಂಬಂತೆ ನೋಡಿದ್ದರು. ಪಾರ್ವತಿ, ಪುರೋಹಿತರಿಗೆ ಹೇಳಿ ಹೇಳಿ, ಯಾವ ಕಲಾಪವೂ ಕಡಿಮೆಯಾಗದಂತೆ ಎಲ್ಲಾ ಶಾಸ್ತ್ರಗಳನ್ನು ನೆರವೇರಿಸಿದಳು. ಸಾಯಂಕಾಲದ ರಿಸೆಪ್ಶನ್ ನಂತರ ಎಲ್ಲರೂ ಮನೆಗೆ ಮದುಮಕ್ಕಳೊಂದಿಗೆ ವಾಪಸ್ಸಾದರು. ವಸುಧಾಳನ್ನು ಅತ್ತೆ ಮನೆಯಲ್ಲಿ

ಬಿಟ್ಟು ಅವರುಗಳು ತಮ್ಮ ಮನೆಗೆ ಹೊರಟು ಹೋಗಿದ್ದರು.

ಭಾರಿ ಸೀರೆಯನ್ನು ಬಿಚ್ಚಿಟ್ಟು, ರಂಜನಿಯ ಸಹಾಯದಿಂದ ಬೇರೆ ಸೀರೆಯನ್ನು ಉಟ್ಟು ಸುಸ್ತಾಗಿ ಕುಳಿತಿದ್ದ ವಸುಧಾಳಿಗೆ ಕುಳಿತಲ್ಲೇ ನಿದ್ದೆ ಒದ್ದುಕೊಂಡು ಬರುತ್ತಿತ್ತು. ವಿಶೂ ನೆಲದ ಮೇಲೆ ಕೂತು ಆಟವಾಡುತ್ತಿದ್ದ. ಕಡೆಗೆ ತಡೆಯಲಾರದೇ ಅಲ್ಲಿದ್ದ ಸೋಫಾದ ಮೇಲೆ ಒರಗಿ ಮಲಗಿದಳು. ನಿದ್ದೆ ಬಂದಿತ್ತು. ಯಾರಿಗೂ ಅವಳ ಮೇಲೆ ಗಮನವಿಲ್ಲ. ಎಲ್ಲರೂ ಮಾರನೇ ದಿನ ನಡೆಯಲಿದ್ದ ರಮಾಳ ಮದುವೆಯ ಬಗ್ಗೆ ಚರ್ಚೆ ನಡೆಸುತ್ತಾ ಬಟ್ಟೆ ಇತ್ಯಾದಿಗಳನ್ನು ಜೋಡಿಸಿ ತೆಗೆದಿಟ್ಟುಕೊಳ್ಳುತ್ತಿದ್ದರು.

ತಮ್ಮ ತಮ್ಮ ಕೆಲಸಗಳನ್ನು ಮುಗಿಸಿ, ಎಲ್ಲರೂ ಮಲಗಲು ಹೊರಟು ಹೋದರು. ಶ್ರೀಕಾಂತ ಸಹ ಮಲಗಲೆಂದು ತನ್ನ ರೂಮಿಗೆ ಹೋಗಿದ್ದವನು ಮತ್ತೆ ಹಿಂದೆ ಬಂದು ವಸುಧಾಳನ್ನು ಎಬ್ಬಿಸಲು ನೋಡಿದ. ಗಾಢ ನಿದ್ದೆಯಲ್ಲಿ ಮುಳುಗಿದ್ದವಳು ಅಲ್ಲಾಡಲಿಲ್ಲ. ಅತ್ತಿತ್ತ ನೋಡಿ, ಅವಳನ್ನು ಅನಾಮತ್ತು ಎತ್ತಿಕೊಂಡು ತನ್ನ ರೂಮಿಗೆ ಒಯ್ದು ಮಂಚದ ಮೇಲೆ ಮಲಗಿಸಿದ. ಅತಿ ಹಗುರವಾಗಿದ್ದವಳನ್ನು ಎತ್ತಿದ್ದರಿಂದ ಆಯಾಸವೇನೂ ಆಗಿರಲಿಲ್ಲ. ಅಷ್ಟಾದರೂ ಅವಳಿಗೆ ಎಚ್ಚರವಿಲ್ಲ. ರೂಮಿನ ಬಾಗಿಲನ್ನು ಭದ್ರಪಡಿಸಿ, ತಾನೂ ಬಟ್ಟೆ ಬದಲಾಯಿಸಿ ಮಲಗಿದ. ಆದರೆ ಅವನಿಗೆ ಮಾತ್ರ ನಿದ್ದೆ ಇಲ್ಲ. ಮಂದವಾಗಿ ಕಾಣುತ್ತಿದ್ದ ಬೆಳಕಿನಲ್ಲಿ ಆಗಾಗ ವಸುಧಾಳ ಕಡೆ ನೋಡುತ್ತಿದ್ದ. ಆಯಾಸದಿಂದ ಬಳಲಿ ಮಲಗಿದ ಮಗುವಿನಂತೆ ಮುಗ್ಧವಾಗಿ ಕಾಣುತ್ತಿದ್ದಳು. ತಾನು ದುಡುಕಿದೆನೇನೋ ಅಂತ ಮೊಟ್ಟ ಮೊದಲ ಬಾರಿಗೆ ಅನ್ನಿಸಿತ್ತು.

ಬೆಳಗಿನ ಝಾವ ಇವನಿಗೆ ಎಚ್ಚರವಾದಾಗ, ಇನ್ನು ಸ್ವಲ್ಪ ಹೊತ್ತು ಮಲಗಿರುವ ಮನಸ್ಸಾಗಿತ್ತು. ಆಯಾಸದಿಂದ ಯಾವಾಗಲೋ ಸ್ವಲ್ಪ ನಿದ್ದೆ ಹತ್ತಿತ್ತು. ಆದರೆ ವಸುಧಾ ಮಾತ್ರ ಅಲುಗಾಡದೇ ಮಲಗಿದ್ದಳು. ತಾನೀಗ ಏಳಲೇ ಬೇಕು. ಬೇಕಾದಷ್ಟು ಕೆಲಸಗಳಿವೆ ಎಂದುಕೊಂಡು ಎದ್ದ. ಮುದುರಿ ಮಲಗಿದ್ದವಳಿಗೆ ಸರಿಯಾಗಿ ಹೊದಿಕೆ ಹೊದಿಸಿ, ಅವಳ ಮುಂಗುರುಳು ಸವರಿ, ಬಾಗಿಲನ್ನು ತೆಗೆದು, ಹೊರಬಂದು ಮತ್ತೆ ಹಾಕಿದ.

ತಾಯಿ ಕೇಳಿದಳು. "ನೀನ್ಯಾಕೆ ಇಷ್ಟು ಬೇಗ ಎದ್ದೆ? ಬೇಕಾದರೆ ಇನ್ನೂ ಸ್ವಲ್ಪ ಹೊತ್ತು ಮಲಗಿರು"

"ರಮಾ ಎದ್ದಳಾ?" ಮರು ಪ್ರಶ್ನೆ ಹಾಕಿದ.

"ಹುಂ. ಎದ್ದಿರಬಹುದು. ರಂಜನಿ, ಅವಳು ಇಬ್ಬರೂ ತುಂಬಾ ಹೊತ್ತು

ಮಾತನಾಡುತ್ತಿದ್ದರು" ಶ್ರೀಕಾಂತ ರಮಳ ರೂಮಿನ ಬಾಗಿಲನ್ನು ಬಡಿದ. ರಂಜಿನಿ ಬಾಗಿಲು ತೆಗೆದಳು.

"ರಮಾ ರಾತ್ರಿಯೆಲ್ಲಾ ಅಳುತ್ತಾ ಇದ್ದಳು. ಈಗ ಸ್ವಲ್ಪ ನಿದ್ದೆ ಹತ್ತಿದೆ. ಎಬ್ಬಿಸಲೋ ಬೇಡವೋ?"

"ಬೇಡ ಬಾ...... " ಎಂದವನಿಗೆ ಆತಂಕವಾಗಿತ್ತು.

"ಅವಳಿಗೆ ಈ ಮನೆ ಬಿಟ್ಟು ಹೋಗಲು ಸುತರಾಂ ಇಷ್ಟವಿಲ್ಲ" ಎಂದ. ಅವನ ಕಣ್ಣಿನಲ್ಲೂ ನೀರೂರಿತ್ತು. ಅಣ್ಣ ತಂಗಿ ಇಬ್ಬರೂ ಮಾತಿಲ್ಲದೇ ಸುಮ್ಮನೇ ಕೂತಿದ್ದರು. ರಮಾ ಎಲ್ಲರೊಂದಿಗೆ ಬೆರೆತು ಕಲೆತು ಹೋಗಿದ್ದಳು. ಎಲ್ಲರಿಗೂ ದುಗುಡವೇ.

ಆದರೂ, ಆ ಸಮಯ ಬಂದೇ ಬಿಟ್ಟಿತು. ಎಲ್ಲರೂ ದೇವಸ್ಥಾನವನ್ನು ತಲುಪಿದ ಕೆಲವೇ ಗಂಟೆಗಳಲ್ಲಿ ಸಂಕ್ಷಿಪ್ತವಾದ ಕಲಾಪಗಳೊಂದಿಗೆ, ಅಶೋಕ-ರಮಾಳ ವಿವಾಹ ನೆರವೇರಿತ್ತು. ಭೋಜನದ ನಂತರ ರಮಾ ಗಂಡನೊಡನೆ ಹೊರಟಳು. ಅಶೋಕ ತನ್ನ ಮಗಳನ್ನು ಎತ್ತಿಕೊಂಡಿದ್ದ.

ಶ್ರೀಕಾಂತನ ಕೈಯ ಹಿಡಿದು ರಮಾ "ಥ್ಯಾಂಕ್ಸ್" ಹೇಳಿದ್ದಳು.

ಉಳಿದ ಮಾತುಗಳು ಗಂಟಲಿನಲ್ಲೇ ಉಳಿದಿದ್ದವು. ರಂಜಿನಿಯ ಸೊಂಟದಲ್ಲಿದ್ದ ವಿಶೂನನ್ನು ಎತ್ತಿಕೊಂಡು ಮುದ್ದಾಡುವ ಬಯಕೆಯಾದರೂ ತಡೆದುಕೊಂಡಳು. ಅತ್ತೆಮಾವರಿಗೆ ನಮಸ್ಕರಿಸಿ, ವಸುಧಾಳ ಬಳಿಗೆ ಬಂದಳು.

ವಿಶೂ ಕಡೆ ಕೈ ಮಾಡಿ ತೋರಿಸಿ, "ವಸುಧಾ...... ನಿನ್ನ ಆಸೆಯಂತೆ ವಿಶೂನ ನಿನಗೆ ಒಪ್ಪಿಸಿದೀನಿ. ಇನ್ನು ಮುಂದೆ ಅವನು ನಿನ್ನ ಹಿರಿಯ ಮಗ" ಎಂದು ಹೇಳಿ ವಸುಧಾಳನ್ನು ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು. ಅಲ್ಲಿದ್ದವರೆಲ್ಲಾ ಕಣ್ಣು ಮೂಗನ್ನು ಒರೆಸಿಕೊಳ್ಳುತ್ತಿದ್ದರು. ಶ್ರೀಕಾಂತ ಅವಳನ್ನು ಕಾರಿನ ತನಕ ಕರೆದುಕೊಂಡು ಬಂದ.

"ಅಶೋಕ್ ಕಾಯ್ತಾ ಇದಾರೆ. ನೀನು ಇನ್ನು ಹೊರಡು, ವಿಶೂ ಬಗ್ಗೆ ಚಿಂತಿಸಬೇಡ. ಹಾಗೇ ನೀನು ಇಲ್ಲಿಂದ ಹೋದ ಮಾತ್ರಕ್ಕೆ ನಾವುಗಳು ದೂರವಾಗುವುದಿಲ್ಲ. ಇದು ನಿನ್ನ ತವರು ಮನೆ. ನೀನು ರಂಜಿನಿಯಂತೆ ಯಾವಾಗ ಬೇಕಾದರೂ ಬರುವ ಹಕ್ಕು ನಿನಗಿದೆ" ಎಂದು ವಿಶ್ವಾಸದಿಂದ ಅವಳ ಕೈಯನ್ನು ಹಿಡಿದು ಅಮುಕಿದ. ರಮಾ ಕಾರನ್ನು ಹತ್ತಿದಳು. ಅಲ್ಲಿದ್ದವರಿಗೆಲ್ಲಾ ಮನಸ್ಸಿಗೆ ಮಂಕು ಕವಿದಂತಾಗಿತ್ತು. ಹೀಗೆ ಈ ರೀತಿ ಒಂದು ದಿನವನ್ನು ತಾವು ಎದುರಿಸಬೇಕಾಗ ಬಹುದು ಎಂದು ಯಾರೂ ನಿರೀಕ್ಷಿಸಿರಲಿಲ್ಲ.

ಎಲ್ಲರೂ ಮನೆಗೆ ವಾಪಸ್ಸಾದರು.

ಎರಡು ದಿನಗಳ ಆಯಾಸ ಪರಿಹಾರ ಮಾಡಿಕೊಳ್ಳಲು ಎಲ್ಲರೂ ಮಲಗಿದ್ದರು. ವಾರದ ಹಿಂದೆ ತನ್ನ ಹೆಂಡತಿಯನ್ನು ನೋಡಲು ಹೋಗಿದ್ದ ಮಹೇಶ ಹಿಂತಿರುಗಿದ್ದ. ಅವನ ಹೆಂಡತಿಗೆ ಹೆರಿಗೆಯಾಗಿತ್ತು. ಆಪ್ತ ಸ್ನೇಹಿತನ ಮದುವೆಗೆ ಬರಲಾಗಿರಲಿಲ್ಲ. ಶ್ರೀಕಾಂತನ ಕೈ ಕುಲುಕಿನಿಶ್ ಮಾಡಿ, ಆಕ್ಷೇಪಣೆಯನ್ನು ಮಾಡಿದ. ಮರೆಯದೇ ಕ್ಯಾಮರಾವನ್ನು ತಂದಿದ್ದ. ಬಸ್ ಸ್ಟ್ಯಾಂಡ್‌ನಿಂದ ಸೀದಾ ಇವರ ಮನೆಗೆ ಬಂದಿದ್ದ.

ಶ್ರೀಕಾಂತನನ್ನು ಕಂಡೊಡನೆ "ಅಂತೂ ನನ್ನನ್ನು ಮರೆತು ಮದುವೆಯಾಗಿ ಬಿಟ್ಟೆಯಲ್ಲಾ? ಎಲ್ಲಿ ವಸುಧಾ ಕರಿ. ವಿಶ್ ಮಾಡಬೇಕು" ಎಂದ.

ಮಲಗಿದ್ದ ವಸುಧಾ ಯಾವಾಗಲೋ ಎದ್ದು ಹೋಗಿದ್ದಳು. ವಿಶೂನೂ ಕಾಣಲಿಲ್ಲ. ಶ್ರೀಕಾಂತ ಗಾಬರಿಗೊಂಡ. ಇಬ್ಬರೂ ಮನೆಯ ಹೊರಗೆ ಒಳಗೆ ಎಲ್ಲಿ ಹುಡುಕಿದರೂ ಇಬ್ಬರೂ ಕಾಣಲಿಲ್ಲ. ಅಡಿಗೆ ಮನೆಯಿಂದ ಏನೋ ಪರ ಪರ ಸದ್ದು ಕೇಳಿ ಇಬ್ಬರೂ ಬಗ್ಗಿ ನೋಡಿದರು. ಉಗ್ರಾಣದಲ್ಲಿ ಒಂದು ಚಾಪೆ ಹಾಕಿಕೊಂಡು ವಸುಧಾ, ತನ್ನ ಮುಂದೆ ವಿಶೂನ ಕೂರಿಸಿಕೊಂಡು, ಪ್ಲ್ಯಾಸ್ಟಿಕ್ ಕವರುಗಳಲ್ಲಿದ್ದ ಪುರಿ ಉಂಡೆಗಳನ್ನು ತೆಗೆದು ಪುಡಿ ಮಾಡಿ ವಿಶೂಗೂ ತಿನ್ನಿಸಿ ತಾನೂ ತಿನ್ನುತ್ತಿದ್ದಳು. ಶ್ರೀಕಾಂತ ಪೆಚ್ಚಾದ.

ಮಹೇಶನಿಗೆ ನಗು ತಡೆಯಲಾಗಲಿಲ್ಲ. ಗೊಳ್ಳನೆ ನಕ್ಕುಬಿಟ್ಟ. ಬೆಚ್ಚಿಬಿದ್ದ ವಸುಧಾ, ತಿರುಗಿ ನೋಡಿದಳು. ಬಾಯಿ ತುಂಬಾ ಪುರಿ ತುಂಬಿಕೊಂಡಿದ್ದರಿಂದ ಕೆನ್ನೆಗಲ್ಲಗಳು ಉಬ್ಬಿದ್ದವು. ಕೈಯಲ್ಲಿದ್ದ ಉಂಡೆಗಳು ಪುಡಿಯಾಗಿದ್ದವು. ಮಹೇಶ ಮೆಲ್ಲಗೆ ತನ್ನ ಕ್ಯಾಮೆರಾ ತೆಗೆದು ಕ್ಲಿಕ್ ಎನಿಸಿದ. ಮಗುವಿನೊಂದಿಗೆ ಮಗುವಾಗಿದ್ದಳು ವಸುಧಾ.

"ಏಯ್ ವಿಶೂ ಬಾಯಿಲ್ಲಿ" ಶ್ರೀಕಾಂತ ಕರೆದ. ಅವನು ಎದ್ದ ನಂತರ ವಸುಧಾ ತಾನೂ ಎದ್ದು ನಿಂತು ಬಟ್ಟೆ ಕೊಡವಿಕೊಂಡಳು. ಮಹೇಶ ಮತ್ತೆ ಕ್ಲಿಕ್ ಎನಿಸಿದ. ಅವಳ ಮುಗ್ಧತೆ ಅವನನ್ನು ಆಕರ್ಷಿಸಿತ್ತು.

"ಏಯ್ ಸಾಕೋ..... ಮದುವೇಲಿ ಫೋಟೋ ತೆಗೀಲಿಲ್ಲ ಅಂತ ಈಗ ಎಷ್ಟು ತೆಗೀತೀಯ......" ಸ್ನೇಹದ ಅತಿರೇಕವನ್ನು ತಡೆದ.

"ಇರಲಿ ಬಿಡೋ. ಚೆನ್ನಾಗಿರುತ್ತೆ. ನನ್ನ ಸ್ಟುಡಿಯೋದಲ್ಲಿ ಹಾಕ್ತೀನಿ. ಈ ಹೊಸ ಫೋಟೋಗಳನ್ನು..... ಹೋಗಿ ನೀವಿಬ್ರೂ ಚೆನ್ನಾಗಿ ಡ್ರೆಸ್ ಮಾಡ್ಕೊಂಡು ಬನ್ನಿ. ಇನ್ನಷ್ಟು ಫೋಟೋ ತೆಗಿತೀನಿ" ಅಂದ.

ತಾನೂ ಅಲ್ಲೇ ಕೂತು, ಮದುವೆ ಮನೆಯ ತಿಂಡಿಗಳನ್ನು ತಿಂದ. ಸ್ವಲ್ಪ ಹೊತ್ತಿನಲ್ಲೇ ಶ್ರೀಕಾಂತ ವಸುಧಾ ಇಬ್ಬರೂ ಚೆನ್ನಾಗಿ ಡ್ರೆಸ್ ಮಾಡಿಕೊಂಡು ಬಂದು ನಿಂತರು. ಉಳಿದವರೂ ಎದ್ದು ಬಂದಿದ್ದರು. ಇನ್ನೇನು ಕ್ಯಾಮೆರಾ ಕ್ಲಿಕ್ ಎನ್ನಿಸುವಾಗ, 'ಶ್ರೀಕಾಂತ ತಡೀ ತಡೀ ಎನ್ನುತ್ತಾ ಅಲ್ಲಿ ಕೂತಿದ್ದ ವಿಶೂನ ಎತ್ತಿಕೊಂಡು ಹೂಂ. ಈಗ ತೆಗಿ' ಅಂತಂದ. ಯಾರೂ ಬೇಡ ಎನ್ನಲಿಲ್ಲ.

ಶ್ರೀಕಾಂತ ವಸುಧಾಳನ್ನು ತಬ್ಬಿ ಹಿಡಿದು, ವಿಶೂನ ಮುದ್ದಿಸುತ್ತಾ ನಿಂತ. ಮಹೇಶ ಕ್ಲಿಕ್ ಹೊಡೆದು "ಥ್ಯಾಂಕ್ ಯೂ" ಅಂತಂದ.

* * * * *

# ಹೊಸ ಪ್ರಕಟಣೆಗಳು

೧. ಬಾಳೆಂಬ ಕಡಲಲ್ಲಿ........–ಪ್ರೊ॥ಗಾಯತ್ರಿಮೂರ್ತಿ–ಕಾದಂಬರಿ ರೂ. 36

೨. ಕಸ್ತೂರಿ ಮೃಗ–ಡಾ॥ ಮ.ಸು.ಕೃಷ್ಣಮೂರ್ತಿ– ಕಾದಂಬರಿ ರೂ. 45

೩. ಬೆಟ್ಟಕೆ ಚಳಿಯಾದಡೆ–ಡಾ॥ಮ.ಸು.ಕೃಷ್ಣಮೂರ್ತಿ–ಕಥಾಸಂಕಲನ ರೂ. 36

೪. ಪುನರಾಗಮನ– ಡಾ॥ಮ.ಸು.ಕೃಷ್ಣಮೂರ್ತಿ–ಕಥಾಸಂಕಲನ ರೂ. 36

೫. ಕುತೂಹಲ ವಿಜ್ಞಾನ –ಡಾ॥ ಎ.ಹೆಚ್.ಶಿವಾನಂದ–ವಿಜ್ಞಾನ ರೂ. 45

೬. ಗೀತಾ ತತ್ವಾರ್ಥಸಾರ –ಲಕ್ಷ್ಮೀನಾರಾಯಣನ್–ತತ್ವಶಾಸ್ತ್ರ ರೂ. 48

೭. ಪ್ರೀತಿಯ ಗೆಲವು–ಪ್ರೊ॥ ಗಾಯತ್ರಿಮೂರ್ತಿ–ಮಕ್ಕಳ ಕಾದಂಬರಿ ರೂ. 25

೮. ಆಕಾಶಗಂಗೆ– ಡಾ॥ ಎ.ಹೆಚ್.ಶಿವಾನಂದ – ವಿಜ್ಞಾನ ರೂ. 12

೯. ಮಾಹೇಶ್ವರ ಮಹಿಮೆ – ಸುಲೋಚನಾ ಶಾಸ್ತ್ರಿ–ಧಾರ್ಮಿಕ ರೂ. 25

೧೦. ಪ್ರೀತಿವಾಹಿನಿ– ಡಿ ಎಲ್ ವಿಜಯಕುಮಾರಿ–ಕಾದಂಬರಿ ರೂ. 48

೧೧. ಜಾನಪದ ಗೀತೆಗಳು–ಸುಗಂಧ ರಾಣಿ ರೂ. 20

೧೨. ಸಂತ ನರಸೀ ಮೆಹತಾ–ಡಾ॥ಮ.ಸು.ಕೃಷ್ಣಮೂರ್ತಿ–ಜೀ.ಚ. ರೂ. 40

೧೩. ಚತುರ್ಮುಖ–ಕಾದಂಬರಿ–ಡಾ॥ಮ.ಸು.ಕೃಷ್ಣಮೂರ್ತಿ ರೂ. 36

೧೪. ಸಮುದ್ರ ಸಂಗಮ–ಡಾ॥ಮ.ಸು.ಕೃಷ್ಣಮೂರ್ತಿ ರೂ. 96

೧೫. ಮಧುರ ಮೋಹನ–ಪದ್ಮಾ ಶ್ರೀಧರ್–ಕಾದಂಬರಿ ರೂ. 48

೧೬. ಮುಖವಾಡ–ಪದ್ಮಾ ಶ್ರೀಧರ್–ಕಾದಂಬರಿ ರೂ. 58

೧೭. ಬೇರು ಮುರಿದ ಮರ– ವಿಜಯ ಚಂದ್ರಮೌಳೀಶ್ವರ–ಕಾ. ರೂ. 45

೧೮. ಶುಭೋದಯ– ವಿಜಯ ಚಂದ್ರಮೌಳೀಶ್ವರ–ಕವನ ಸಂ. ರೂ. 20

೧೯. ಅಧ್ಯಾತ್ಮ ವಾಹಿನಿ– ಪ್ರೊ॥ ಡಿ.ಎಲ್.ಪಾಟೀಲ್ ರೂ. 120

೨೦. ಶರಣರ ನಾಟಕಗಳು– ಸಿಂಧೂರಿ ರೂ. 36

೨೧. ಭಾವತರಂಗ– ಸಿಂಧೂರಿ – ಕವನ ಸಂಕಲನ ರೂ. 20

೨೨. ಎರಡು ಒರಿಯಾ ನಾಟಕಗಳು–ಪರಮೇಶ ರೂ. 40

೨೩. ಸೌಂದರ್ಯಮಿಮಾಂಸೆ – ಪ್ರೊ॥ ಡಿ.ಎಲ್.ಪಾಟೀಲ್ ರೂ. 40

೨೪. ಪಾರ ಭವಿಷ್ಯ– ಸಿಂಧೂರಿ–ನಾಟಕ ರೂ. 16

೨೫. ನಿತ್ಯ ಬಳಕೆಯ ನೀರು–ಶೋಭಾ ಪಾಟೀಲ್– ವಿಜ್ಞಾನ ರೂ. 36

೨೬. ನಿಂತು ನೋಡುವೆ ಅವುಗಳತ್ತಲೆ– ಟಿ.ಆರ್. ರಾಧಾಕೃಷ್ಣ ರೂ. 48

೨೭. ಚೈತ್ರ ಪಲ್ಲವ– ಮ.ಸು. ಕೃಷ್ಣಮೂರ್ತಿ ರೂ. 48

೨೮. ಉಮಾ– ಹೆಚ್. ಎಸ್. ಕಾತ್ಯಾಯನಿ ರೂ. 48

೨೯. ತರಂಗಿಣಿ (ಕವನ ಸಂಕಲನ)– ಎ.ಹೆಚ್. ಯಶೋಧ ರೂ. 20

೩೦. ಶ್ರೀಸಾಮಾನ್ಯರು ಮತ್ತು ಶ್ರೀಮಾತೆಯವರು–ಶೋಭಾ ರೂ. 20

೩೧. ಪರಮಾಣು ಶಕ್ತಿ ಬೇಕೇ?–ಡಾ॥ ಎ.ಹೆಚ್.ಶಿವಾನಂದ ರೂ. 48

೩೨. ಜಾಜಿಯ ಕಂಪು–ಶ್ರೀ ವೆಂಕಟನಾರಾಯಣ(ಮನಚನ್ನ) ರೂ. 40

೩೩. ಗುರುದಕ್ಷಿಣೆ (ಕಥಾ ಸಂಕಲನ)–ಪದ್ಮಾ ಶ್ರೀಧರ್ ರೂ. 48

೩೪. ಮನೋವೀಣೆ (ಕಾದಂಬರಿ)–ಡಾ॥ ಜಿ.ಪಿ.ದಾಸೇಗೌಡ ರೂ. 58

೩೬. ಜೀವನರಾಗ (ಕಾದಂಬರಿ)–ಶ್ಯಾಮಲಮೂರ್ತಿ ರೂ. 80
೩೭. ಹೆಜ್ಜೆಗಳು (ಕಥಾ ಸಂಕಲನ)–ಶ್ಯಾಮಲಮೂರ್ತಿ ರೂ. 80
೩೮. ಸಂಧ್ಯಾ ಸಂತಸ (ಕಾದಂಬರಿ)–ಶ್ರೀ ವೆಂಕಟನಾರಾಯಣ ರೂ. 48
೩೯. ಬಾಳಿಗೊಂದು ದಾರಿ–ಡಾ|| ಎ.ಹೆಚ್.ಶಿವಾನಂದ ರೂ. 48
೪೦. ನಮನ–ಎ.ಹೆಚ್.ಯಶೋಧ (ಕವನ ಸಂಕಲನ) ರೂ. 20
೪೧. ಕದಳಿ ಧಾರೆ–ಎ.ಹೆಚ್.ಯಶೋಧ (ವಚನ ಸಂಗ್ರಹ) ರೂ. 20
೪೨. ಜವನ ರಹಸ್ಯ–'ಸಿಂಧೂರಿ'(ಕಾದಂಬರಿ) ರೂ. 80
೪೩. ಆನಂದಸಿಂಧು (ವಚನ ಸಂಕಲನ)–ಅನ್ನಪೂರ್ಣ ರೂ. 20
೪೪. ಉತ್ಸವಮಾಲೆ (ಕವನ ಸಂಕಲನ)–ಸೀತಾ ರಾಮಚಂದ್ರ ರೂ. 40
೪೫. ಭಾವನಾಂತರಂಗ(ಕಥಾ ಸಂಕಲನ)– ಬಿ.ಬಿ.ಶಿವಣ್ಣ ರೂ. 80
೪೬. ಕನಸು–ನನಸು (ಕವನ ಸಂಕಲನ)–ಬಿ.ಬಿ.ಶಿವಣ್ಣ ರೂ. 40
೪೭.* ಜನನಿ ಜನ್ಮಭೂಮಿಶ್ಚ (ನಾಟಕ)–ಎಸ್.ಜಿ.ಶಿವಶಂಕರ್ ರೂ. 24
೪೮.*ಇವ್ರು ಅವ್ರೇ ಅಲ್ಲವೇ (೪–ನಾಟಕ)–ಎಸ್.ಜಿ.ಶಿವಶಂಕರ್ ರೂ. 24
೪೯.* ಸರ್ಪ ಮಕುಟ(೨–ನಾಟಕಗಳು)–ಎಸ್.ಜಿ.ಶಿವಶಂಕರ್ ರೂ. 24
೫೦. ಉತ್ತರವಿಲ್ಲದ ಪ್ರಶ್ನೆಗಳು(ಕಾದಂಬರಿ)–ಎಸ್.ಜಿ.ಶಿವಶಂಕರ್ ರೂ. 80
೫೧. ಡಾಂಬರಿನ ಹೂವು!(ಕವನ ಸಂಕಲನ)–ಎಸ್.ಜಿ.ಶಿವಶಂಕರ್ರೂ. 40
೫೨. ನಭೋಮಂಡಲದಲ್ಲಿ ಒಂದು ಸಂಜೆ–ಎ.ಹೆಚ್.ಯಶೋಧ ರೂ. 20
೫೩. ನಂದಾದೀಪ(ಕವನ ಸಂಕಲನ)– ವಿಜಯ ಚಂದ್ರಮೌಳೀಶ್ವರರೂ. 36
೫೪. ಚುಕ್ಕೀಸೀರೆ(ಕಥಾ ಸಂಕಲನ)– ವಿಜಯ ಚಂದ್ರಮೌಳೀಶ್ವರ–ರೂ. 80
೫೫. ಮಕ್ಕಳ ಅಕ್ಕ–ಮ.ಸು. ಕೃಷ್ಣಮೂರ್ತಿ ರೂ. 20
೫೬. ವೈಶಾಖ ಪ್ರಭ– ಮ.ಸು. ಕೃಷ್ಣಮೂರ್ತಿ ರೂ. 48
೫೭. ಜ್ಯೇಷ್ಠ ಕುಸುಮ–ಮ.ಸು. ಕೃಷ್ಣಮೂರ್ತಿ ರೂ. 48
೫೮. ಒಂಟಿ ಸಲಗ–ಮ.ಸು. ಕೃಷ್ಣಮೂರ್ತಿ ರೂ. 60
೫೭. ಹೆಣ್ಣು ಮತ್ತು ರೂಪ–ಪ್ರೊ|| ಡಿ.ಎಲ್. ಪಾಟೀಲ್ ರೂ. 96
೫೮. ಕಂಪು–(ಕವನ ಸಂಕಲನ)–ನಾಗರತ್ನ ಹೆಮ್ಮಿಗೆ ರೂ. 32
೫೯. ಒಡೆಸ್ಸಾ–ಕಾದಂಬರಿ–ಅನು. ಸಂತೋಷ ಕುಮಾರ್ ರೂ. 80
೬೦. ಸಪ್ತಕೂಟ–ಕಾದಂಬರಿ–ಅನು. ಸಂತೋಷ ಕುಮಾರ್ ರೂ. 120
೬೧. ಆಸ್ಫೋಟ––ಕಾದಂಬರಿ–ಅನು. ಸಂತೋಷ ಕುಮಾರ್ ರೂ. 80
೬೨. ಉತ್ಸವಮಾಲೆ–(ಕವನ ಸಂಕಲನ)–ಸೀತಾರಾಮಚಂದ್ರ ರೂ. 40
೬೩. ಹೂಗೊಂಚಲು–(ಕವನ ಸಂಕಲನ)–ಸೀತಾರಾಮಚಂದ್ರ ರೂ. 40
೬೪. ಬಣ್ಣದಹಕ್ಕಿ–(ಕಥಾ ಸಂಕಲನ)–ಸೀತಾಗಾಮಚಂದ್ರ ರೂ. 40
೬೫. ಅರುಣೋದಯದ ನಾಡಿನಲ್ಲಿ–ಪ್ರವಾಸ--ಪದ್ಮಾ ಶ್ರೀಧರ್ ರೂ. 56
೬೬. ಆಸರೆಯ ಬೇಡಿ–ಕಾದಂಬರಿ–ಪದ್ಮಾ ಶ್ರೀಧರ್ ರೂ. 80
೬೭. ಹೊಸದಿಗಂತ–ಕಾದಂಬರಿ– ವೆಂಕಟನಾರಾಯಣ(ಮನಚನ್ನ) ರೂ. 36
೬೮. ತಾಪತ್ರಯ ಮತ್ತು ವರಿ– ವೆಂಕಟನಾರಾಯಣ(ಮನಚನ್ನ) ರೂ. 80

* ಅಚ್ಚಿನಲ್ಲಿ

# ಆಸರೆಯು ಬೇಡಿ

' ಮಂಗಳಾ ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು ಅನೇಕ ಓದುಗರ ಮೆಚ್ಚುಗೆಯನ್ನು ಪ್ರಶಂಸೆಯನ್ನು ಗಳಿಸಿ ಇದೀಗ, ' ಆಸರೆಯು ಬೇಡಿ ' ಪುಸ್ತಕ ರೂಪದಲ್ಲಿ ಪ್ರಕಟಗೊಳ್ಳುತ್ತಿದೆ.

ಇದರಲ್ಲಿ ಬರುವ ಪಾತ್ರಗಳಲ್ಲಿ ಕೆಲವು ನಾನು ಸ್ವಂತವಾಗಿ ಕಂಡಿದ್ದು. ಅವರು ಬದುಕಿದ್ದಷ್ಟೂ ಕಾಲವೂ ನಮಗೆಲ್ಲಾ ಆತ್ಮೀಯ ರಾಗಿದ್ದವರು. ಅವರನ್ನು ನಾವು ಎಂದಿಗೂ ಮರೆಯುವಂತೆಯೇ ಇಲ್ಲ. ಕಲಾ ಕುಶಲತೆಗಳಲ್ಲಿ, ಅಡಿಗೆ ಕೆಲಸಗಳಲ್ಲಿ ಜಾಣರಾಗಿದ್ದರು. ಬಾಲ ವಿಧವೆಯಾಗಿ, ತಮ್ಮ ಆಸೆ ಆಕಾಂಕ್ಷೆಗಳನ್ನು ತಮ್ಮಲ್ಲೇ ಹುದುಗಿಟ್ಟುಕೊಂಡು, ಅಣ್ಣ ತಮ್ಮಂದಿರ ಮನೆಯಲ್ಲಿ ತಮ್ಮ ಬಾಳನ್ನು ಸವೆಸಿದವರ ಮನೋರಂಗದಲ್ಲಿ ಏನೇನು ಅಡಗಿದ್ದವು ಎನ್ನುವುದು ಯಾರಿಗೂ ತಿಳಿಯದು. ಸಂಪ್ರದಾಯಸ್ಥರ ಮನೆಯಲ್ಲಿ ಹುಟ್ಟಿದವರಾಗಿದ್ದ ಅವರಿಗೆ ಯಾವ ಸ್ವತಂತ್ರವೂ ಇರಲಿಲ್ಲ. ಅವರ ಮನೋ ಸ್ಥಿತಿ ಹೇಗಿರಬಹುದು ಅಂತ ಯಾರಿಂದಲೂ ಊಹಿಸಲು ಸಾಧ್ಯವಿಲ್ಲ.

ಆದರೂ ಕಾಲ ಬದಲಾಗಿದ್ದರೂ, ವಿಧವಾ ವಿವಾಹ ಸುಲಭವಲ್ಲ. ವಿಧುರನಿಗೆ ಎಷ್ಟೇ ಸುಲಭದಲ್ಲಿ ಮರು ಮದುವೆ ಆಗುತ್ತದೋ, ಅಷ್ಟೇ ಸಮಸ್ಯೆಗಳು ಉದ್ಭವವಾಗುತ್ತವೆ ವಿಧವೆಯ ಮದುವೆಯ ಸಮಯದಲ್ಲಿ.

ಈ ವಿಷಯವನ್ನು ಆಧಾರವಾಗಿಟ್ಟುಕೊಂಡು, ನಾನು ಕೇಳಿದ ಕಂಡ ಪಾತ್ರಗಳನ್ನು ಕಣ್ಣಮುಂದೆ ತಂದುಕೊಂಡು, ಈ ಕಾದಂಬರಿಯನ್ನು ಬರೆಯುವ ಪ್ರಯತ್ನ ಮಾಡಿದ್ದೇನೆ. ಪಾತ್ರಗಳನ್ನು ಕಲ್ಪನೆಯ ಮೆರುಗಿನಲ್ಲಿ ಹೊರಳಿಸಿ, ಅರಳಿಸಿ, ಒಂದು ಆವರಣದ ಚೌಕಟ್ಟಿನೊಳಗೆ ರಚಿಸಿ, ' ಆಸರೆಯು ಬೇಡಿ ' ಎಂದು ನಾಮಕರಣ ಮಾಡಿ, ಓದುಗರ ಮುಂದೆ ಇಟ್ಟೆ.

ಸ್ತ್ರೀಯರು ಸ್ವತಂತ್ರವಾಗಿರಲು ಸಾಧ್ಯವಿಲ್ಲ. ಆಸರೆಯ ಅಗತ್ಯ ಬೇಕೇ ಬೇಕು ಎಂಬ ಅರ್ಥವಲ್ಲ. ಕೆಲವು ಕಾರಣಗಳು, ಕೆಲವು ಆಸೆಗಳು, ಆಸರೆಯನ್ನು ಅಪೇಕ್ಷಿಸುತ್ತವೆ. ಆ ನಿಟ್ಟಿನಲ್ಲಿ ಬರೆದ ಕಾದಂಬರಿ ಇದು.

ಬೆಂಗಳೂರು — ಪದ್ಮಾ ಶ್ರೀಧರ್

ಮಂಜುಶ್ರೀ ಪ್ರಕಾಶನ, ಮೈಸೂರು. ರೂ.